# ಕರ್ನಾಟಕ ಭಾಷಾಭೂಷಣಂ ಮತ್ತು ಆಂಧ್ರ ಭಾಷಾಭೂಷಣಮು ಒಂದು ತೌಲನಿಕ ಅಧ್ಯಯನ

ಟಿ. ಶಂಭುಲಿಂಗಪ್ಪ

**ಚಿತ್ರದುರ್ಗ ಪ್ರಕಾಶನ**

ಚಿತ್ರದುರ್ಗ - ೫೭೭ ೫೦೧

**Karnataka Bhasha Bhooshanam Mattu Andra Bhasha Bhooshanamu - Ondu Toulanika Adhyayana** - A Doctoral Thesis Written by - Dr. T. Shambhulingappa, Professor of Kannada, S.J.M. College, Chitradurga - 577 501 (Karnataka). Published by: Chitradurga Prakashana, 2nd Cross, Venkateshwarapura Extention, Chitradurga-577 501

Pages : XVI+311 Price : Rs. 100/-

"THIS BOOK IS PUBLISHED WITH THE FINANCIAL ASSISTENCE OF TIRUMALA TIRUPATI DEVASTHANAMS UNDER THIER SCHEME AID TO PUBLISH RELIGIOUS BOOKS."





ಪ್ರಥಮ ಮುದ್ರಣ : ಜುಲೈ, ೧೯೯೯

ಬೆಲೆ : ರೂ. ೧೦೦/-

ರಕ್ಷಾಪತ್ರ ವಿನ್ಯಾಸ : ಶ್ರೀ ಮೋನಪ್ಪ



**ಛಾಯಾಕ್ಷರ ಜೋಡಣೆ :**
ವರ್ಷಿಣಿ ಗ್ರಾಫಿಕ್ಸ್, ಬೆಂಗಳೂರು-೪೦ ✆ : 3402575

**ಮುದ್ರಣ :**
ಸ್ನೇಹಾ ಪ್ರಿಂಟರ್ಸ್
೨೨, ೨ನೇ ಮೈನ್, ಅತ್ತಿಗುಪ್ಪೆ
ವಿಜಯನಗರ ೨ನೇ ಹಂತ, ಬೆಂಗಳೂರು-೪೦ ✆ : 3302417

# ನನ್ನ ನುಡಿ

ನಾಗವರ್ಮನ 'ಕರ್ಣಾಟಕ ಭಾಷಾಭೂಷಣಂ' ಮತ್ತು ಕೇತನನ 'ಆಂಧ್ರ ಭಾಷಾಭೂಷಣಮು' - ಈ ಎರಡೂ ಪ್ರಾಚೀನ ವ್ಯಾಕರಣ ಗ್ರಂಥಗಳು; ಕನ್ನಡ ಮತ್ತು ತೆಲುಗು ಭಾಷೆಗಳ ಆದ್ಯ ವ್ಯಾಕರಣ ಕೃತಿಗಳು. ಇವೆರಡರ ತೌಲನಿಕ ಅಧ್ಯಯನ ನಮ್ಮಲ್ಲಿ ಸ್ವಲ್ಪವೂ ನಡೆಯದೇ ಇರುವುದು ಖೇದದ ಸಂಗತಿ! ಇವುಗಳ ಬಗ್ಗೆ ಸಾಕಷ್ಟು ಕೆಲಸವಾಗಬೇಕಾಗಿದೆ. ನಾನು ಇದನ್ನೇ ಮಹಾಪ್ರಬಂಧದ 'ಉದ್ದೇಶ ಮತ್ತು ವ್ಯಾಪ್ತಿ' ಎಂಬಲ್ಲಿ ವ್ಯಕ್ತಪಡಿಸಿರುತ್ತೇನೆ.

ಕನ್ನಡದಲ್ಲಿ 'ನಾಗವರ್ಮ'ರ ಬಗ್ಗೆ ಇನ್ನೂ ಸಂಶಯಗಳಿವೆ! ನಮ್ಮಲ್ಲಿ ಮೊದಲನೆಯ ನಾಗವರ್ಮ, ಎರಡನೆಯ ನಾಗವರ್ಮ, ಮೂರನೆಯ ನಾಗವರ್ಮ ಎಂದು ಮೂವರು ನಾಗವರ್ಮರು ಇದ್ದಾರೆ ಎಂದು ವಿದ್ವಾಂಸರ ಅಂಬೋಣ. ನಾಗವರ್ಮರ ಸಮಸ್ಯೆ ಜಟಿಲವಾದುದು! ಅದರಲ್ಲು ನನ್ನೀ ಮಹಾಪ್ರಬಂಧದ ಕರ್ತೃ ಎರಡನೆಯ ನಾಗವರ್ಮನ ದೇಶ, ಕಾಲ, ಮತ - ಇವುಗಳಲ್ಲು ಸಂಶಯಗಳಿವೆ. ಇತ್ತೀಚೆಗೆ ದೊರೆತ 'ವರ್ಧಮಾನ ಪುರಾಣ' (ಕ್ರಿ.ಶ. ೧೦೪೨) ಎಂಬ ಕೃತಿಯಿಂದ ಕೆಲವೊಂದು ಸಮಸ್ಯೆಗಳು ಬಗೆ ಹರಿದಿವೆ. ಎರಡನೆಯ ನಾಗವರ್ಮನೆ ಪ್ರಸ್ತುತ 'ಕರ್ಣಾಟಕ ಭಾಷಾಭೂಷಣಂ' ಕೃತಿಯ ಕರ್ತೃ. ಅಲ್ಲದೆ ಕಾವ್ಯಾವಲೋಕನ ಎಂಬ ಕೃತಿಯೂ ಅವನದೇ ಎಂದು ನಾನು ಒಂದು ತೀರ್ಮಾನಕ್ಕೆ ಬಂದಿದ್ದೇನೆ. ಇದರ ಬಗ್ಗೆ ಈ ಹಿಂದೆ ಸಾಕಷ್ಟು ಚರ್ಚೆ ನಡೆದಿದೆ. ನಾನು ಈಗ ಬಹುತೇಕ ವಿದ್ವಾಂಸರ ಅಭಿಪ್ರಾಯಗಳಿಂದಲೂ, ಇತ್ತೀಚೆಗೆ ಉಪಲಬ್ಧವಾದ ವರ್ಧಮಾನ ಪುರಾಣ ಗ್ರಂಥದ ಆಧಾರದಿಂದಲೂ ಎರಡನೆಯ ನಾಗವರ್ಮನೆ ನನ್ನೀ ಮಹಾ ಪ್ರಬಂಧದ ಕರ್ತೃ ಎಂದು ತೀರ್ಮಾನಕ್ಕೆ ಬಂದಿದ್ದೇನೆ. ಆದರೂ ಅದಕ್ಕಾಗಿ ಹೆಚ್ಚಿನ ಸಂಶೋಧನೆಗೆ ಹೋಗಿಲ್ಲ. ಕಾರಣ ನನ್ನ ಪ್ರಬಂಧದ ವಸ್ತು ಅದಲ್ಲ. ಎರಡೂ ವ್ಯಾಕರಣಗಳ ಒಂದು ತೌಲನಿಕ ಅಧ್ಯಯನವಾದುದರಿಂದ 'ನಾಗವರ್ಮ'ರ ಸಮಸ್ಯೆಗೆ ಹೆಚ್ಚು ಒತ್ತು ಕೊಡಲಿಲ್ಲ. ಆದರೂ ಇದರ ಬಗ್ಗೆ ಸುದೀರ್ಘವಾಗಿ ಹಲವಾರು ವಿದ್ವಾಂಸರ ಅಭಿಪ್ರಾಯಗಳನ್ನು ಕ್ರೋಢೀಕರಿಸಿ ಒಂದು ನಿಲುವಿಗೆ ಬಂದಿದ್ದೇನೆ. ಇದರ ಬಗ್ಗೆ ಮಹಾಪ್ರಬಂಧದಲ್ಲಿ ಉಲ್ಲೇಖಿಸಿರುತ್ತೇನೆ. ಇಷ್ಟಾದರೂ ನಾಗವರ್ಮನ ಬಗ್ಗೆ ಇನ್ನೂ ಸಂಶಯಗಳು ಕಂಡು ಬಂದರೆ ಸಂಶೋಧನೆಯ ಬಾಗಿಲು ತೆರದಿದೆ; ಯಾರಾದರೂ ಪ್ರವೇಶಿಸಬಹುದು. ಈ ವಿಷಯದಲ್ಲಿ 'ಇದಮಿತ್ಥಂ' ಎಂಬುವನು ನಾನಲ್ಲ.

ನಾನು ವಸ್ತುತಃ ಶಾಸ್ತ್ರೀಯ ವಿಷಯಗಳ ವಿದ್ಯಾರ್ಥಿಯಾಗಿದ್ದೆ. ನನಗೆ ಭಾಷೆ, ವ್ಯಾಕರಣ, ಛಂದಸ್ಸು ಎಂದರೆ ಬಹು ಇಷ್ಟವಾದ ವಿಷಯಗಳು. ಈ ಕಾರಣ ನನ್ನ ಎಂ.ಎ. ತರಗತಿಯಲ್ಲಿ ವಿಶೇಷವಾಗಿ ಕೇಶಿರಾಜನ ಶಬ್ದಮಣಿ ದರ್ಪಣಂ ಎಂಬ ಕೃತಿಯನ್ನು ಆರಿಸಿಕೊಂಡಿದ್ದೆ. ಅದರೊಂದಿಗೆ ಸಾಕಷ್ಟು ಹೋರಾಟ ನಡೆಸಿದೆ. ಅಧ್ಯಾಪಕನ ವೃತ್ತಿಯಲ್ಲಿ - ಹತ್ತು ವರ್ಷಗಳ ಪಾಠ ಪ್ರವಚನ ಮಾಡಿ - ಸಾಕಷ್ಟು ಅನುಭವ ಪಡೆದೆ. ತತ್ ಪರಿಣಾಮವಾಗಿ ೧೯೭೬ರಲ್ಲಿ ಕೇಶಿರಾಜನ ಶಬ್ದಮಣಿದರ್ಪಣಂ ಕೃತಿಯ ನಾಮ ಪ್ರಕರಣದ ಮೇಲೆ 'ಶಬ್ದಮಣಿದರ್ಪಣ ಸೂತ್ರಸಾರ' ಎಂಬ ಕೃತಿಯನ್ನು ಬರೆದೆ. ಆಗಾಗಲೆ ಹೆಚ್.ಎಸ್. ಬಿಳಿಗಿರಿಯವರ ಸಂಧಿ ಪ್ರಕರಣದ ಮೇಲೆ 'ಆಲೋಕ' ಪ್ರಕಟಗೊಂಡಿತ್ತು. ನನ್ನದು ಮುಂದಿನ ಪ್ರಕರಣ. ಅದು ನನಗೆ ಹೆಚ್ಚಿನ ಹೆಸರನ್ನು ತಂದುಕೊಟ್ಟಿತು. ನನ್ನ ಸ್ನೇಹಿತರು ತಮಾಷೆಗಾಗಿ ನನ್ನನ್ನು 'ಅಭಿನವ ಕೇಶಿರಾಜ' ಎಂದು ಕರೆಯುತ್ತಿದ್ದರು! ಅದು ನನಗೆ ಇನ್ನೂ ಹೆಚ್ಚು ಪ್ರೋತ್ಸಾಹ ನೀಡಿತು. ಮುಂದಿನ ಹೆಜ್ಜೆ ಈ ಮಹಾಪ್ರಬಂಧದ ಬರವಣಿಗೆ. ಇರಲಿ.

ನಾನು ಶಬ್ದಮಣಿದರ್ಪಣದಂತಹ ವ್ಯಾಕರಣ ಕೃತಿಯ ಮೇಲೆ ಸಂಶೋಧನೆ ಮಾಡಬೇಕೆಂದು ಒಮ್ಮೆ ಮೈಸೂರಿಗೆ ಹೋದೆ; ಮಾರ್ಗದರ್ಶಕರನ್ನು ಪಡೆಯಲು. ಅಲ್ಲಿ ಮಿತ್ರರಾದ ಡಾ. ಮಳಲಿ ವಸಂತಕುಮಾರ್‌ರೊಂದಿಗೆ ದಿವಂಗತ ಡಾ. ಹೆಚ್. ತಿಪ್ಪೇರುದ್ರಸ್ವಾಮಿಯವರನ್ನು (ಅಂದಿನ ಕನ್ನಡ ಅಧ್ಯಯನ ಕೇಂದ್ರದ ಮಾಜಿ ನಿರ್ದೇಶಕರು) ಕಂಡು ವಿಷಯ ಮುಂದಿಟ್ಟೆ. ಅವರು ತೆಲುಗು ವಿದ್ವಾಂಸರಾದ ಡಾ. ಆರ್.ವಿ.ಎಸ್. ಸುಂದರಂ ಎಂಬುವರ ಕಡೆ ಬೆರಳು ಮಾಡಿ ತೋರಿಸಿದರು. ಡಾ. ಸುಂದರಂರವರನ್ನು ಕಂಡು ವಿಷಯ ಪ್ರಸ್ತಾಪಿಸಿದೆ. ಅವರು "ಕನ್ನಡ-ತೆಲುಗು ಭಾಷೆಯ ಬಗ್ಗೆ ತೌಲನಿಕ ಅಧ್ಯಯನ ಹೆಚ್ಚಾಗಿ ನಡೆದಿಲ್ಲ ನೀವು ಮಾಡಿ" ಎಂದು ತಿಳಿಸಿ, ನನ್ನೀ ಮಹಾಪ್ರಬಂಧಕ್ಕೆ ಅವರೇ ಹೆಸರನ್ನು ಸೂಚಿಸಿ ಮುಂದೆ ಮಾರ್ಗದರ್ಶಕರಾದರು. ಇದೊಂದು ವಿಶೇಷ ಪುಣ್ಯವೆಂದು ಬಗೆದೆ.

ಡಾ. ಸುಂದರಂ ಸೂಚಿಸಿದ ವಿಷಯ 'ಕರ್ಣಾಟಕ ಭಾಷಾಭೂಷಣಂ ಮತ್ತು ಆಂಧ್ರ ಭಾಷಾಭೂಷಣಮು ಒಂದು ತೌಲನಿಕ ಅಧ್ಯಯನ' - ಇದು ನನಗೆ ಕುತೂಹಲ ಕೆರಳಿಸಿತು. ಕಾರಣ ಅಲ್ಲಿಯ 'ಭಾಷಾಭೂಷಣ' ಎಂಬ ಶಬ್ದ ಒಂದೇಯಾದುದು. ಎರಡೂ ಕೃತಿಗಳನ್ನು ಅವಲೋಕಿಸಿದೆ. ಆಶ್ಚರ್ಯ. ದೇಶ, ಮತ, ಇನ್ನಿತರ ಕೆಲವು ವಿಷಯಗಳಲ್ಲಿ ಸಾಮಿಪ್ಯ ಕಂಡುಬಂತು. ಇವೆರಡರ ಕರ್ತೃ ಒಂದೇ ಯಾಕಾಗಿರಬಾರದು ಎಂದು ಬಗೆದು ಸಂಶೋಧನೆಗೆ ಹೊರಟೆ. ಅದಕ್ಕಾಗಿ ಕ್ಷೇತ್ರ ಕಾರ್ಯ ನಡೆಸಿದೆ. ಪ್ರಯೋಜನವಾಗಲಿಲ್ಲ. ಹೆಚ್ಚಿನ ಸಂಶೋಧನೆಯ ಫಲ ಎರಡು ಕೃತಿಗಳ ಕರ್ತೃ ಭಿನ್ನ ಭಿನ್ನರೆಂದು ತಿಳಿದು ಬಂದಿತು. ನಿರಾಶೆಗೊಂಡೆ. ಆದರೇನು? ಈಗಾಗಲೇ ಸಂಶೋಧನೆಯ ಅರ್ಧದಾರಿ ನಡೆದಿದ್ದೆ. ಇನ್ನುಳಿದ ಅರ್ಧದಾರಿ ಎರಡು

ಭಾಷೆಯ ವ್ಯಾಕರಣಾಂಶಗಳ ಬಗ್ಗೆಯಾಗಿತ್ತು. ಸರಿ. ಅದನ್ನೂ ಮಾಡಿ ಮುಗಿಸಿದೆ. ಇದು ನಾನು ಸಂಶೋಧನೆ ಕೈಗೊಂಡ ಹಿನ್ನೆಲೆ.

ನಾನು ಮಾಡಿದ್ದು ಒಪ್ಪೊತ್ತಿನ ಸಂಶೋಧನೆ. ಸಂಶೋಧನೆಗೆ ಆರು ವರ್ಷಗಳ ಕಾಲವನ್ನು ತೆಗೆದುಕೊಂಡೆ. ಕಾಲೇಜಿನಲ್ಲಿ ಪಾಠ-ಪ್ರವಚನ ಮಾಡುತ್ತಾ ಆಗಾಗ ಮೈಸೂರಿಗೆ ಹೋಗಿ ಮಾರ್ಗದರ್ಶಕರೊಂದಿಗೆ, ಚರ್ಚಿಸಿ, ಪುನಃ ದುರ್ಗಕ್ಕೆ ಬಂದು ಪ್ರಬಂಧವನ್ನು ಬರೆಯಲು ತೊಡಗುತ್ತಿದ್ದೆ. ತುಂಬ ನೀರಸವಾದುದು. ಕೆಲವೊಮ್ಮೆ ನಿಲ್ಲಿಸಬೇಕೆಂಬ ಅಭಿಪ್ರಾಯವೂ ಬರುತ್ತಿತ್ತು! ಆದರೂ ಮತ್ತೆ ಅಭಿರುಚಿ ಬೆಳಸಿಕೊಂಡು ಮುಂದುವರಿಸಿದೆ. ಸಂಶೋಧನೆಯ ಕೊನೆಯ ದಿವಸಗಳಲ್ಲಿ ಮೈಸೂರಿನಲ್ಲೇ ಇದ್ದು, ಬರೆದು ಮುಗಿಸಿಯೇ ಬಿಟ್ಟೆ. ೧೯೯೦ರಲ್ಲಿ ಮೈಸೂರು ವಿಶ್ವವಿದ್ಯಾನಿಲಯದಿಂದ ಡಾಕ್ಟರೇಟ್ ಪದವಿ ಪಡೆದಾಗ ತುಂಬಾ ಸಂತೋಷಪಟ್ಟೆ. ಅಷ್ಟೊತ್ತಿಗೆ ಆಗಲೇ ಸಾಕಷ್ಟು ಹಣ ವ್ಯಯವಾಗಿತ್ತು.

ನನ್ನೀ ಸಂಶೋಧನೆಯಲ್ಲಿ ಸಾಕಷ್ಟು ಸಿಹಿ-ಕಹಿ ಅನುಭವಗಳನ್ನು ಪಡೆದಿರುತ್ತೇನೆ! ಸಂಶೋಧನೆಯನ್ನು ಮುಗಿಸಿ, ಡಾಕ್ಟರೇಟ್ ಪದವಿ ಪಡೆದು ಹತ್ತು ವರ್ಷಗಳಾದರೂ ಕೃತಿ ಪ್ರಕಟಣೆಗೊಳ್ಳದೇ ಇರಲು ಮನಸ್ಸಿಗೆ ತುಂಬ ಬೇಸರವಾಯಿತು. ಪ್ರಕಟಣೆಗಾಗಿ ಸಂಘ-ಸಂಸ್ಥೆಗಳನ್ನು ಸಂಪರ್ಕಿಸಿದೆ. ಕ.ಸಾ.ಪ. ಕೊನೆಗೆ ಕನ್ನಡ ವಿಶ್ವವಿದ್ಯಾನಿಲಯ ಹಂಪೆ - ಇವು ಯಾವುವು ಮುಂದೆ ಬರಲಿಲ್ಲ! ಕೊನೆಗೆ ನಿಡುಮಾಮಿಡಿ ಮಹಾಸಂಸ್ಥಾನ ಮಠದ (ಜ.ಚ.ನಿ. ಪೀಠ) ಪೂಜ್ಯ ಶ್ರೀ ವೀರಭದ್ರ ಚನ್ನಮಲ್ಲ ಸ್ವಾಮೀಜಿ ಇವರನ್ನು ಮೊರೆಹೊಕ್ಕೆ. ಅವರ ಪ್ರೋತ್ಸಾಹ, ನೆರವಿನಿಂದ ಈಗ ಕೃತಿ ಹೊರಬರುತ್ತಿರುವುದು ನನಗೆ ತುಂಬಾ ಮುದ ನೀಡಿದೆ. ಈ ಸಂದರ್ಭದಲ್ಲಿ ಅವರನ್ನು ಸ್ಮರಿಸದೇ ಇದ್ದರೆ ಅಪಚಾರವಾದೀತು. ಶ್ರೀಗಳವರಿಗೆ ನನ್ನ ಅನಂತ ನಮನಗಳು. ಅಂತೆ ನಾನು ನೆನೆಯಬಹುದಾದ ಇನ್ನೂ ಹಲವು ವ್ಯಕ್ತಿಗಳನ್ನು ಸ್ಮರಿಸಿಕೊಳ್ಳದೇ ಇದ್ದರೆ ಅವರಿಗೆ ದ್ರೋಹವೆಸಗಿದಂತಾಗುತ್ತದೆ. ಅಂತಹವರಲ್ಲಿ-

ಶ್ರೀ ಬೃಹನ್ಮಠದ ಹಿರಿಯ ಚೇತನ, ಪ್ರಖಾಂಡ ಪಂಡಿತರು, ಶ್ರೀ ಮುರುಘಾಮಠದ ದಿವ್ಯ ವ್ಯಕ್ತಿಯಲ್ಲ ಶಕ್ತಿಯಾಗಿದ್ದ ಲಿಂಗೈಕ್ಯ ಜಗದ್ಗುರು ಶ್ರೀ ಮನ್ನಿರಂಜನ ಮಲ್ಲಿಕಾರ್ಜುನ ಮುರುಘರಾಜೇಂದ್ರ ಮಹಾಸ್ವಾಮಿಗಳವರು ನನ್ನನ್ನು ಮಲೆನಾಡ ಹೆಬ್ಬಾಗಿಲಂತಿರುವ ತರೀಕೆರೆಗೆ ವರ್ಗಾಯಿಸಿ ಸಂಶೋಧನೆಗೆ ಅನುವು ಮಾಡಿಕೊಟ್ಟರು. ಅವರಿಗೆ ವ್ಯಾಕರಣ ಮತ್ತು ಅಲಂಕಾರ ಬಲು ಪ್ರಿಯವಾದ ವಿಷಯಗಳು. ಈ ಕೃತಿಯ ಪ್ರಕಟಣೆಯಾಗುತ್ತಿರುವ ಸಂದರ್ಭದಲ್ಲಿ ಅವರು ನಮ್ಮೊಡನಿಲ್ಲ. ಅವರಿದ್ದಿದ್ದರೆ ತುಂಬ ಸಂತೋಷಪಡುತ್ತಿದ್ದರು. ಅವರಿಗೆ ನನ್ನ ಭಕ್ತಿಪೂರ್ವಕವಾದ ನಮನಗಳು.

ಆರ್.ವಿ.ಎಸ್. ಸುಂದರಂರವರು ವಯಸ್ಸಿನಲ್ಲಿ ಕಿರಿಯರಾದರೂ ಜ್ಞಾನದಲ್ಲಿ ಹಿರಿಯರು. ನೀರಸ ಹಾಗೂ ಕ್ಲಿಷ್ಟವಾದ ವ್ಯಾಕರಣದಂತಹ ವಿಷಯದಲ್ಲಿ ಅವರು

ಆಸಕ್ತಿ ವಹಿಸಿ, ನನಗೆ ಮಾರ್ಗದರ್ಶಕರಾಗಲು ತುಂಬು ಹೃದಯದಿಂದ ಒಪ್ಪಿಗೆ ನೀಡಿದರು. ಅವರು ನಾನು ಮೈಸೂರಿಗೆ ಹೋದಾಗಲೆಲ್ಲ ಅಧ್ಯಯನ ಕೇಂದ್ರದಲ್ಲಿ ಮಾತ್ರವಲ್ಲದೆ, ತಮ್ಮ ಮನೆಗೂ ನನ್ನನ್ನು ಬರಮಾಡಿಕೊಂಡು, ಪಾಠ-ಪ್ರವಚನ ಗಳೊಂದಿಗೆ, ಆತಿಥ್ಯವನ್ನೂ ಕಲ್ಪಿಸಿ ನನ್ನನ್ನು ನಾಚಿಸುವಂತೆ ಮಾಡಿರುವರು. ಈ ಕಾರಣ ಡಾ. ಸುಂದರಂ ಹಾಗೂ ಅವರ ಶ್ರೀಮತಿಯವರಿಗೆ ನನ್ನ ಹೃತ್ಪೂರ್ವಕ ವಂದನೆಗಳು.

ನನ್ನ ಸಂಶೋಧನೆಗೆ ಪೂಟ್ಟಿ ಮೊದಲು ಪ್ರವೇಶ ಒದಗಿಸಿಕೊಟ್ಟಿರುವ ದಿವಂಗತ ಡಾ. ಎಚ್. ತಿಪ್ಪೇರುದ್ರಸ್ವಾಮಿ (ಅಂದಿನ ಕನ್ನಡ ಅಧ್ಯಯನ ಸಂಸ್ಥೆಯ ನಿರ್ದೇಶಕರು) ಹಾಗು ಮಿತ್ರರಾದ ಡಾ. ಮಳಲಿ ವಸಂತಕುಮಾರ್ - ಇವರಿಗೆ ನನ್ನ ವಂದನೆಗಳು.

ನಾನು ಮೂರು ತಿಂಗಳು ಮೈಸೂರಿನಲ್ಲಿದ್ದಾಗ ನನ್ನೊಂದಿಗೆ ಚರ್ಚಿಸಿ, ಕಷ್ಟವಾದ ಕೆಲವೊಂದು ಸೂತ್ರಗಳಿಗೆ ಅರ್ಥ ಹೇಳಿ, ಕೆಲವೊಂದು ಸಂಶಯಗಳನ್ನು ನಿವಾರಣೆ ಮಾಡಿ ಉಪಕಾರವನ್ನೆಸಗಿದ ನನ್ನ ವಿದ್ಯಾ ಗುರುವರ್ಯರಾದ ಡಾ. ಟಿ.ವಿ. ವೆಂಕಟಾಚಲ ಶಾಸ್ತ್ರೀಯವರಿಗೆ ಭಕ್ತಿಪೂರ್ವಕ ನಮಸ್ಕಾರಗಳು. ಅಂತೆಯೇ ಮೈಸೂರಿನ ಮಹಾರಾಜ ಕಾಲೇಜಿನ ಪ್ರಾಧ್ಯಾಪಕರಾಗಿದ್ದ ಪ್ರೊ. ರಾಘವೇಂದ್ರರಾಯರಿಗೆ (ಶ್ರೀಯುತರು ಪ್ರೊ. ಡಿ.ಕೆ. ಭೀಮಸೇನರಾಯರ ಅಳಿಯಂದಿರು) ವಂದನೆಗಳು. ಮೈಸೂರಿನ ಕನ್ನಡ ಅಧ್ಯಯನ ಸಂಸ್ಥೆಯಲ್ಲಿದ್ದಾಗ ವಿಶ್ರಾಂತಿಯ ಸಮಯದಲ್ಲೂ ನನ್ನೊಂದಿಗೆ ಸ್ನೇಹಪೂರ್ವಕವಾಗಿ ಮಾತನಾಡುತ್ತಾ, ಪ್ರಬಂಧದ ಬಗ್ಗೆ ಚರ್ಚಿಸುತ್ತಾ ನನ್ನ ಮನಸ್ಸಿಗೆ ಸಂತೋಷವನ್ನು ನೀಡುತ್ತಲಿದ್ದ ಹಿರಿಯ ಮಿತ್ರರಾದ ಡಾ. ಸೀತಾರಾಮ ಜಾಗೀರದಾರ, ಶ್ರೀ ಎಂ.ಎಸ್. ನಾಗರಾಜ್ (ಶಾಸನ ತಜ್ಞರು); ಡಾ. ಮಂಜಪ್ಪ ಶೆಟ್ಟಿ - ಇವರಿಗೂ ಸಪ್ರೇಮ ವಂದನೆಗಳು.

ಮೈಸೂರಿನಲ್ಲಿರುವವರೆವಿಗೂ ವಿಶ್ವವಿದ್ಯಾನಿಲಯದ ಅತಿಥಿ ಗೃಹದ ವಾಸಕ್ಕೆ ಅನುಕೂಲ ಮಾಡಿಕೊಟ್ಟ ಶ್ರೀ ಕೆ. ಪರಮೇಶ್ವರಪ್ಪ ಅವರಿಗೂ (ಮಾಜಿ ಕುಲಸಚಿವರು, ಪರೀಕ್ಷಾ ವಿಭಾಗ), ಉಜ್ಜೈನಿ ಪೀಠದ ಶ್ರೀ ಮಹಂತಯ್ಯ ಮಠ ಹಾಗೂ ಅವರ ಶ್ರೀಮತಿಯವರಿಗೆ ವಂದನೆಗಳು.

ನನ್ನ ಮಹಾಪ್ರಬಂಧದ ಕರಡು ಪ್ರತಿಯನ್ನು ತಿದ್ದಿ, ತೀಡಿ ಅಂದವಾಗಿ ಅಲಂಕಾರ ಮಾಡಿಕೊಟ್ಟಿದ್ದಲ್ಲದೆ, ಕೇಳಿದಾಕ್ಷಣ ಬಿಸಿ ಬಿಸಿ ಕಾಫಿಯನ್ನು ಮಾಡಿಕೊಡುತ್ತಾ ಪ್ರೋತ್ಸಾಹ ನೀಡಿದ ನನ್ನ ಅರ್ಧಾಂಗಿಯಾಗಿರುವ ಶ್ರೀಮತಿ ಶಕುಂತಲಾ; ನನ್ನ ಪುತ್ರಿದ್ವಯರಾದ ಶ್ರೀಮತಿ ಸವಿತಾ ಮಹಾದೇಶ್ವರ್ ಮತ್ತು ಶ್ರೀಮತಿ ಕವಿತಾ ಮಂಜುನಾಥ್‌ರವರನ್ನು ಮರೆಯುವಂತಿಲ್ಲ.

ನನ್ನಿ ಕೃತಿಯ ಪ್ರಕಟಣೆಯಲ್ಲಿ ಹೆಚ್ಚಿನ ಆಸಕ್ತಿಯನ್ನು ತೋರಿದ್ದಷ್ಟೇ ಅಲ್ಲದೆ ಹಾರೈಕೆಯನ್ನೂ ಬರೆದುಕೊಟ್ಟ ಡಾ. ಎಚ್. ವಿದ್ಯಾಶಂಕರ ಅವರಿಗೆ; [illegible]

ಅಂದವಾಗಿ ಡಿ.ಟಿ.ಪಿ. ಮಾಡಿಕೊಟ್ಟ ವರ್ಷಿಣಿ ಗ್ರಾಫಿಕ್ಸ್‌ನ ಶ್ರೀಮತಿ ಪ್ರಿಯದರ್ಶಿನಿ ಹಾಗೂ ಅವರ ಸಿಬ್ಬಂದಿ ವರ್ಗದವರಿಗೆ; ಚೆನ್ನಾಗಿ ಮುದ್ರಿಸಿಕೊಟ್ಟ ಬೆಂಗಳೂರಿನ ಸ್ನೇಹಾ ಪ್ರಿಂಟರ್ಸ್‌ನ ಶ್ರೀ ವಿ. ಮಹೇಶ್‌ರವರಿಗೆ; ಆಕರ್ಷಕ ರಕ್ಷಾಪತ್ರ ವಿನ್ಯಾಸ ಮಾಡಿಕೊಟ್ಟ ಶ್ರೀ ಮೋಸಪ್ಪ ಅವರಿಗೆ ವಂದನೆಗಳು.

ಕೃತಿಯ ಪ್ರಕಟಣೆಗಾಗಿ ಉದಾರವಾಗಿ ಧನಸಹಾಯ ಮಾಡಿದ -

ತಿರುಮಲ ತಿರುಪತಿ ದೇವಸ್ಥಾನದ ಪುಸ್ತಕ ಸಹಾಯಾರ್ಥ ಗೌರವಧನ ಸಮಿತಿ, ತಿರುಪತಿ;

ಶ್ರೀ ವೀರಭದ್ರ ಚನ್ನಮಲ್ಲ ಸ್ವಾಮೀಜಿ, ನಿಡುಮಾಮಿಡಿ ಮಹಾಸಂಸ್ಥಾನ, ಮಠ;

ಚಿತ್ರದುರ್ಗದ ಬೃಹನ್ಮಠದ ಆಡಳಿತಾಧಿಕಾರಿಗಳಾದ ಶ್ರೀ ಎಸ್.ಕೆ. ಬಸವರಾಜನ್;

ಸಿರಿಗೆರೆಯ ಬೃಹನ್ಮಠದ ಶ್ರೀ ಶಿವಕುಮಾರ ಪಂಡಿತಾರಾಧ್ಯ ಸ್ವಾಮಿಗಳವರು;

ಸುತ್ತೂರು ಮಠದ ಶ್ರೀ ಶಿವರಾತ್ರಿ ದೇಶಿಕೇಂದ್ರ ಮಹಾಸ್ವಾಮಿಗಳವರು;

ಹುಬ್ಬಳ್ಳಿಯ ಮೂರುಸಾವಿರ ಮಠದ ಡಾ. ಗಂಗಾಧರ ರಾಜಯೋಗೀಂದ್ರ ಮಹಾಸ್ವಾಮಿಗಳವರು;

ಸಿದ್ಧಗಂಗಾಮಠದ ಡಾ. ಶಿವಕುಮಾರ ಮಹಾಸ್ವಾಮಿಗಳವರು;

ಶಿವಮೊಗ್ಗದ ಬೆಕ್ಕಿನಕಲ್ಮಠದ ನಿ.ಪ್ರ.ಸ್ವ. ಶ್ರೀ ಜಗದ್ಗುರು ಶ್ರೀ ಮಲ್ಲಿಕಾರ್ಜುನ ಮುರುಘರಾಜೇಂದ್ರ ಮಹಾಸ್ವಾಮಿಗಳವರು;

ಗದಗಿನ ತೋಂಟದಾರ್ಯಮಠದ ಡಾ. ಸಿದ್ಧಲಿಂಗ ಮಹಾಸ್ವಾಮಿಗಳವರು - ಇವರೆಲ್ಲರಿಗೂ ನನ್ನ ಹೃತ್ಪೂರ್ವಕ ನಮನಗಳು.

ದೇಶ ಸೇವೆ ಮಾಡಲು ನನ್ನಲ್ಲಿ ಶಕ್ತಿಯಿಲ್ಲ (ನಿವೃತ್ತ ಪ್ರಾಧ್ಯಾಪಕ). ಉದಾರವಾಗಿ ಕಾಣಿಕೆ ಸಲ್ಲಿಸಲು ನನ್ನಲ್ಲಿ ಹಣವಿಲ್ಲ. ಕಾರಣ ಋಣವನ್ನು ತೀರಿಸಲು ಈ ಕೃತಿಯನ್ನೇ ನಾನು ದೇಶದ ರಕ್ಷಣೆಗಾಗಿ ಹೋರಾಡಿ, ವೀರಮರಣವನ್ನಪ್ಪಿದ ಸೈನಿಕರಿಗೂ, ಅವಿರತವಾಗಿ ಅವಿಶ್ರಾಂತವಾಗಿ ಇನ್ನೂ ಯುದ್ಧ ಭೂಮಿಯಲ್ಲಿ ತೊಡಗಿ ಶ್ರಮಿಸುತ್ತಿಲಿರುವ ಹಾಲಿ ವೀರಯೋಧರಿಗೆ ಈ ಕೃತಿಯನ್ನು ಅರ್ಪಿಸುತ್ತಿದ್ದೇನೆ.

ಕೊನೆಯದಾಗಿ ಕೃತಿಯ 'ಪ್ರೂಫ್ ರೀಡಿಂಗ್' ನನ್ನದೇ ಆಗಿದ್ದು, ಅಲ್ಲಿ ಏನಾದರೂ ತಪ್ಪು-ಸ್ವಲ್ಪ ದೋಷಗಳಿದ್ದರೆ ಅದಕ್ಕೆ ನಾನೇ ಹೊಣೆಗಾರ. ಆದರೂ "ದೋಷವಿದರೊಳ್ ಏನಾನುಂ ಉಳ್ಳೊಡೆ ಪ್ರಿಯದಿಂ ತಿರ್ದುವುದು" ಎಂದು ಸಹೃದಯರಲ್ಲಿ ವಿನಂತಿ.

ಟಿ. ಶಂಭುಲಿಂಗಪ್ಪ

# ಉದ್ದೇಶ ಮತ್ತು ವ್ಯಾಪ್ತಿ

"ಪ್ರಯೋಗ ಶರಣಾಃ ವೈಯಾಕರಣಾಃ" ಎಂಬುದು ಸಂಸ್ಕೃತದ ಪ್ರಸಿದ್ಧ ಉಕ್ತಿ. ಪ್ರಯೋಗಗಳನ್ನು ಅವಲಂಬಿಸಿಕೊಂಡೇ ವ್ಯಾಕರಣ ರೂಪುಗೊಳ್ಳುತ್ತದೆ. ಭಾಷೆಯ ಸ್ವರೂಪವನ್ನು ಕಟ್ಟುನಿಟ್ಟಾದ ಒಂದು ಕ್ರಮದಲ್ಲಿಟ್ಟು ಸುವ್ಯವಸ್ಥಿತವಾಗಿ ಮಾಡುವುದು ವ್ಯಾಕರಣದ ಮುಖ್ಯ ಉದ್ದೇಶವಾಗಿರುತ್ತದೆ. ಅಪಪ್ರಯೋಗಗಳನ್ನು ಅದು ನಿಷೇಧಿಸುತ್ತದೆ. ಈ ದೃಷ್ಟಿಯಿಂದ ವ್ಯಾಕರಣ ಒಂದು ಶಾಸನವಾಗುತ್ತದೆ.

ಭಾಷೆ ನಿಂತ ನೀರಲ್ಲ. ಅದು ವೇಗವಾಗಿ ಹರಿಯುವ ಒಂದು ಪ್ರವಾಹ. ಅದರೂ ಬದಲಾಗುತ್ತಿರುವ ಭಾಷೆಯನ್ನು ನಿರ್ಬಂಧಿಸಲು ಪ್ರಯತ್ನಗಳು ನಡೆದಿವೆ, ನಡೆಯುತ್ತಿವೆ. ಈ ಪ್ರಯತ್ನ ಪ್ರಾರಂಭವಾದುದು ಸಂಸ್ಕೃತ ವ್ಯಾಕರಣ ಸಂಪ್ರದಾಯವಾದಿಗಳಿಂದಲೇ. ಪ್ರಾಚೀನ ಕನ್ನಡ ಮತ್ತು ತೆಲುಗು ವೈಯಾಕರಣರು ಸಂಸ್ಕೃತವನ್ನು ಅವಲಂಬಿಸಿಯೇ ವ್ಯಾಕರಣ ಗ್ರಂಥಗಳನ್ನು ರಚಿಸಿದರು. ದೇಶಭಾಷೆಗಳ ವ್ಯಾಕರಣಗಳ ಮೇಲೆ ಸಂಸ್ಕೃತದ ಪ್ರಭಾವ ಸಾಕಷ್ಟು ಇದ್ದರೂ ಪ್ರಾಚೀನ ಕನ್ನಡ ವೈಯಾಕರಣರು ಅಲ್ಲಲ್ಲಿ ತಮ್ಮ ಸ್ವಂತಿಕೆಯನ್ನು ಮೆರೆಯದೆ ಇರಲಿಲ್ಲ. ಅವರು ಸ್ವಲ್ಪ ಮಟ್ಟಿಗೆ ಕನ್ನಡದ ಸತ್ವವನ್ನು ಮನಗಂಡಿದ್ದಾರೆ. ಆದರೆ ಕನ್ನಡ ವ್ಯಾಕರಣಗಳು ಮತ್ತು ನಮ್ಮ ನೆರೆಹೊರೆಯ ಭಾಷೆಗಳಾದ ತೆಲುಗು, ತಮಿಳು, ಮಲಯಾಳ ಭಾಷೆಗಳ ಜೊತೆಗೆ ತೌಲನಿಕ ಅಧ್ಯಯನ ಸ್ವಲ್ಪವೂ ನಡೆಯದೇ ಇರುವುದು ವಿಷಾದನೀಯ. ಈ ನಿಟ್ಟಿನಲ್ಲಿ ಕನ್ನಡ ಮತ್ತು ತೆಲುಗು ವ್ಯಾಕರಣಗಳ ತುಲನಾತ್ಮಕ ಸಮೀಕ್ಷೆ ನಡೆಸಬೇಕಾದುದು ಅಗತ್ಯ, ಆದರೂ ಸಮಗ್ರ ಅಧ್ಯಯನ ನಡೆದಿಲ್ಲ. ಈ ನಿಟ್ಟಿನಲ್ಲಿ ಇದೊಂದು ಮೊದಲ ಹೆಜ್ಜೆ. ಕನ್ನಡ ವ್ಯಾಕರಣಗಳ ಸಮಗ್ರ ಅಧ್ಯಯನವೇ ಇಲ್ಲಿಯವರೆಗೂ ನಡೆದಿಲ್ಲ ಎನ್ನಬಹುದು. ಈ ದೆಸೆಯಲ್ಲಿ ಎಂ.ವಿ. ಸೀತಾರಾಮಯ್ಯ-ನವರ 'ಪ್ರಾಚೀನ ಕನ್ನಡ ವ್ಯಾಕರಣಗಳು', ಬಿಳಿಗಿರಿಯವರ 'ಆಲೋಕ', ಶ್ರೀಕೃಷ್ಣಭಟ್ಟರ 'ಕನ್ನಡ ವ್ಯಾಕರಣಗಳ ಮೇಲೆ ಸಂಸ್ಕೃತ ವ್ಯಾಕರಣಗಳ ಪ್ರಭಾವ' ಮುಂತಾದ ಕೆಲವು ಗ್ರಂಥಗಳು ಪ್ರಕಟವಾಗಿರುವುದು ಸಮಾಧಾನದ ಸಂಗತಿ. ಇವುಗಳಲ್ಲಿ ಎಂ.ವಿ. ಸೀತಾರಾಮಯ್ಯನವರ 'ಪ್ರಾಚೀನ ಕನ್ನಡ ವ್ಯಾಕರಣಗಳು' ತುಲನಾತ್ಮಕ ದೃಷ್ಟಿಯಿಂದ ಮೆಚ್ಚುವಂತಹ ಕೃತಿ. ಅದರಲ್ಲಿ ಸಂಸ್ಕೃತ ವ್ಯಾಕರಣಗಳ ಸ್ಥೂಲ

ಪರಿಚಯದೊಂದಿಗೆ ಹಳಗನ್ನಡ ವ್ಯಾಕರಣಗಳ ಮೇಲೆ ಸಂಸ್ಕೃತ ವ್ಯಾಕರಣಗಳ ಪ್ರಭಾವ ಸ್ವಲ್ಪಮಟ್ಟಿಗೆ ಮೂಡಿ ಬಂದಿದೆ.

ನಾಗವರ್ಮನ 'ಕರ್ಣಾಟಕ ಭಾಷಾ ಭೂಷಣಂ' ಸಂಸ್ಕೃತ ಭಾಷೆಯಲ್ಲಿ ಸೂತ್ರಬದ್ಧವಾಗಿ ಬರೆದ ಕನ್ನಡದ ಪ್ರಥಮ ವ್ಯಾಕರಣ ಗ್ರಂಥ. ಅಂತೆಯೇ ಕೇತನನ 'ಆಂಧ್ರಭಾಷಾ ಭೂಷಣಂ' ತೆಲುಗು ಭಾಷೆಗೆ ತೆಲುಗಿನಲ್ಲಿ ರಚಿತವಾದ ಮೊದಲ ವ್ಯಾಕರಣ ಕೃತಿ. ಪ್ರಕೃತ ಮಹಾ ಪ್ರಬಂಧದಲ್ಲಿ ಈ ಎರಡು ಕೃತಿಗಳ ಪರಿಚಯದೊಂದಿಗೆ ಕನ್ನಡ ಮತ್ತು ತೆಲುಗು ವ್ಯಾಕರಣಗಳ ಪಾರಿಭಾಷಿಕ ಪದಗಳ ಪರಿಚಯ ಮತ್ತು ವ್ಯಾಕರಣ ಕಾರ್ಯಗಳ ನಿರೂಪಣೆಯನ್ನು ಮಾಡಲಾಗಿದೆ.

ಕನ್ನಡದ ನಾಗವರ್ಮನ ಸಮಸ್ಯೆ ಜಟಿಲವಾದುದು. ಅದರ ಪೂರ್ಣ ವಿವರಗಳಿಗೆ ಕೈಹಾಕದೆ ಎರಡು ಭಾಷೆಗಳ ವ್ಯಾಕರಣಗಳನ್ನು ದೃಷ್ಟಿಯಲ್ಲಿಟ್ಟುಕೊಂಡು ವಿಷಯಗಳನ್ನು ಸಮೀಕರಿಸಲಾಗಿದೆ. ನಾಗವರ್ಮನ ಕಾಲ 'ವರ್ಧಮಾನಪುರಾಣ' ದೊರೆತಮೇಲೆ ಕ್ರಿ.ಶ. ೧೦೪೨ ಎಂದು ಬಹುತೇಕ ವಿದ್ವಾಂಸರಿಂದ ತೀರ್ಮಾನಿಸಲಾಗಿದೆ. ಆಂಧ್ರದ ಕೇತನನ ಕಾಲ ಸ್ಪಷ್ಟವಾಗಿಯೇ ಇದೆ. ಅದು ೧೩ನೆಯ ಶತಮಾನ. ಎರಡು ನೂರು ವರ್ಷಗಳ ಅಂತರವುಳ್ಳ ಈ ಎರಡು ವ್ಯಾಕರಣಗಳ ಪರಿಚಯ ತುಂಬ ಅಗತ್ಯವೆಂಬುದರಲ್ಲಿ ಸಂದೇಹವಿಲ್ಲ. ಕರ್ಣಾಟಕ ಭಾಷಾ ಭೂಷಣದಲ್ಲಿ ಸಂಧಿ, ವಿಭಕ್ತಿ, ಕಾರಕ, ಯುಷ್ಮದಾದಿ, ಸಮಾಸ, ತದ್ಧಿತ, ಆಖ್ಯಾತ, ಅವ್ಯಯ, ನಿಪಾತಗಳೆಂಬ ಹತ್ತು ಪರಿಚ್ಛೇದಗಳಿವೆ. ಈ ಹತ್ತು ಪರಿಚ್ಛೇದಗಳನ್ನು ಮೂಲವಾಗಿಟ್ಟುಕೊಂಡು ತೆಲುಗು ವ್ಯಾಕರಣ ಗ್ರಂಥವಾದ 'ಆಂಧ್ರ ಭಾಷಾ ಭೂಷಣಂ'ನ ವ್ಯಾಕರಣಾಂಶಗಳೊಂದಿಗೆ ಹೋಲಿಸುವ ಪ್ರಧಾನೋದ್ದೇಶದಿಂದ ಈ ಮಹಾಪ್ರಬಂಧ ಮೂಡಿಬಂದಿದೆ.

ಈ ಮಹಾ ಪ್ರಬಂಧದ ಅಧ್ಯಾಯಗಳಲ್ಲಿ ಮೊದಲು 'ಕರ್ಣಾಟಕ ಭಾಷಾ ಭೂಷಣ'ದ ವ್ಯಾಕರಣಾಂಶಗಳನ್ನು ನಿರೂಪಿಸಿ, ಅನಂತರ ಅವುಗಳಿಗೆ ಸಂಬಂಧಿಸಿದಂತೆ ತೆಲುಗು ವ್ಯಾಕರಣದ ಅಂಶಗಳನ್ನು ನೀಡಲಾಗಿದೆ. ತದನಂತರ ತೌಲನಿಕ ಸಮೀಕ್ಷೆ ಮಾಡಲಾಗಿದೆ.

ಮೊದಲನೆಯ ಅಧ್ಯಾಯದಲ್ಲಿ, ಕೃತಿಕಾರರಾದ ನಾಗವರ್ಮ, ಕೇತನ-ಇವರಿಬ್ಬರ ಕಾಲ, ದೇಶ, ಮತ ಮತ್ತು ಕೃತಿ ಪರಿಚಯ ಮಾಡಲಾಗಿದೆ. ಕನ್ನಡ - ತೆಲುಗು ವ್ಯಾಕರಣ ಪರಂಪರೆಯಲ್ಲಿ ಇವರಿಬ್ಬರ ಸ್ಥಾನವನ್ನು ಕುರಿತು ಸಂಕ್ಷೇಪವಾಗಿ ಹೇಳಲಾಗಿದೆ.

ಎರಡನೆಯ ಅಧ್ಯಾಯದಲ್ಲಿ ಎರಡು ಭಾಷೆಗಳ ವರ್ಣ ಸಮಾಮ್ನಾಯವನ್ನು ಕುರಿತು ವಿವೇಚಿಸಲಾಗಿದೆ. ಮೂರನೆಯ ಅಧ್ಯಾಯದಲ್ಲಿ ಸಂಧಿಯ ಸ್ವರೂಪ ವಿವರಿಸಿ ಕನ್ನಡ ಮತ್ತು ತೆಲುಗು ಸಂಧಿಗಳ ಸ್ಥೂಲ ಪರಿಚಯ ಮಾಡಿಕೊಡಲಾಗಿದೆ.

ನಾಲ್ಕನೆಯ ಅಧ್ಯಾಯದಲ್ಲಿ ವಿವಿಧ ವಿಭಕ್ತಿಗಳ ತೌಲನಿಕ ಚರ್ಚೆ ನಡೆದಿದೆ. ಕಾರಕವನ್ನು ಕೂಡ ಈ ಅಧ್ಯಾಯದಲ್ಲಿ ವಿವರಿಸಲಾಗಿದೆ.

ಶಬ್ದರೀತಿಯನ್ನು ವಿವರಿಸುವ ಐದನೆಯ ಅಧ್ಯಾಯದಲ್ಲಿ ಎರಡು ಭಾಷೆಗಳ ಸರ್ವನಾಮಗಳು, ತತ್ಸಮ- ತದ್ಭವ, ದೇಶ್ಯ ಮುಂತಾದವುಗಳ ಬಗ್ಗೆ ಬರೆಯಲಾಗಿದೆ. ಆರನೆಯ ಅಧ್ಯಾಯದಲ್ಲಿ ಸಮಾಸಗಳ ವಿವೇಚನೆ ಇದೆ. ತದ್ಧಿತಗಳನ್ನು ಏಳನೆಯ ಅಧ್ಯಾಯದಲ್ಲಿ, ಆಖ್ಯಾತಗಳನ್ನು ಎಂಟನೆಯ ಅಧ್ಯಾಯದಲ್ಲಿ ವಿವರಿಸಲಾಗಿದೆ. ಒಂಬತ್ತನೆಯ ಅಧ್ಯಾಯದಲ್ಲಿ ಅವ್ಯಯ ಮತ್ತು ನಿಪಾತಗಳ ವಿವರಣೆ ಇದೆ. ಕೊನೆಯದಾದ ಹತ್ತನೆಯ ಅಧ್ಯಾಯದಲ್ಲಿ ಉಪಸಂಹಾರ ಮಾಡಲಾಗಿದೆ.

ಕನ್ನಡ ಮತ್ತು ತೆಲುಗು ಭಾಷೆಗಳ ವ್ಯಾಕರಣಾಂಶಗಳನ್ನು ವಿವೇಚಿಸುವಾಗ ಸಂದರ್ಭೋಚಿತವಾಗಿ ಬೇರೆ ಬೇರೆ ವೈಯಾಕರಣರ ನಿಲುವನ್ನು ಹೇಳಲಾಗಿದೆ. ಎರಡು ಭಾಷೆಗಳ ಅರ್ವಾಚೀನ ಮತ್ತು ಪ್ರಾಚೀನ ವ್ಯಾಕರಣ ಕೃತಿಗಳನ್ನು ತೌಲನಿಕ ಸಮೀಕ್ಷೆಗಾಗಿ ಸ್ವೀಕರಿಸಲಾಗಿದೆ.

ಒಟ್ಟಿನಲ್ಲಿ 'ಕರ್ಣಾಟಕ ಭಾಷಾ ಭೂಷಣ'ದ ವಿವಿಧ ಪ್ರಕರಣಗಳಲ್ಲಿರುವ ನಿರೂಪಣೆಯನ್ನು ಮೂಲವಾಗಿಟ್ಟುಕೊಂಡು ಅದರೊಂದಿಗೆ ಆಂಧ್ರ ಭಾಷಾ ಭೂಷಣದ ನಿರೂಪಣೆಯನ್ನು ತುಲನಾತ್ಮಕವಾಗಿ ಪರಿಶೀಲಿಸುವ ಪ್ರಯತ್ನ ಇಲ್ಲಿ ನಡೆದಿದೆ.

# ಅರ್ಪಣೆ

"ದೇಶ ರಕ್ಷಣೆಗಾಗಿ ಹೋರಾಡಿ ವೀರ ಮರಣವನ್ನಪ್ಪಿದ ಸೈನಿಕ ಸಮುದಾಯಕ್ಕೂ; ಅವಿರಳವಾಗಿ, ಅವಿಶ್ರಾಂತವಾಗಿ ಇನ್ನೂ ಯುದ್ಧ ಭೂಮಿಯಲ್ಲಿ ಹೋರಾಡುತ್ತಿರುವ ಹಾಲಿ ವೀರ ಯೋಧರಿಗೆ"

-ಜೈಹಿಂದ್

# ಪರಿವಿಡಿ

# ಅಧ್ಯಾಯ - ೧

# ನಾಗವರ್ಮ ಮತ್ತು ಕೇತನ ಜೀವನ ಮತ್ತು ಕೃತಿಗಳು

# ನಾಗವರ್ಮ

ಕನ್ನಡ ವಾಙ್ಮಯ ಲೋಕದ ಜಟಿಲ ಸಮಸ್ಯೆಗಳಲ್ಲಿ ನಾಗವರ್ಮನದು ಒಂದು. ನಾಗವರ್ಮರು ಎಷ್ಟು ಮಂದಿ ಎಂಬುದನ್ನು ಇತ್ಯರ್ಥಮಾಡಲು ಇನ್ನೂ ಸಾಧ್ಯವಾಗಿಲ್ಲ. ನಾಗವರ್ಮನೆಂಬ ಹೆಸರಿನವರ ಕಾಲ, ದೇಶ, ಮತ, ಕೃತಿ- ಇವುಗಳಿಗೆ ಸಂಬಂಧಿಸಿದಂತೆ ತಲೆಯೆತ್ತಿದ ಪ್ರಶ್ನೆಗಳಿಗೆ ಇದುವರೆಗೆ ಸಮಂಜಸವಾದ ಉತ್ತರ ದೊರೆತಿಲ್ಲ. ಇದರ ಬಗ್ಗೆ ಕೆಲಸ ನಡೆದಿದೆ; ನಡೆಯುತ್ತಲೂ ಇದೆ. ಈ ವಿಷಯದಲ್ಲಿ ಕನ್ನಡ ಸಾಹಿತ್ಯ ಚರಿತ್ರೆಕಾರರು ಮತ್ತು ಹಲವಾರು ವಿದ್ವಾಂಸರು ಚರ್ಚಿಸಿದ್ದಾರೆ; ಚರ್ಚಿಸುತ್ತಾ ಇದ್ದಾರೆ. ಕನ್ನಡ ಅಧ್ಯಯನ ಸಂಸ್ಥೆಯ ಕನ್ನಡ ಸಾಹಿತ್ಯ ಚರಿತ್ರೆಯಲ್ಲಿ ಈ ವಿಷಯದ ಬಗ್ಗೆ ಬರೆದ ಲೇಖನವೊಂದರಲ್ಲಿ ಪ್ರೊ. ಸಿ.ಪಿ. ಕೃಷ್ಣಕುಮಾರ್ "ನಾಗವರ್ಮನ ಸಮಸ್ಯೆಯ ಒಂದು ಮುಖದ ಮೇಲೇನೋ ಈಗ ನಿರ್ಣಾಯಕವಾಗಿ ಬೆಳಕು ಬಿದ್ದಿದೆ; ಆದರೆ ಇನ್ನೊಂದು ಮುಖ ಮಾತ್ರ ಕತ್ತಲಲ್ಲೇ ಉಳಿದಿದೆ" ಎಂದಿದ್ದಾರೆ. ಇತ್ತೀಚೆಗೆ ಉಪಲಬ್ಧವಾದ ಎರಡನೆಯ ನಾಗವರ್ಮನ 'ವರ್ಧಮಾನ ಪುರಾಣ'ವನ್ನು ದೃಷ್ಟಿಯಲ್ಲಿಟ್ಟುಕೊಂಡು ಪ್ರೊ. ಸಿ.ಪಿ.ಕೆ. ಮೇಲಿನ ಮಾತನ್ನು ಹೇಳಿರುತ್ತಾರೆ. ಬಹುತೇಕ ವಿದ್ವಾಂಸರು ಅಭಿಪ್ರಾಯಪಟ್ಟಿರುವಂತೆ 'ಕರ್ಣಾಟಕ ಕಾದಂಬರಿ' ಹಾಗೂ 'ಛಂದೋಂಬುಧಿ' ಗ್ರಂಥಗಳನ್ನು ಬರೆದಿರುವವನು ಒಂದನೆಯ ನಾಗವರ್ಮ. ಕಾವ್ಯಾವಲೋಕನಾದಿ ಗ್ರಂಥಗಳನ್ನು ಬರೆದಿರುವವನು ಎರಡನೆಯ ನಾಗವರ್ಮ.[2] ಆರ್. ನರಸಿಂಹಾಚಾರ್, ಎಂ. ಗೋವಿಂದ ಪೈ, ತೀ.ನಂ. ಶ್ರೀಕಂಠಯ್ಯ, ತಳುಕಿನ ವೆಂಕಣ್ಣಯ್ಯ ಮುಂತಾದವರು ಮೇಲಿನ ಅಭಿಪ್ರಾಯಗಳನ್ನೇ ಅನುಮೋದಿಸಿರುತ್ತಾರೆ. ಕಾವ್ಯಾವಲೋಕನ ಮತ್ತು ವರ್ಧಮಾನ ಪುರಾಣಗಳನ್ನು ಬರೆದವನು ಒಬ್ಬ ನಾಗವರ್ಮನೆಂಬ ಸಮರ್ಥನೆ ಈಗ ದೊರತಿದೆ. ಅದಕ್ಕೆ ಕಾರಣ ಈ ಮೊದಲಿಗೆ ಕವಿಚರಿತೆಕಾರರಾದ ಆರ್. ನರಸಿಂಹಾಚಾರ್ ಎರಡನೆಯ ನಾಗವರ್ಮನು ಒಂದು ಜಿನ ಪುರಾಣ ಗ್ರಂಥವನ್ನು ಬರದಿರಬೇಕೆಂದು ಜನ್ನನ 'ಅನಂತನಾಥ ಪುರಾಣ'ದ ಆಧಾರದಿಂದ ಊಹಿಸಿದ್ದರು.[3] ಈಗ 'ವರ್ಧಮಾನ ಪುರಾಣ' ದೊರೆತಿದ್ದು ಆ ಊಹೆ ನಿಜವಾಗಿದೆ. ಇದೊಂದು ಸಂತೋಷಕರವಾದ

ಸಂಗತಿ. ಸಮಸ್ಯೆ ಮೊದಲಿನಷ್ಟು ಜಟಿಲವಾಗಿರದೆ ಸಡಿಲಗೊಂಡಿದೆ. ವಸ್ತುಕೋಶ, ಕಾವ್ಯಾವಲೋಕನಾದಿ ಗ್ರಂಥಗಳನ್ನು ಬರೆದ ನಾಗವರ್ಮನೇ 'ವರ್ಧಮಾನ ಪುರಾಣ'ವನ್ನು ಬರೆದಿದ್ದಾನೆಂಬ ಸ್ಪಷ್ಟ ಚಿತ್ರ ದೊರೆತರೂ 'ನಾಗವರ್ಮ'ನೆಂಬ ಹೆಸರಿನವರೆಷ್ಟು ಜನ ಎಂಬ ಸಮಸ್ಯೆ ಮಾತ್ರ ಮುಂದುವರಿದಿದೆ.

ಒಂದನೆಯ ನಾಗವರ್ಮನೆಂಬುವನು 'ಛಂದೋಂಬುಧಿ' ಮತ್ತು 'ಕರ್ನಾಟಕ ಕಾದಂಬರಿ' ಎಂಬ ಎರಡು ಗ್ರಂಥಗಳನ್ನು ಬರೆದಂತೆ ಮೊದಲಿಗೆ ಕವಿಚರಿತೆಕಾರರು ಅಭಿಪ್ರಾಯಪಟ್ಟರು. 'ಕಾದಂಬರಿ' ಗ್ರಂಥದ ಒಟ್ಟು ಹನ್ನೊಂದು ಪದ್ಯಗಳಲ್ಲಿ ತನ್ನ ಸ್ವಂತ ವಿಷಯಗಳನ್ನು ನಾಗವರ್ಮನು ಹೇಳಿಕೊಂಡಿದ್ದರೂ ಕೆಲ ಸಂಗತಿಗಳು ಅಸ್ಪಷ್ಟವಾಗಿವೆ. ಈ ನಾಗವರ್ಮನು ನರೇಂದ್ರಚಂದ್ರ ಅಥವಾ ಚಂದ್ರನೆಂಬ ರಾಜನ ಆಶ್ರಯದಲ್ಲಿದ್ದನೆಂದು ತಿಳಿದುಬರುತ್ತದೆ. ಅಲ್ಲದೆ ತನಗೆ ಮಾಳವ ದೇಶದ ರಾಜನಾದ ಭೋಜನಿಂದ ಜಾತ್ಯಶ್ವಗಳು ಉದಾರವಾಗಿ ದೊರೆತಿರುವ ಸಂಗತಿಯನ್ನು ತನ್ನ ಕೃತಿಯಲ್ಲಿ ಹೇಳಿಕೊಂಡಿದ್ದಾನೆ. ಅವನು ಕವಿಯಂತೆ ಕಲಿಯೂ ಆಗಿದ್ದನು. ತನ್ನ ಮತದ ಬಗ್ಗೆ ಎಲ್ಲೂ ಹೇಳಿಕೊಂಡಿಲ್ಲ. ಕಾವ್ಯ ವಸ್ತುವಿನಿಂದ ಅವನು ಬ್ರಾಹ್ಮಣನೆಂದು ತಿಳಿಯಲು ಅವಕಾಶವಿದೆ. ಆದರೆ ಡಾ.ಎಲ್.ಬಸವರಾಜು ಅವರು 'ಛಂದೋಂಬುಧಿ'ಯನ್ನು ಬರೆದ ನಾಗವರ್ಮ ಶೈವನೆಂದೂ, ಅವನು ಮೂರನೆಯ ನಾಗವರ್ಮನೆಂದೂ ಅಭಿಪ್ರಾಯ ಪಟ್ಟಿದ್ದಾರೆ.[೪] ಆದರೆ ಅವರು ಕೊಡುವ ಆಧಾರಗಳು ಪ್ರಬಲವಾಗಿಲ್ಲ.

ನಾಗವರ್ಮನೆಂಬ ಹೆಸರು ಕೇವಲ 'ಕರ್ನಾಟಕ ಕಾದಂಬರಿ' ಮತ್ತು 'ಛಂದೋಬುಧಿ'ಗಳಿಗೆ ಮಾತ್ರ ಸೀಮಿತವಾಗಿದ್ದರೆ ಸಮಸ್ಯೆ ತಲೆಯೆತ್ತುತ್ತಿರಲಿಲ್ಲ. ಕಾವ್ಯಾವಲೋಕನ, ಕರ್ನಾಟಕ ಭಾಷಾ ಭೂಷಣಂ, ಅಭಿಧಾನ ವಸ್ತುಕೋಶ - ಈ ಗ್ರಂಥಗಳೂ ಕೂಡ ಅದೇ ಹೆಸರಿನಿಂದಲೇ ಉಪಲಬ್ಧವಾಗಿದ್ದು ನಾಗವರ್ಮನ ಸಮಸ್ಯೆಗೆ ಕಾರಣವಾದುವು. ನಾಗವರ್ಮ ಎಂಬುವರ ಬಗೆಗಿನ ವಿವಿಧ ಅಭಿಪ್ರಾಯಗಳಲ್ಲಿ ಅವರ ಸಂಖ್ಯೆ ಒಂದು, ಎರಡು ಮೂರು ಎಂದು ತೋರಿಬರುತ್ತದೆ. ಇದರ ಬಗ್ಗೆ ವಿದ್ವಾಂಸರ ಅಭಿಪ್ರಾಯಗಳ ಸಾರಾಂಶ ಹೀಗಿದೆ:

೧. ಆರ್. ನರಸಿಂಹಾಚಾರ್ ನಾಗವರ್ಮರೆಂಬ ಹೆಸರಿನ ಕವಿಗಳು ಇಬ್ಬರೆಂದು, ಮೊದಲನೆಯವನು 'ಕರ್ನಾಟಕ ಕಾದಂಬರಿ' ಮತ್ತು 'ಛಂದೋಂಬುಧಿ'ಗಳನ್ನು ಬರೆದನೆಂದು, ಎರಡನೆಯವನು ಕಾವ್ಯಾವಲೋಕನಾದಿ ಗ್ರಂಥಗಳನ್ನು ಬರೆದನೆಂದು, ಅವನು ಜನ್ನನಿಗೆ ಗುರುವಾಗಿದ್ದನೆಂದು, ಅಲ್ಲದೆ ಜಗದೇಕಮಲ್ಲನಲ್ಲಿ ಕಟಕೋಪಾಧ್ಯಾಯನಾಗಿದ್ದನೆಂದು ತಿಳಿಸಿರುತ್ತಾರೆ. ಅನಂತರ ತಮ್ಮ ಎರಡನೆಯ ಅಭಿಪ್ರಾಯದಲ್ಲಿ ಮೂವರು ನಾಗವರ್ಮರಿರಬೇಕೆಂದು, ಅವರು ಬೇರೆ ಬೇರೆ ಗ್ರಂಥಗಳನ್ನು ಬರೆದಿರಬೇಕೆಂದು ಊಹಿಸಿರುತ್ತಾರೆ.[೫]

೨. ಎ.ವೆಂಕಟಸುಬ್ಬಯ್ಯನವರು ಕವಿಚರಿತೆಕಾರರ ವಾದವನ್ನು ತೀವ್ರವಾಗಿ ಖಂಡಿಸುತ್ತಾ ಛಂದೋಂಬುಧಿ, ಕಾದಂಬರಿ, ಕರ್ಣಾಟಕ ಭಾಷಾಭೂಷಣ, ವಸ್ತುಕೋಶ-ಎಂಬ ಕೃತಿಗಳನ್ನು ಬರೆದವನು ಒಬ್ಬ ನಾಗವರ್ಮನೆಂದು ತಮ್ಮ ವಾದವನ್ನು ಮಂಡಿಸಿರುತ್ತಾರೆ.[೩]

೩. ಎಂ. ಗೋವಿಂದ ಪೈಯವರು ಕವಿಚರಿತೆಕಾರರ ವಾದವನ್ನು ಬೆಂಬಲಿಸಿದರು. 'ಕಾದಂಬರಿ' 'ಛಂದೋಂಬುಧಿ'ಗಳನ್ನು ಬರೆದವನು ಮೊದಲನೆಯ ನಾಗವರ್ಮನೆಂದು, ಅವನು ಸುಮಾರು ಕ್ರಿ.ಶ. ೧೦೧೦-೧೦೧೫ರಲ್ಲಿ ಜೀವಿಸಿದ್ದಿರಬೇಕೆಂದು, ವಸ್ತುಕೋಶ, ಕಾವ್ಯಾವಲೋಕನ, ಭಾಷಾಭೂಷಣ ಗ್ರಂಥಗಳನ್ನು ಬರೆದವನು ಎರಡನೆಯ ನಾಗವರ್ಮನೆಂದು ಅವನು ಜೈನ ಮತದವನೆಂದು, ಮೊದಲನೆಯವನು ಬ್ರಾಹ್ಮಣನೆಂದು ತಿಳಿಯಪಡಿಸಿದರು.[೩]

೪. ಟಿ.ಎಸ್.ವೆಂಕಣ್ಣಯ್ಯನವರು ಛಂದೋಂಬುಧಿ, ಕಾದಂಬರಿಗಳು ಏಕ ಕರ್ತೃಕವೇ ಭಿನ್ನ ಕರ್ತೃಕವೇ ಎಂಬುದರ ಬಗೆಗಿನ ಸಾಧಕ ಬಾಧಕಗಳ ಬಗ್ಗೆ ಚರ್ಚಿಸಿದ್ದಾರೆ. "ಕಾದಂಬರಿ, ಛಂದೋಂಬುಧಿಗಳು ಏಕ ಕರ್ತೃಕಗಳೇ, ಭಿನ್ನ ಕರ್ತೃಕಗಳೇ ಎಂಬ ವಿಚಾರದಲ್ಲಿ ಇದಮಿತ್ಥಂ ಎಂದು ನಿರ್ಧರಿಸಲು ಬರದು. ಅದಕ್ಕೆ ಈಗಿರುವ ಸಾಧನಸಾಮಗ್ರಿಗಳು ಸಾಲವು. ಎರಡು ಗ್ರಂಥಗಳನ್ನು ಒಬ್ಬನೇ ಬರೆದಿರಬಹುದಾಗಿದ್ದು ಅಸಂಭವವಲ್ಲವೆಂದು ತೋರುತ್ತದೆ"[೮] ಎಂದಿದ್ದಾರೆ.

೫. ಇತ್ತೀಚೆಗೆ ಎಂ.ವಿ. ಸೀತಾರಾಮಯ್ಯನವರು ಹಾಗೂ ಕುಕ್ಕಿಲ ಕೃಷ್ಣಭಟ್ಟರು ನಾಗವರ್ಮರ ಸಮಸ್ಯೆ ಬಗ್ಗೆ ವಿವೇಚಿಸುತ್ತಾ ಅವರೀರ್ವರ ಭಿನ್ನ ಕರ್ತೃತ್ವವನ್ನು ಅನುಮೋದಿಸಿದ್ದಾರೆ.

೬. ರಂ.ಶ್ರೀ. ಮುಗಳಿಯವರು ಟಿ.ಎಸ್. ವೆಂಕಣ್ಣಯ್ಯನವರ ಜಾಡಿನಲ್ಲೇ ನಡೆದರು; ಅವರನ್ನು ಬೆಂಬಲಿಸಿದರೂ ಕೂಡ.

೭. ಸಂಖ್ಯಾಶಾಸ್ತ್ರದ ಮೂಲ ತತ್ತ್ವಗಳ ಪ್ರಯೋಗದಿಂದ ಕಾದಂಬರೀ ಸಂಗ್ರಹ, ಕಾವ್ಯಾವಲೋಕನ, ವಸ್ತುಕೋಶಗಳಿಂದ ಕೇವಲ ಕಂದ ಪದ್ಯಗಳನ್ನು ಮಾತ್ರ ಆರಿಸಿಕೊಂಡು ನಾಗವರ್ಮರ ಸಮಸ್ಯೆಯನ್ನು ಬಿಡಿಸಲು ಯತ್ನಿಸಿದವರು ಎಂ.ಜಿ. ವೆಂಕಟೇಶಯ್ಯ ಎಂಬುವರು.

"ಕಾವ್ಯಾವಲೋಕನಕ್ಕೂ ಕಾದಂಬರಿಗೂ ಪದ ಪ್ರಮಾಣ ಸಾಪೇಕ್ಷಾ ವೃತ್ತಿಗಳಲ್ಲಿ ಗಣ್ಯವಾದ ವ್ಯತ್ಯಾಸವಿರುವುದರಿಂದ ಒಬ್ಬನೇ ನಾಗವರ್ಮನು ಈ ಎರಡನ್ನು ರಚಿಸಿಲ್ಲವೆಂದು ತೀರ್ಮಾನಿಸಬೇಕು. 'ವಸ್ತುಕೋಶ' 'ಕಾದಂಬರಿ'ಗಳಿಗೆ ಸಾಪೇಕ್ಷಾ

ವೃತ್ತಿ ಮಾಲಿಕೆಗಳಲ್ಲಿ ಗಣ್ಯವಾದ ವ್ಯತ್ಯಾಸವಿರುವುದರಿಂದ ಒಬ್ಬನೇ ನಾಗವರ್ಮನು ಈ ಎರಡನ್ನು ರಚಿಸಿಲ್ಲವೆಂದು ತೀರ್ಮಾನಿಸಬೇಕು. ವಸ್ತುಕೋಶ ಕಾದಂಬರಿಗಳಿಗೆ ಸಾಪೇಕ್ಷಾ ವೃತ್ತಿ ಮಾಲಿಕೆಗಳಲ್ಲಿ ಗಣ್ಯವಾದ ವ್ಯತ್ಯಾಸವಿರುವುದರಿಂದ 'ಕಾದಂಬರಿ'ಯನ್ನು ಬರೆದ ಕವಿ 'ವಸ್ತುಕೋಶ'ವನ್ನು ಬರೆದಿರಲಾರನೆಂದು ತೀರ್ಮಾನಿಸತಕ್ಕದ್ದು. ಇವುಗಳಿಂದ ಇಬ್ಬರು ನಾಗವರ್ಮರು ಇರಬೇಕೆಂಬುದು ಸಿದ್ಧಾಂತ."[೯]

ಅವರು ತಮ್ಮ ಲೇಖನದ ಕೊನೆಯಲ್ಲಿ "ಕಾವ್ಯಾವಲೋಕನ ಮತ್ತು ವಸ್ತುಕೋಶ ಇವುಗಳ ಮಾಲಿಕೆಯಲ್ಲಿ ಹೋಲಿಕೆ (Pattern Harmony) ಕಂಡು ಬಂದಿರುವುದರಿಂದ ಇವೆರಡನ್ನು ಒಬ್ಬನೇ ನಾಗವರ್ಮನು (ಅವನು ಎರಡನೆಯವನು) ಬರೆದಿರಬಹುದೆಂದು ಎನ್ನಬಹುದು...... ಎಂದಿರುವರು."[೧೦]

ಸಾರ್ವತ್ರಿಕ ಅಭಿಪ್ರಾಯಗಳನ್ನು ಸಂಖ್ಯಾಶಾಸ್ತ್ರ ಮೂಲ ತತ್ವಗಳಿಂದ ಖಚಿತಪಡಿಸಿದ ಲೇಖಕರು ಅಭಿನಂದನಾರ್ಹರು. ಇಲ್ಲಿ ಊಹೆಗಿಂತ ಪ್ರಾಯೋಗಿಕ ಸಿದ್ಧಾಂತದ ನೆಲೆ ಹಾಗೂ ಬೆಲೆಗೆ ಮನ್ನಣೆ ದೊರೆತಿರುವುದನ್ನು ನಾವು ಮರೆಯಬಾರದು.

ಒಟ್ಟಾರೆ ಅಭಿಪ್ರಾಯದಲ್ಲಿ 'ಕರ್ಣಾಟಕ ಕಾದಂಬರಿ' ಮತ್ತು 'ಛಂದೋಬುಧಿ' ಗ್ರಂಥಗಳನ್ನು ಬರೆದವನು ಮೊದಲನೆಯ ನಾಗವರ್ಮನೆಂದೂ, ಕಾವ್ಯಾವಲೋಕನ, ಕರ್ಣಾಟಕ ಭಾಷಾಭೂಷಣ, ಅಭಿಧಾನ ವಸ್ತುಕೋಶ ಮತ್ತು ವರ್ಧಮಾನ ಪುರಾಣ ಗ್ರಂಥಗಳನ್ನು ಬರೆದವನು ಎರಡನೆಯ ನಾಗವರ್ಮನೆಂದೂ ವಿದ್ವಾಂಸರು ಅಭಿಪ್ರಾಯ ಪಟ್ಟಿರುವಂತೆ ತಿಳಿಯಬಹುದು.

ಕಾಲ :

ಎರಡನೆಯ ನಾಗವರ್ಮನೆಂಬುವನ ಕಾಲದ ಬಗ್ಗೆ ಪರಿಶ್ರಮ ಎಸಗಿದವರಲ್ಲಿ ಬಿ.ಎಸ್.ಸಣ್ಣಯ್ಯ,ಎಂ.ಎಂ.ಕಲಬುರ್ಗಿ,ಸಂಗಮೇಶಬಿರಾದಾರ, ಎ.ವೆಂಕಟಸುಬ್ಬಯ್ಯ, ಎಂ.ವಿ. ಸೀತಾರಾಮಯ್ಯ, ಆರ್. ನರಸಿಂಹಾಚಾರ್, ಬಿ.ಎಲ್. ರೈಸ್, ಗೋವಿಂದ ಪೈ, ತಳುಕಿನ ವೆಂಕಣ್ಣಯ್ಯ ಮೊದಲಾದವರನ್ನು ಹೆಸರಿಸಬಹುದು.

ನಾಗವರ್ಮನ ಕಾಲವನ್ನು ನಿರ್ಧರಿಸುವಾಗ ನಾವು ಎರಡು ಅಭಿಪ್ರಾಯಗಳನ್ನು ಗಮನಿಸಬೇಕು. ಒಂದು, 'ವರ್ಧಮಾನ ಪುರಾಣ' ಗ್ರಂಥ ಲಭ್ಯವಾಗುವುದಕ್ಕೆ ಮುಂಚೆ ಅದರ ಬಗ್ಗೆ ಸಾಕಷ್ಟು ಚರ್ಚೆ ನಡೆದು ಯಾವ ಒಂದು ನಿಲವಿಗೂ ಬಾರದೇ ಇದ್ದುದು, ಇನ್ನೊಂದು 'ವರ್ಧಮಾನ ಪುರಾಣ' ದೊರೆತಂದಿನಿಂದ ಅದರ ಬಗ್ಗೆ ಒಂದು ನಿರ್ಣಾಯಕ ಹಂತಕ್ಕೆ ಬಂದಿರುವುದು. ಈ ಕಾರಣದಿಂದ ಕಾಲವನ್ನು ತಿಳಿಸುವಲ್ಲಿ ೧. ವರ್ಧಮಾನ ಪುರಾಣ ಲಭ್ಯವಾಗುವುದಕ್ಕೆ ಪೂರ್ವದ ಕಾಲ; ೨.

ವರ್ಧಮಾನ ಪುರಾಣ ಲಭ್ಯವಾದ ಅನಂತರದ ಕಾಲ. ಹೀಗೆ ವಿಭಜನೆ ಮಾಡುವುದರಿಂದ ನಾಗವರ್ಮನ ಕಾಲದ ಸ್ಪಷ್ಟ ಚಿತ್ರ ದೊರೆಯುವುದು. ಅಂತೆಯೇ ಕಾಲವನ್ನು ನಿರ್ಣಯಿಸುವಲ್ಲಿ ಎರಡು ಗುಂಪಿನ ವಿಮರ್ಶಕರನ್ನು ನಾವು ಕಾಣಬಹುದು.

೧. ವರ್ಧಮಾನ ಪುರಾಣ ಲಭ್ಯವಾಗುವುದಕ್ಕೆ ಪೂರ್ವದ ಕಾಲ:

'ವರ್ಧಮಾನ ಪುರಾಣ' ಲಭ್ಯವಾಗುವುದಕ್ಕೆ ಪೂರ್ವದ ಎರಡನೆಯ ನಾಗವರ್ಮನ ಕಾಲದ ಬಗ್ಗೆ ಸಾಕಷ್ಟು ಚರ್ಚೆಮಾಡಿದ ವಿದ್ವಾಂಸರೆಂದರೆ ೧. ಕವಿಚರಿತೆಕಾರರಾದ ಆರ್. ನರಸಿಂಹಾಚಾರ್; ೨. ಎ. ವೆಂಕಟಸುಬ್ಬಯ್ಯ; ೩. ಎಂ.ಗೋವಿಂದ ಪೈ; ೪.ತೀ.ನಂ.ಶ್ರೀಕಂಠಯ್ಯ; ೫. ರಂ.ಶ್ರೀ. ಮುಗಳಿ; ೬. ತಳುಕಿನ ವೆಂಕಣ್ಣಯ್ಯ; ೭. ನಾ. ರಾಜಪುರೋಹಿತ; ೮. ಎಚ್. ಚೆನ್ನಕೇಶವ ಅಯ್ಯಂಗಾರ್ ೯. ಎಂ. ಮರಿಯಪ್ಪಭಟ್ಟ.

೧೧. ವರ್ಧಮಾನ ಪುರಾಣ ಲಭ್ಯವಾದ ಅನಂತರ ಕಾಲದ ಬಗ್ಗೆ ಚರ್ಚಿಸಿದವರಲ್ಲಿ

೧. ಎ. ವೆಂಕಟಸುಬ್ಬಯ್ಯ; ೨. ಸಂಗಮೇಶ ಬಿರಾದಾರ; ೩. ಎಂ.ಎಂ. ಕಲಬುರ್ಗಿ ೪. ಬಿ.ಎಸ್. ಸಣ್ಣಯ್ಯ ಪ್ರಮುಖರು.

೧. ಕನ್ನಡ ಕವಿಚರಿತೆಕಾರರಾದ ಆರ್. ನರಸಿಂಹಾಚಾರ್ಯರು ಜನ್ನನ 'ಅನಂತನಾಥ ಪುರಾಣ'ವನ್ನು ಆಧಾರವಾಗಿಟ್ಟುಕೊಂಡು 'ಜನನಾಥಂ ಜಗದೇಕನಲ್ಲಿ ಕಟಕೋಪಾಧ್ಯಾಯನಾ ನಾಗವರ್ಮನ ಇದಾನೀಂತನ ಶರ್ವವರ್ಮನೆಗಡಂ ಜನ್ನಂಗೆ ಉಪಾಧ್ಯಾಯನ್'' ಎಂಬ ಹೇಳಿಕೆಗೆ ಅನುಗುಣವಾಗಿ "ಎರಡನೆಯ ನಾಗವರ್ಮನು ಚಾಳುಕ್ಯ ಚಕ್ರವರ್ತಿ ಇಮ್ಮಡಿ ಜಗದೇಕನಲ್ಲಿ (೧೧೩೮-೧೧೫೦) ಕಟಕೋಪಾಧ್ಯಾಯನಾಗಿದ್ದ. 'ಯಶೋಧರ ಚರಿತ್ರೆ' ಮತ್ತು 'ಅನಂತನಾಥ ಪುರಾಣ'ದ ಕರ್ತೃ ಜನ್ನನಿಗೆ ನಾಗವರ್ಮನು ಉಪಾಧ್ಯಾಯನಾಗಿರಬೇಕು. ಆ ವೇಳೆಗೆ ಅವನು ವೃದ್ಧನಾಗಿರಬೇಕು" ಎಂದು ಅವನ ಕಾಲವನ್ನು ಸುಮಾರು ೧೧೪೫ ಎಂದು ಅಭಿಪ್ರಾಯ ಪಟ್ಟಿದ್ದಾರೆ.[೧]

ಕವಿಚರಿತೆಕಾರರು ಮುಂದುವರೆದು, 'ಕರ್ಣಾಟಕ ಭಾಷಾ ಭೂಷಣ'ದಲ್ಲಿ ದೀರ್ಘೋಕ್ತಿರ್ನಯಸೇನಸ್ಯ'' ಎಂಬ ನಯಸೇನನ ಸೂತ್ರವನ್ನು ನಾಗವರ್ಮನು ಸ್ವೀಕರಿಸಿರುವುದರಿಂದ ನಾಗವರ್ಮನು ನಯಸೇನನಿಗಿಂತ ಈಚಿನವನಾಗಿರಬೇಕು. ನಯಸೇನನು 'ಧರ್ಮಾಮೃತ'ದ ಕರ್ತೃ. ಅವನ ಕಾಲ ಕ್ರಿ.ಶ.೧೧೧೨ ಎಂದು ತಿಳಿಸಿದರು.[೨]

೨. ಮೇಲಿನ ಅಭಿಪ್ರಾಯವನ್ನು ಎ. ವೆಂಕಟಸುಬ್ಬಯ್ಯನವರು ಸ್ವೀಕರಿಸದೆ "ಕ್ರಿ.ಶ ೧೨೨೩ರಲ್ಲಿ ನಾಗವರ್ಮನು ಜನ್ನನಿಗೆ ಉಪಾಧ್ಯಾಯನಾಗಿದ್ದನೆಂದು (ಈ ಅಭಿಪ್ರಾಯದಿಂದ) ಹೇಳಿದ ಹಾಗಾಗುವುದು. ಇದು ಸುತರಾಂ ಅಸಂಭವವಾದುದು"[೧೩] ಎಂದು ಅಭಿಪ್ರಾಯಪಟ್ಟು, ನಾಗವರ್ಮನ ಕಾಲವನ್ನು ೧೦೧೫-೧೦೪೨ ಎಂದು ತಿಳಿಸಿದರು. ಕವಿಚರಿತೆಕಾರರು ಹೇಳಿದಂತೆ ನಯಸೇನನು 'ಧರ್ಮಾಮೃತ'ದ ಕರ್ತೃವಲ್ಲ. ಅವನು ಮುಳುಗುಂದ ಶಾಸನವೊಂದರಲ್ಲಿ ಉಲ್ಲೇಖಗೊಂಡ ಬೇರೊಬ್ಬ ನಯಸೇನ ಪಂಡಿತನಾಗಿರಬೇಕು. ಅವನ ಸೂತ್ರವನ್ನು ನಾಗವರ್ಮನು ಪಡೆದಿರಬೇಕು. ಅವನು ನಾಗವರ್ಮನಿಗಿಂತ ಹಿಂದೆ ಇದ್ದವನು. ಈ ಕಾರಣಗಳಿಂದ ಕವಿಚರಿತೆಕಾರರ ಕಾಲ ನಿರ್ಣಯವನ್ನು ವೆಂಕಟಸುಬ್ಬಯ್ಯನವರು ಸ್ವೀಕರಿಸಲಿಲ್ಲ.

'ಕರ್ನಾಟಕ ಭಾಷಾಭೂಷಣ'ದ ೮೮ನೆಯ ಸೂತ್ರದಲ್ಲಿ "ಬಹುತಾಪಕ್ಕೆ ಬಿಗುರ್ತು ವಿಷ್ಣು ಪಡೆದಂ ಮತ್ಸ್ಯಾವತಾರಕ್ಕೆ" ಎಂಬ ಪಂಪರಾಮಾಯಣದ ಪದ್ಯ ಭಾಗವನ್ನು ನಾಗವರ್ಮನು ಉದಾಹರಿಸಿರುವುದರಿಂದ ಇವನು ನಾಗಚಂದ್ರನಿಗಿಂತ ಈಚಿನವನಿರಬೇಕೆಂದು ಆರ್. ನರಸಿಂಹಾಚಾರ್ಯರು ತಿಳಿಸಿದರು. ಇದನ್ನು ವೆಂಕಟಸುಬ್ಬಯ್ಯನವರು ಒಪ್ಪದೆ 'ನಾಗಚಂದ್ರನು ೧೦೪೨ರ ಹಿಂದೆಯೇ ಇದ್ದವನು'[೧೪] ಎಂದು ತಿಳಿಸಿದರು.

೩. ಇಮ್ಮಡಿ ನಾಗವರ್ಮನು ಹೇಮಚಂದ್ರನ ಸಮಕಾಲೀನನು. ಹೇಮಚಂದ್ರನ ಕಾಲ ಕ್ರಿ.ಶ ೧೦೮೯-೧೧೭೩. ಅವನು ಗುಜರಾತಿನ ಚಾಳುಕ್ಯ ವಂಶದ ಸಿದ್ಧರಾಜ ಜಯಸಿಂಹನ (ಕ್ರಿ.ಶ. ೧೦೯೪-೧೧೪೫) ಅನಂತರ ಪಟ್ಟಕ್ಕೆ ಬಂದ ಕುಮಾರಪಾಲನಿಗೆ ಗುರು ಸ್ಥಾನದಲ್ಲಿದ್ದವನು. ಕಾರಣ ೨ನೆಯ ನಾಗವರ್ಮನ ಕಾಲ ಕ್ರಿ.ಶ. ೧೨ನೆಯ ಶತಮಾನದ ಉತ್ತರಾರ್ಧ. ಎಂದರೆ ೧೧೫೦-೧೨೦೦ ಎಂದು ಗ್ರಹಿಸಿದೆ" ಎಂದು ಭೀಮರಾವ್ ಚಿಟಗುಪ್ಪಿಯವರು ಅಭಿಪ್ರಾಯ ಪಟ್ಟಿರುತ್ತಾರೆ.[೧೫]

೪. "ವಸ್ತುಕೋಶ, ಕಾವ್ಯಾವಲೋಕನ, ಕರ್ಣಾಟಕ ಭಾಷಾ ಭೂಷಣಗಳ ಜೈನ ನಾಗವರ್ಮನು ಕ್ರಿ.ಶ. ೧೧೨೦-೧೨೦೦ರೊಳಗೆ ಇದ್ದಿರಬೇಕು"[೧೬] ಎಂದು ಎಂ. ಗೋವಿಂದ ಪೈಯವರ ಅಭಿಮತ.

ಇವು ಎರಡನೆಯ ನಾಗವರ್ಮನ 'ವರ್ಧಮಾನ ಪುರಾಣ' ಲಭ್ಯವಾಗುವುದರ ಪೂರ್ವದಲ್ಲಿ ನಡೆದ ವಾದ ವಿವಾದಗಳ ರೇಖಾಚಿತ್ರಗಳು.

II ೫. ಎರಡನೆಯ ನಾಗವರ್ಮನ 'ವರ್ಧಮಾನ ಪುರಾಣ'ವು ಇತ್ತೀಚೆಗೆ ದೊರೆತಿದ್ದು, ಅದರ ಕಾಲವನ್ನು ಕೃತಿಯ ಸಂಪಾದಕರಾದ ಬಿ.ಎಸ್.ಸಣ್ಣಯ್ಯನವರು ಕ್ರಿ.ಶ. ೧೦೪೨ ಎಂದು ತಿಳಿಸಿದರು.[೧೭] "ಸಣ್ಣಯ್ಯನವರು ತಮಗೆ ಉಚಿತಕಂಡಂತೆ ಪದ್ಯವನ್ನು ಪರಿಷ್ಕರಿಸಿ ಪರಿಷ್ಕೃತ ಪದ್ಯದ ಆಧಾರದ ಮೇಲೆ ನಾಗವರ್ಮನ ಕಾಲವನ್ನು ಕ್ರಿ.ಶ. ೧೦೪೨ ಎಂದು ನಿರ್ಧರಿಸಿದರು. ಇದರಿಂದಾಗಿ ಕವಿಚರಿತೆಕಾರ ಆರ್. ನರಸಿಂಹಾಚಾರ್ಯರು ನಿರ್ಣಯಿಸಿ, ಈ ವರೆಗೆ ಎಲ್ಲ ವಿದ್ವಾಂಸರಿಂದ ಅಂಗೀಕೃತವಾಗಿದ್ದ ಕಾಲ ಕ್ರಿ.ಶ. ೧೧೪೫ ಮಾರ್ಪಾಟಾಗಬೇಕಾಯಿತು."[೧೮] ಎಂದು ಎಂ.ವಿ. ಸೀತಾರಾಮಯ್ಯನವರು ತಿಳಿಯಪಡಿಸಿದರು.

೬. "ವಸುವರ್ಗಾಂಕ......." ಎಂಬ ವರ್ಧಮಾನ ಪುರಾಣದ ಪದ್ಯವೊಂದರ ಅರ್ಥವಿವೇಚನೆಯಿಂದ ಸಣ್ಣಯ್ಯನವರು ನಿರ್ಣಯಿಸಿದ ಕಾಲ (೧೦೪೨), ಎಂ.ವಿ. ಸೀತಾರಾಮಯ್ಯನವರ ಗಣಿತಕ್ಕೆ ಸಮೀಪವಾಗಿದ್ದು, ಬಿರಾದಾರರ ಕಾಲಕ್ಕೆ ದೂರ ಸರಿಯುತ್ತದೆ. ಎಂ.ವಿ. ಸೀತಾರಾಮಯ್ಯನವರು ನಾಗವರ್ಮನ ಕಾಲವನ್ನು ಕ್ರಿ.ಶ ೧೦೪೨ ಅಕ್ಟೋಬರ್ ತಿಂಗಳ ೭ನೆಯ ತಾರೀಖು ಎಂದು ತಿಳಿಸಿರುತ್ತಾರೆ. ಸಂಗಮೇಶ ಬಿರಾದಾರರು "ನಾಗವರ್ಮನ ಗುಣವರ್ಮನ ಶಂಖವರ್ಮನ ಅಧ್ವಾನಂಗಳ್" ಎಂಬುದರ ಮೇರೆಗೆ ಶಂಖವರ್ಮನ ಕಾಲ ಕ್ರಿ.ಶ.೧೧೦೦ ಎಂದು ಕವಿಚರಿತೆಕಾರರು ಸೂಚಿಸಿರುವುದರಿಂದ ನಮ್ಮ ೨ನೆಯ ನಾಗವರ್ಮನು ಕ್ರಿ.ಶ. ೧೧೦೦ಕ್ಕೆ ಈಚಿನವನು"[೧೯] ಎಂದು ನಿರ್ಧರಿಸಿರುತ್ತಾರೆ. ಅಲ್ಲದೆ ನಾಗವರ್ಮನು ಹೇಮಚಂದ್ರನ 'ಕಾವ್ಯಾನುಶಾಸನ'ವನ್ನು ಅನುಸರಿಸಿದ್ದಾನೆಂಬ ಊಹೆಯ ಮೇಲೆ ಹೇಮಚಂದ್ರನ ಕಾಲ ಕ್ರಿ.ಶ. ೧೦೮೮-೧೧೨೩ ಎಂದೂ ಆ ಕಾಲವೇ ನಾಗವರ್ಮನ ಕಾಲವೆಂದು ಕೂಡ ಬಿರಾದಾರರು ತಿಳಿಸಿರುತ್ತಾರೆ.

೭. ನಾಗವರ್ಮನ ಕಾಲ ನಿರ್ಧಾರದಲ್ಲಿ ತೊಡಕಾಗಿರುವ ಮುಖ್ಯ ಸಮಸ್ಯೆಗಳನ್ನು ಹೀಗೆ ಪಟ್ಟಿಮಾಡಬಹುದು:

(೧) ನಾಗವರ್ಮನೆಂಬ ಒಂದೇ ಹೆಸರಿನಿಂದ ದೊರೆತ ಕೃತಿಗಳು; (೨) ನಯಸೇನನೆಂಬುವನ ಸೂತ್ರ ದೀರ್ಘೋಕ್ತಿರ್ನಯಸೇನಸ್ಯ; (೩) ಭಾಷಾ ಭೂಷಣದಲ್ಲಿ ವ್ಯಕ್ತವಾಗಿರುವ ನಾಗಚಂದ್ರ ಕವಿವಿರಚಿತ ಪಂಪ ರಾಮಾಯಣ ಪದ್ಯವೊಂದರ ಲಕ್ಷ್ಯವಿದು 'ಬಹುತಾಪಕ್ಕೆ ಬಿಗುರ್ತು ವಿಷ್ಣು ಪಡೆದಂ ಮತ್ಸ್ಯಾವತಾರಕ್ಕೆ' (ಪಂ. ರಾ.೭-೯೮) ಎಂಬುದು (೪) 'ವರ್ಧಮಾನ ಪುರಾಣ'ದಲ್ಲಿ ಪಾಠಾಂತರಕ್ಕೆ ಕ್ಲೇಶವಾಗಿರುವ ವಸುವರ್ಗಾಂಕಮಿದ..... ಭೂಭೃದ್ವತ್ಸರಂ....." ಎಂಬ ವಾಕ್ಯ.

ಒಟ್ಟಾರೆ 'ವರ್ಧಮಾನ ಪುರಾಣ'ದ ಆಧಾರದಿಂದ ಭೂಷಣವನ್ನು ಬರೆದ ನಾಗವರ್ಮನ ಕಾಲ ಎಲ್ಲ ರೀತಿಯಿಂದ ಕ್ರಿ.ಶ ೧೦೪೨ ಎಂದು ಸ್ವೀಕರಿಸಬಹುದು.

**ಮತ:**

ನಾಗವರ್ಮನ ಮತದ ಬಗ್ಗೆ ಮೊದಲಿನಿಂದ ವಿದ್ವಾಂಸರಲ್ಲಿ ಜಿಜ್ಞಾಸೆಯಿತ್ತು. 'ವರ್ಧಮಾನ ಪುರಾಣ' ದೊರೆತಂದಿನಿಂದ ಅವನು ಜೈನ ಮತದವನೆಂದು ಸಾಮಾನ್ಯ ಅಭಿಪ್ರಾಯವಾಗಿತ್ತು. ಮತದ ಬಗ್ಗೆ ಚರ್ಚಿಸಿದ ವಿದ್ವಾಂಸರ ಅಭಿಪ್ರಾಯಗಳನ್ನು ಕ್ರೋಡೀಕರಿಸಿ ಒಂದು ನಿರ್ಣಯವನ್ನು ತೆಗೆದುಕೊಳ್ಳಬಹುದು:

೧. ಬಿ.ಎಲ್. ರೈಸರು ಈತನು ಜೈನನಿದ್ದರೂ ಶೈವ ಮತದಿಂದ ಪ್ರಭಾವಿತನಾಗಿದ್ದಾನೆ[೨೦] ಎಂದರು.

೨. ಕಿಟ್ಟೆಲ್‌ರವರು "ಶೈವನೆಂದು ತೋರುತ್ತಿದ್ದರೂ ಜೈನನೆಂಬುದು ಖಚಿತ"[೨೧] ಎಂದರು.

೩. ಆರ್. ನರಸಿಂಹಾಚಾರ್ಯರು ಯಾವ ಮತದವನೆಂದು ನಿರ್ಧರಿಸದೆ ತಟಸ್ಥರಾದರು.

೪. ಗೋವಿಂದ ಪೈಯವರು ನಾಗವರ್ಮನು ವೈದಿಕ ಬ್ರಾಹ್ಮಣನೆಂದು ತೀರ್ಮಾನಿಸಿದರು.

೫. ರಂ.ಶ್ರೀ. ಮುಗಳಿಯವರು ಗೋವಿಂದ ಪೈಯವರ ಅಭಿಪ್ರಾಯವನ್ನೇ ಸ್ವೀಕರಿಸಿದ್ದರೂ ಈ ಕಾಲದ ಕವಿಗಳಲ್ಲಿ ಜೈನ ಬ್ರಾಹ್ಮಣ, ಬ್ರಾಹ್ಮಣ, ಕ್ಷತ್ರಿಯ ಮತಗಳ ಸಮ್ಮಿಲನ ಕಂಡು ಬರುವುದೆಂದು ಹೇಳಿದರು. ಅಲ್ಲದೆ, "ಒಂದನೆಯ ನಾಗವರ್ಮನು ವೈದಿಕನೋ, ಜೈನನೋ ಎಂಬ ಸಂದೇಹಕ್ಕೆ ಆಸ್ಪದವಿದ್ದರೆ, ಎರಡನೆಯ ನಾಗವರ್ಮ ನಿಸ್ಸಂದೇಹವಾಗಿ ಜೈನ."

೬. ಭೀಮರಾವ್ ಚಿಟಗುಪ್ಪಿಯವರು ನಾಗವರ್ಮನೆಂಬ ಹೆಸರು ಆತನು ಬ್ರಾಹ್ಮಣನಲ್ಲವೆಂದು ಸೂಚಿಸುತ್ತದೆ. ಶರ್ಮ ಬ್ರಾಹ್ಮಣ ಸೂಚಕ. ವರ್ಮ ಕ್ಷತ್ರಿಯ ಸೂಚಕ ಅಭಿದಾನಗಳು. ಗುಣವರ್ಮ, ನಾಗಚಂದ್ರ, ಇಂದ್ರ-ಇವರೆಲ್ಲ ಜೈನ ವಂಶದ ರಾಜಮನೆತನದವರು ಅರ್ಥಾತ್ ರಾಷ್ಟ್ರಕೂಟದರಸರು.[೨೪]

೭. "..... ಕಾವ್ಯಾವಲೋಕನಾದಿ ಕರ್ತೃ ೧೧, ೧೨ನೆಯ ಶತಮಾನದವನು, ಜೈನ ಮತೀಯ.................. ಎಂಬುದು ಪ್ರೊ.ಸಿ.ಪಿಕೆಯವರ ಅಭಿಪ್ರಾಯ.[೨೫]

೮. "ಈ ಗ್ರಂಥದ ಕರ್ತೃವಾದ ಎರಡನೆಯ ನಾಗವರ್ಮನು ಜೈನನೆಂಬುದು ಸುವ್ಯಕ್ತ" ಎಂದು ಪ್ರೊ. ಎಚ್.ಎಂ. ಶಂಕರನಾರಾಯಣರಾಯರ ಅಭಿಪ್ರಾಯ.

'ವರ್ಧಮಾನ ಪುರಾಣ'ದಲ್ಲಿ ಕಂಡುಬರುವ ಆಧಾರಗಳ ಬೆಳಕಿನಲ್ಲಿ ಅದನ್ನು ಬರೆದ ನಾಗವರ್ಮ ಜೈನ ಬ್ರಾಹ್ಮಣನೆಂದು ನಿರ್ಧರಿಸಲು ಅವಕಾಶವಿದೆ. ಈ ನಿಟ್ಟಿನಲ್ಲಿ ಕವಿಯ ಬಗೆಗಿನ ಕೆಲವು ವಿಷಯಗಳ ಮೇಲೆ 'ವರ್ಧಮಾನ ಪುರಾಣ' ಬೆಳಕು ಚೆಲ್ಲಿದೆ.

**ವರ್ಧಮಾನ ಪುರಾಣಂ:**

ಇತ್ತೀಚೆಗೆ ನಾಗವರ್ಮನ 'ವರ್ಧಮಾನ ಪುರಾಣಂ' ಎಂಬ ಗ್ರಂಥವೊಂದು ಮೂಡಬಿದರೆಯ ಶ್ರೀ ದಿಗಂಬರ ಜೈನ ಧರ್ಮಶಾಲೆಯ ಹಸ್ತಪ್ರತಿಗಳ ಕಟ್ಟಿನಲ್ಲಿ ದೊರೆತಿದ್ದು, ಅಲ್ಲಿ ನಾಗವರ್ಮನ ಸ್ವವಿಷಯಗಳ ಬಗ್ಗೆ ಹೆಚ್ಚಿನ ಮಾಹಿತಿ ದೊರೆಯುತ್ತದೆ. ಅಲ್ಲದೆ ಕವಿ ಕಾವ್ಯಗಳ ಮೇಲೆ ಹೊಸ ವಿಚಾರಧಾರೆ ಪ್ರವಹಿಸಿದೆ.

ಈ ಪ್ರತಿಯ ಪ್ರಕಾರ ನಾಗವರ್ಮನ ತಂದೆ ವಿಪ್ರಕುಲಪ್ರದೀಪನಾದ ದಾಮೋದರ. ತಾಯಿ ವಿನಯಾಳಂಕೃತೆಯಾದ ವೀರಕಬ್ಬೆ. ಗುರು ಶ್ರೀ ವೀರ ಭಟ್ಟಾರಕರು, ಸದ್ಗುಣ ಮಂಡನ ಜಿನಮತವನಹಂಸ, ವಿಪ್ರವಂಶಾವತಂಸ, ಸಚ್ಚಾರಿತ್ರಾಭಿರಾಮ, ವಿನಯನಯನಿಧಾನ, ಸ್ವಾನುಗತ ಶುಭಕರ್ಮ.

ನಾಗವರ್ಮನು ತಾನು ಕವಿತಾಗುಣೋದಯ, ವಾಕ್ಯವಿನೋದ, ಕವಿಕರ್ಣಪೂರನೆಂದು ತನಗಿದ್ದ ಬಿರುದುಗಳನ್ನು 'ವರ್ಧಮಾನ ಪುರಾಣ'ದಲ್ಲಿ ಹೇಳಿಕೊಂಡಿದ್ದಾನೆ.

ವ್ಯಾಕರಣ, ಛಂದಸ್ಸು, ಅಲಂಕಾರ, ಕೋಶ- ಇವು ಕಾವ್ಯಾಭ್ಯಾಸಿಗಳಿಗೆ ಪರಿಕರಗಳು. ತಾನು ಸುಶಿಕ್ಷಿತನಾಗಿದ್ದು, ಕಾವ್ಯಾಂಗಗಳಾದ ಚತುಷ್ಟಯ ವಿಷಯಗಳ ಬಗ್ಗೆ ಕೃತಿ ರಚಿಸಿರುವುದಾಗಿ ತಿಳಿಸಿದ್ದಾನೆ. ಇಲ್ಲಿಯವರೆವಿಗೂ ನಾಗವರ್ಮ ಕೇವಲ ಲಾಕ್ಷಣಿಕನಾಗಿದ್ದ, ಶಾಸ್ತ್ರಜ್ಞನಾಗಿದ್ದ. ಈಗ 'ವರ್ಧಮಾನ ಪುರಾಣ' ಉಪಲಬ್ಧವಾಗಿ ಕವಿಯಾದ. ಸರಸ ಕವೀಶ್ವರರಲ್ಲಿ ಕವೀಶ್ವರನು, ಲಾಕ್ಷಣಿಕರಲ್ಲಿ ಲಾಕ್ಷಣಿಕನು ಎನಿಸಿಕೊಂಡ.

ತನ್ನ 'ವರ್ಧಮಾನ ಪುರಾಣ'ದ ಪ್ರಾರಂಭದಲ್ಲಿ ಸಂಸ್ಕೃತ ಕವಿಗಳಾದ ಬಾಣ, ಮಯೂರ, ಕಾಳಿದಾಸರನ್ನು ಸ್ತುತಿಸಿದ್ದಲ್ಲದೆ ಕನ್ನಡದ ದಿಗ್ಗಜರೆನಿಸಿಕೊಂಡ, ತನಗಿಂತಲೂ ಪೂರ್ವದಲ್ಲಿದ್ದ ಕವಿಗಳಾದ ಅಸಗ, ಗುಣನಂದಿ, ಗಜಗ, ಪಂಪ, ಪೊನ್ನ, ಶ್ರೀವಿಜಯ, ಗುಣವರ್ಮ, ರನ್ನ, ನಾಗದೇವ ಇವರನ್ನು ಮನಸಾರೆ

ಸ್ತುತಿಸಿದ್ದಾನೆ. ಅವರಲ್ಲಿ ನಾಗವರ್ಮನೂ ಒಬ್ಬ. ಈ ನಾಗವರ್ಮನು 'ನಾಗವರ್ಮ' ನೆಂಬುವನನ್ನು ಸ್ತುತಿಸಿರಬೇಕಾದರೆ ತನಗಿಂತ ಪೂರ್ವದಲ್ಲಿ ಮಗದೊಬ್ಬ ನಾಗವರ್ಮನೆಂಬುವನು ಇದ್ದುದು ದಿಟವಾಗುತ್ತದೆ. ಅವನೇ ಮೊದಲನೆಯ ನಾಗವರ್ಮನೇಕಾಗಿರಬಾರದು? ಹೀಗೆಂದು ಹಲವರ ಪ್ರಶ್ನೆ. ಶ್ರೀವಿಜಯನು ಇಲ್ಲಿಯವರೆಗೆ 'ಕವಿರಾಜ ಮಾರ್ಗ'ಕಾರನೆಂದು ಮಾತ್ರ ತಿಳಿದಿತ್ತು. ಆದರೆ ಈಗ ಅವನು 'ರಘುವಂಶ ಪುರಾಣ'ವೆಂಬ ಒಂದು ಗ್ರಂಥವನ್ನು ಬರೆದಂತೆ ತಿಳಿದುಬರುತ್ತದೆ. ಅಂತೆಯೆ ನಾಗದೇವನೆಂಬ ಕವಿ 'ಸುಲೋಚನಾ ಚಾರಿತ್ರ' ಎಂಬ ಗ್ರಂಥವನ್ನು, ನಾಗವರ್ಮ 'ವತ್ಸರಾಜ ಚಾರಿತ್ರ್ಯ'ವನ್ನು ಬರೆದಿರುವುದಾಗಿ ತಿಳಿದು ಬಂದಿದೆ. ಇವೆಲ್ಲ ಹೊಸ ವಿಷಯಗಳು. ಆದರೆ ಆ ಕೃತಿಗಳು ಉಪಲಬ್ಧವಾಗಿಲ್ಲ.

ಒಟ್ಟಿನಲ್ಲಿ ನಾಗವರ್ಮನ 'ವರ್ಧಮಾನ ಪುರಾಣ'ದಿಂದ ಕೆಲವು ಹೊಸ ವಿಷಯಗಳು ಬೆಳಕಿಗೆ ಬಂದಿರುವುದು ಮಾತ್ರ ನಿಜ.

**ನಾಗವರ್ಮನ ಕೃತಿಗಳು:**

ಕಾವ್ಯಾವಲೋಕನ, ಕರ್ಣಾಟಕ ಭಾಷಾಭೂಷಣಂ, ಅಭಿಧಾನ ವಸ್ತುಕೋಶ, ಛಂದೋವಿಚಿತಿ, ವರ್ಧಮಾನ ಪುರಾಣಂ - ಇವು ನಾಗವರ್ಮನ ಕೃತಿಗಳು. ಹೀಗೆಂದು ಬಹುತೇಕ ವಿದ್ವಾಂಸರ ಅಭಿಮತ. ಕಾರಣ ಈ ಕೃತಿಗಳನ್ನೇ ದೃಷ್ಟಿಯಲ್ಲಿಟ್ಟುಕೊಂಡು ಅವುಗಳ ಪರಿಚಯವನ್ನು ಇಲ್ಲಿ ಕೊಡಲಾಗಿದೆ. ಇತ್ತೀಚಿನ ಸಂಶೋಧನೆಯ ಫಲದಿಂದ ಎರಡನೆಯ ನಾಗವರ್ಮನು 'ವತ್ಸರಾಜ ಚರಿತ್ರೆ' ಮತ್ತು 'ಪುಷ್ಪದಂತ ಪುರಾಣ'[೨೭] ಇವುಗಳನ್ನು ಕೂಡ ಬರೆದಿರಬಹುದೆಂಬ ಮಾತು ಈಗ ಕೇಳಿಬರುತ್ತಿದೆ. ಪ್ರಸ್ತುತ ಪ್ರಬಂಧವಲ್ಲಿ ಉಪಲಬ್ಧ ಕೃತಿಗಳ ಪರಿಚಯ ಮಾತ್ರ ಕೊಡಲಾಗಿದೆ.

**೧. ಕಾವ್ಯಾವಲೋಕನ:**

ಇದೊಂದು ಅಲಂಕಾರ ಗ್ರಂಥ. ನಾಗವರ್ಮನ ಗ್ರಂಥಗಳಲ್ಲೆಲ್ಲ ಪ್ರಸಿದ್ಧವಾದುದು. ಇದರಲ್ಲಿ (ಅ) ಶಬ್ದಸ್ಮೃತಿ. (ಆ) ಕಾವ್ಯಾಮಲ ವ್ಯಾವೃತ್ತಿ; (ಇ) ಗುಣವಿವೇಕ; (ಈ) ರೀತಿ ಕ್ರಮ ರಸ ನಿರೂಪಣೆ; (ಉ) ಕವಿಸಮಯ - ಎಂಬ ೫ ಅಧಿಕರಣಗಳಿವೆ. ಅಲ್ಲಿಯ ಶಬ್ದಸ್ಮೃತಿ ಹಳಗನ್ನಡ ವ್ಯಾಕರಣಾಂಶಗಳನ್ನು ಒಳಗೊಂಡ ಒಂದು ಶ್ರೇಷ್ಠ ಕೃತಿ. ಶಬ್ದಸ್ಮೃತಿಯಲ್ಲಿ ಮತ್ತೆ ೧. ಸಂಜ್ಞೆ ೨.ಸಂಧಿ; ೩. ನಾಮ ೪. ಸಮಾಸ; ೫. ತದ್ಧಿತ; ೬. ಆಖ್ಯಾತ - ಎಂಬ ಆರು ಉಪವಿಭಾಗಗಳಿವೆ. ಈ ಕೃತಿಯಿಂದ ಮುಂದಿನ ವೈಯಾಕರಣರಾದ ಕೇಶಿರಾಜ, ಭಟ್ಟಾಕಳಂಕರು ವಿಶೇಷ ಪ್ರಯೋಜನ ಪಡೆದಿದ್ದಾರೆ.

'ಕಾವ್ಯಾವಲೋಕನ' ವ್ಯಾಕರಣ, ಛಂದಸ್ಸು, ಕೋಶ, ಅಲಂಕಾರ- ಇವುಗಳನ್ನು ಗಾಢವಾಗಿ ಪರಿಚಯಿಸುವ ನಾಗವರ್ಮನ ಪ್ರಾಚೀನ ಕೃತಿ. ಇದನ್ನು ಕುರಿತು ಕವಿಯೇ

“ಕವಿಗಳ್ಗಿದುಕೆಯ್ಗನ್ನಡಿ” ಎಂದು ಮನಸಾರೆ ಪ್ರಶಂಸಿಸಿದ್ದಾನೆ. ಇದು “ಕವಿತೆಗೆ ಬಾಟಬ್ರೊವಲ್ ಉದಾತ್ತ ವಾಗ್ದೇವತೆಗೆ ಉದ್ಭವ ಹೇತು”. ಇದು “ಕೋಶ ಗೃಹದಂತೆ.” ಇಂಥ ಕೃತಿಯೊಂದು “ಭುವನದೊಳ್ ಪರೆದು ನಿಲ್ವುದೊಂದು ಅಚ್ಚರಿಯೇ” ಎಂದು ತನ್ನ ಬಗ್ಗೆ ತಾನೆ ಮೆಚ್ಚಿಕೊಂಡಿರುತ್ತಾನೆ. ಇದು ಆತ್ಮಪ್ರಶಂಸೆ ಎನಿಸಿದರೂ ಕೃತಿ ನಿಜವಾಗಿಯೂ ರತ್ನದ ಗಣಿಯೇ. ಪ್ರಶಂಸೆಗೆ ಯೋಗ್ಯವಾದುದು. ತಾನು ಯಾವ ಯಾವ ಕೃತಿಗಳನ್ನು ಬರೆದಿದ್ದೇನೆಂದು ಅಲ್ಲಿಯ ಕಂದ ಪದ್ಯವೊಂದರಲ್ಲಿ ನಿವೇದಿಸಿಕೊಂಡಿದ್ದಾನೆ:

ಛಂದೋವಿಚಿತಿಯಲಂಕೃತಿ
ಸಂದಭಿಧಾನ ವಸ್ತುಕೋಶಂ ಎಂಬಿವು ವಾಕ್‌ಶ್ರೀ
ಸುಂದರಿಗೆ ರತ್ನಮಂಡನ
ಸಂಪದಮೊಳ್ ವರ್ತಿಪ್ಪುವು ನಾಗವರ್ಮನ ಕೃತಿಗಳ್॥

ಮೇಲೆ ನಿರೂಪಿಸಿದ ಛಂದೋವಿಚಿತಿಯು ಇನ್ನೂ ದೊರೆತಿಲ್ಲ. ಅದು ಛಂದೋಂಬುಧಿಯಲ್ಲಿ ಸೇರಿಹೋಗಿದೆಯೆಂದು ಕೆಲವರು, ಛಂದೋವಿಚಿತಿಯೇ ಛಂದೋಂಬುಧಿಯೆಂದು ಮತ್ತೆ ಕೆಲವರು ತಿಳಿದಿರುತ್ತಾರೆ. ಅದು ಹೇಮಚಂದ್ರನ ‘ರತ್ನ ಮಂಜೂಷ’ವೇ ಎಂದು ಭೀಮರಾವ್ ಚಿಟಗುಪ್ಪಿಯವರು ಅಭಿಪ್ರಾಯ-ಪಟ್ಟಿರುತ್ತಾರೆ.[28] ನಾಗವರ್ಮನ ಈ ಕೃತಿಯನ್ನು ಕುರಿತು ಆರ್. ನರಸಿಂಹಾಚಾರ್ಯರು "In the whole field of Kannada literature, he stands alone in this respect. His works are standard authorities and their importance for the study of language is acknowledged by all"[29] ಎಂದು ಹೊಗಳಿದ್ದಾರೆ. ನಾಗವರ್ಮನ ಕಾಲದಲ್ಲಿ ಸಂಸ್ಕೃತಕ್ಕೆ ತುಂಬಾ ಮಾನ್ಯತೆ ಇತ್ತು. ದೇಶಭಾಷೆಗಳ ಜೊತೆಗೆ ಸಂಸ್ಕೃತ ಭಾಷೆಯಲ್ಲೂ ಗ್ರಂಥ ರಚನೆಯನ್ನು ಮಾಡುತ್ತಿದ್ದರು. ಉದಾಹರಣೆಗೆ: ಸಮಂತಭದ್ರ, ಜಿನಸೇನ, ಗುಣಭದ್ರಾದಿ ಜೈನ ಲಾಕ್ಷಣಿಕರು ಕನ್ನಡಿಗರೇ ಆಗಿದ್ದರೂ ಅವರು ಸಂಸ್ಕೃತ ಭಾಷೆಯಲ್ಲಿ ಗ್ರಂಥ ರಚನೆ ಮಾಡಿರುವರು. ಅಂತೆಯೆ ಪಂಪ, ಪೊನ್ನ, ರನ್ನ ಮುಂತಾದ ಕವಿಗಳು ಉಭಯಭಾಷಾ ವಿಶಾರದರಾಗಿದ್ದರು. ಕನ್ನಡ ವ್ಯಾಕರಣವನ್ನು ನಾಗವರ್ಮ ಸಂಸ್ಕೃತದಲ್ಲಿ ಏಕೆ ಬರೆದ ಎಂಬುದು ಕುತೂಹಲದ ವಿಷಯ. ವ್ಯಾಕರಣಕ್ಕೆ ಬೇಕಾದ ಖಚಿತತೆ, ಸಮರ್ಪಕತೆ, ಸಂಕ್ಷಿಪ್ತತೆ, ಸಂಸ್ಕೃತದಲ್ಲಿ ಮಾತ್ರ ಸಾಧ್ಯ ಎಂದು ನಾಗವರ್ಮ ಭಾವಿಸಿದ್ದನೇನೋ. ತೆಲುಗು ವ್ಯಾಕರಣಕಾರರು ಕೂಡ ಇದೇ ಅಭಿಪ್ರಾಯದಿಂದ ಕೆಲವು ವ್ಯಾಕರಣ ಗ್ರಂಥಗಳನ್ನು ಸಂಸ್ಕೃತದಲ್ಲಿ ಬರೆದಿದ್ದಾರೆ. ನಾಗವರ್ಮ ‘ಶಬ್ದಸ್ಮೃತಿ’ಯನ್ನು ಕನ್ನಡದಲ್ಲಿ

ಬರೆದು ಮತ್ತೆ ಸಮಗ್ರ ವ್ಯಾಕರಣವನ್ನು ಬರೆಯುವಾಗ ಮೇಲಿನ ಕಾರಣದಿಂದ ಸಂಸ್ಕೃತ ಭಾಷೆಯನ್ನು ಆರಿಸಿಕೊಂಡಿರಬಹುದು.

ಕಾವ್ಯಾವಲೋಕನದ 'ಶಬ್ದಸ್ಮೃತಿ' ಒಂದು ಲಕ್ಷಣ ಗ್ರಂಥವಾಗಿದೆ. ಅದು ಸಂಸ್ಕೃತ ಲಾಕ್ಷಣಿಕರನ್ನು ಅನುಸರಿಸಿ ಅಲಂಕಾರ ಪ್ರಸ್ತಾವನೆ ಮಾಡಿರುವುದಲ್ಲದೆ, ಸಮಗ್ರ ವ್ಯಾಕರಣ ಗ್ರಂಥವಾಗಿ ಪರಿಣಮಿಸಿದೆ. ಇದರೊಂದಿಗೆ ಸಂಸ್ಕೃತ ಭಾಷೆಯಲ್ಲಿ ಕನ್ನಡ ವ್ಯಾಕರಣವನ್ನು ಬರೆದ 'ಕರ್ಣಾಟಕ ಭಾಷಾ ಭೂಷಣ'ಕ್ಕೆ ಪ್ರಥಮ ಸ್ಥಾನ ಸಂದಿರುವುದು ಸಮಂಜಸವೇ ಆಗಿದೆ

ಶಬ್ದಸ್ಮೃತಿ, ಕರ್ಣಾಟಕ ಭಾಷಾ ಭೂಷಣ ಮತ್ತು ಕೇಶಿರಾಜನ ಶಬ್ದಮಣಿ ದರ್ಪಣ ಕೆಲವು ವಿಷಯಗಳಲ್ಲಿ ಒಂದೇ ರೀತಿ .ಇವೆ. ಕೆಲವು ವಿಷಯಗಳಲ್ಲಿ ಒಂದಕ್ಕೊಂದು ಪೂರಕವಾಗಿವೆ. 'ಶಬ್ದಸ್ಮೃತಿ'ಯ ಕಂದಪದ್ಯಗಳಲ್ಲಿ ವರ್ಣಸಮಾಮ್ನಾಯ ಸ್ಪಷ್ಟವಾಗಿಲ್ಲ. ಆದರೆ ನಾಗವರ್ಮನ ಭೂಷಣದಲ್ಲಿ ಇದು ಖಚಿತವಾಗಿದೆ. ಶಬ್ದಸ್ಮೃತಿಯು "ಅದ್ವಕ್ಷರದಿಂ ಬರೆ ಪದಿನಾಲ್ಕು ಸ್ವರಗಳ್"[೨೮] (ಸೂತ್ರ ೩) ಎಂದಿದ್ದರೆ ಭೂಷಣದಲ್ಲಿ "ತೇಷ್ವಾದೌ ಚತುರ್ದಶಸ್ವರಾಃ" (ಸೂತ್ರ ೩೧) ಎಂದಿದೆ. ಅದನ್ನೇ ಕೇಶಿರಾಜನು "ಅಕಾರದಿಂ ಮೊದಲಾಗಿರೆ ಪದಿನಾಲ್ಕು ಸ್ವರಂಗಳ್" (ಶ.ಮ.ದ ಸೂತ್ರ ೧೩) ಎಂದಿದ್ದಾನೆ. ನಾಗವರ್ಮನ ವರ್ಣಮಾಲೆಯ ಸ್ವತಂತ್ರ ವಿಚಾರಧಾರೆ ಮತ್ತು ಸ್ವೋಪಜ್ಞತೆ ಕೇಶಿರಾಜನಿಗೆ ಮಾದರಿಯಾಗಿದೆ. ನಾಗವರ್ಮನು ರಳ, ಕುಳ ಗಳ ಬಗ್ಗೆ ಸ್ಪಷ್ಟ ಮಾಹಿತಿ ನೀಡಿದ್ದಾನೆ. ಇದರೊಂದಿಗೆ ಕ್ಷಳದ ಪ್ರಸ್ತಾವನೆಯೂ ಇದೆ. ಸ್ಮೃತಿ,ದರ್ಪಣಗಳು ಹೇಳಿರುವ ನಾಮಿಯ ಬಗ್ಗೆ ಕ.ಭಾ.ಭೂ.ಚಕಾರವೆತ್ತದೆ ಇರುವುದು ಗಮನಾರ್ಹ.ಸ್ಮೃತಿ ಸಂಧ್ಯಕ್ಷರಗಳ ಬಗೆಗೆ ಹೇಳಿದರೆ ಭೂಷಣದಲ್ಲಿ ಹೇಳಿಲ್ಲ. ಬಿಂದು, ವಿಸರ್ಗದ ಬಗ್ಗೆ ಹೇಳಿದರೂ ಅವುಗಳನ್ನು ವರ್ಣಮಾಲೆಗೆ ಸೇರಿಸಬೇಕೋ ಬೇಡವೋ ತಿಳಿಯದಾಗಿದೆ. ಅವನ ಮಹಾಪ್ರಾಣದ ನಿರೂಪಣೆ ಕನ್ನಡದಲ್ಲಿ ಮಹಾಪ್ರಾಣ-ಗಳಿಲ್ಲವೆಂಬ ಕಲ್ಪನೆಗೆ ಈಡಾಗಿದೆ. ಕನ್ನಡ ಭಾಷೆಯ ಯ,ರ,ಲ,ವ,ಣ, ನ, ಳಾಂತ ಶಬ್ದಗಳನ್ನು ಕುರಿತು ನಾಗವರ್ಮನು ಪ್ರಸ್ತಾಪಿಸಿಲ್ಲ. ದೇಶೀಯಾಕ್ಷರಗಳಾದ ಎ ಮತ್ತು ಒ ಕಾರಗಳು ಭಾಷೆಯಲ್ಲಿ ಕ್ವಚಿತ್ ಪ್ರಯೋಗಗಳೆಂದು ಅಭಿಪ್ರಾಯ ಪಟ್ಟಿದ್ದಾನೆ. ಅವರ್ಗೀಯ ವ್ಯಂಜನಾಕ್ಷರಗಳಲ್ಲಿ 'ಳ'ವನ್ನೂ ಬಿಟ್ಟಿದ್ದಾನೆ. ಕೇಶಿರಾಜನು ಇದನ್ನು ಸ್ವೀಕರಿಸಿದ್ದಾನೆ. ರ-ಜ-ದ-ಟ-ಲ-ಳ-ಈವರ್ಣ ದ್ವಯಗಳನ್ನು ವರ್ಣಾವೃತ್ತಿಯಲ್ಲಿ ಬಳಸಬೇಕೋ ಬೇಡವೋ ನಾಗವರ್ಮನಲ್ಲಿ ಸಂದಿಗ್ಧತೆ ತಲೆದೋರಿದೆ. ಆದರೆ ಕೇಶಿರಾಜನು ಇದನ್ನು ಸ್ಪಷ್ಟಪಡಿಸಿದ್ದಾನೆ. ಪ್ರಾಸ, ಯಮಕ, ಗಮಕಗಳಲ್ಲಿ ಬಳಸಬಾರದೆಂದು ಭೂಷಣವು ಮೌನವಹಿಸಿದರೆ, ದರ್ಪಣ ಮಾತ್ರ ಹೇಳಿದೆ.

ಅಂತೆಯೇ ಕನ್ನಡ ಸಂಧಿಗಳಲ್ಲಿಯ ವಿವರಣೆಯಲ್ಲಿ ಕೆಲವು ದೋಷಗಳಿವೆ. ಸ್ವರ ಹಾಗು ವ್ಯಂಜನ ಸಂಧಿಗಳೆರಡನ್ನೂ ನಾಗವರ್ಮ ಪ್ರಸ್ತಾವಿಸಿದ್ದರೂ ಸಂಧಿ ದೋಷ, ಶ್ರುತಿಸಹ್ಯಸಂಧಿ, ಶ್ರುತಿಕಷ್ಟಸಂಧಿ - ಮೊದಲಾದವುಗಳ ಬಗೆಗೆ ಸ್ಪಷ್ಟ ಚಿತ್ರಣ ದೊರೆಯದು. ಕೇಶಿರಾಜನಲ್ಲಿ ಇದನ್ನು ಕಾಣಬಹುದು. ತನ್ನ ಕೃತಿ ದೋಷವನ್ನು ತಿದ್ದಿ ಅಲ್ಲಿಯ ಗುಣಗಳನ್ನು ಮಾತ್ರ ಸ್ವೀಕರಿಸಬೇಕೆಂದು ಕವಿ ಪ್ರಾರ್ಥಿಸಿದ್ದು ಅವನ ವಿನಯ ವಿಧೇಯತೆಗೆ ಸಾಕ್ಷಿ. 'ಕಾವ್ಯಾವಲೋಕನ'ದ ಪ್ರಥಮ ಅಧಿಕರಣ ವ್ಯಾಕರಣವಾದರೆ, ಕಾವ್ಯಾಮಲವ್ಯಾವೃತ್ತಿಯೆಂಬ ದ್ವಿತೀಯ ಅಧಿಕರಣ ದೋಷಗಳನ್ನು ನಿರೂಪಿಸುತ್ತದೆ. ಅಲ್ಲಿ ಪದ, ಪದಾರ್ಥ ದೋಷಗಳು, ವಾಕ್ಯ, ವಾಕ್ಯಾರ್ಥ ದೋಷಗಳು ನಿರೂಪಿಸಲ್ಪಟ್ಟಿವೆ. ಮೂರನೆಯ ಅಧಿಕರಣದಲ್ಲಿ ಗುಣ ವಿವೇಕವೆಂಬಲ್ಲಿ ಕಾವ್ಯಕ್ಕೆ ಶೋಭೆ ತರುವ ದಶಗುಣಗಳು ಮತ್ತು ಶಬ್ದಾರ್ಥಗಳು ವರ್ಣಿತವಾಗಿವೆ. ನಾಲ್ಕನೆಯ ಅಧಿಕರಣದಲ್ಲಿ ರೀತಿ ರಸ ಕ್ರಮ ನಿರೂಪಣೆ ವಿಭಾಗದಲ್ಲಿ ವೈದರ್ಭಿ ಮುಂತಾದ ರೀತಿಗಳು ಭಾವಾನುಭಾವ ರಸಗಳು- ಇತ್ಯಾದಿಗಳನ್ನು ಕುರಿತು ವಿವೇಚಿಸಲಾಗಿದೆ. ಕೊನೆಯ ಅಧಿಕರಣವಾದ ಕವಿಸಮಯದಲ್ಲಿ ಅಸದಾಖ್ಯಾತಿ ಮೊದಲಾದ ಕವಿಸಮಯದ ಪ್ರಭೇದಗಳನ್ನು ಗುರುತಿಸಲಾಗಿದೆ. ಅನಂತರ ಕಾವ್ಯ ಪ್ರಕಾರ, ಸಾಂಪ್ರದಾಯಿಕ ವರ್ಣನೆ, ಪಂಚಸಂಧಿ, ಸಂಧ್ಯಂಗಗಳ ಪ್ರಸ್ತಾವನೆ ಬರುತ್ತದೆ. ಹೀಗೆ ನಾಗವರ್ಮನ ಕಾವ್ಯಾವಲೋಕನದ ಪ್ರಕರಣಗಳು ಭಾರತೀಯ ಕಾವ್ಯ ಮೀಮಾಂಸೆಗೆ ವಿಶಿಷ್ಟ ಕೊಡುಗೆಯಾಗಿವೆ.

"ಹಳೆಯ ಕವಿಗಳ ಕಾವ್ಯಾರಾಮದಿಂದ ಅನೇಕ ಹೂಗಳನ್ನು ಆರಿಸಿರುವ ಬುಟ್ಟಿಯಿದು" ಎಂದು ಡಿ.ಎಲ್. ನರಸಿಂಹಾಚಾರ್ಯರು ಸೊಗಸಾಗಿ ಹೇಳಿದ್ದಾರೆ.[೨೦]

ಕನ್ನಡದ ಆದ್ಯ ವ್ಯಾಕರಣವಾದ ಕಾವ್ಯಾವಲೋಕನದಲ್ಲಿಯ ಒಂದು ಭಾಗವಾದ 'ಶಬ್ದಸ್ಮೃತಿ' ಸಮಗ್ರ ಅಧಿಕರಣಗಳನ್ನೊಳಗೊಂಡ ಒಂದು ಲಕ್ಷಣ ಗ್ರಂಥವೇ ಸರಿ. ಅದು ಕನ್ನಡ ಸಾಹಿತ್ಯದ ಪ್ರಾಚೀನ ಕವಿಗಳ ಕೃತಿಗಳ ಪದ್ಯಗಳನ್ನು ಶೇಖರಿಸಿಕೊಂಡಿರುವ ಒಂದು ಉಗ್ರಾಣ. ಪಂಪಾದಿ ಕವಿಗಳಲ್ಲಿರದ ಕೆಲವು ರಾಮಾಯಾಣ ಗ್ರಂಥಗಳ ಪದ್ಯಗಳೂ ಅಲ್ಲಿ ಕಾಣಸಿಕೊಂಡಿವೆ. ಇದರಿಂದ ಇವನಿಗಿಂತ ಪೂರ್ವದಲ್ಲಿ ಕನ್ನಡ ಭಾಷೆಯಲ್ಲಿ ರಾಮಾಯಣ ಮಹಾಭಾರತಗಳಿರಬೇಕೆಂದು ಐತಿಹಾಸಿಕ ಸೂಚನೆ. ಅಲ್ಲದೆ ಅದು ರಾಜಮನೆತನದ ಹೆಸರುಗಳನ್ನು ಸೂಚಿಸುವ ಐತಿಹಾಸಿಕ ಆಕರ ಗ್ರಂಥ. ಒಟ್ಟಾರೆ ಕಾವ್ಯಾವಲೋಕನವೆಂಬ ಗ್ರಂಥವು ಶಾಸ್ತ್ರ ಕಾವ್ಯಗಳ ಸಮ್ಮಿಲನ.

## ೨. ಕರ್ಣಾಟಕ ಭಾಷಾ ಭೂಷಣಂ:

ಕಾವ್ಯಾವಲೋಕನದ ಶಬ್ದಸ್ಮೃತಿಯಂತೆ 'ಭಾಷಾ ಭೂಷಣ'ವು ಒಂದು ವ್ಯಾಕರಣ ಗ್ರಂಥ. ಕನ್ನಡ ವ್ಯಾಕರಣದ ಸತ್ವವನ್ನು ಸಂಸ್ಕೃತದವರಿಗೆ ತಿಳಿಯಪಡಿಸುವ ಸೂತ್ರ ರೂಪದಲ್ಲಿರುವ ಒಂದು ಶ್ರೇಷ್ಠ ಗ್ರಂಥ. ರೈಸ್ ಸಂಪಾದಿಸಿದ ಕೃತಿಯಲ್ಲಿ ಒಟ್ಟು ೨೮೦ ಸೂತ್ರಗಳೂ, ಆರ್. ನರಸಿಂಹಾಚಾರ್ಯರು ಪರಿಷ್ಕರಿಸಿದ ಕೃತಿಯಲ್ಲಿ ಒಟ್ಟು ೨೬೯ ಸೂತ್ರಗಳೂ ಇವೆ. ೧೧ ಸೂತ್ರಗಳ ಭಿನ್ನತೆ ಎರಡು ಕೃತಿಗಳಿಂದ ಕಂಡು ಬಂದಿದೆ. ಪ್ರತಿ ಸೂತ್ರಕ್ಕೆ ನಾಗವರ್ಮನೇ ಬರೆದ ವೃತ್ತಿ ಹಾಗೂ ಪ್ರಯೋಗಗಳಿವೆ. ಈ ಎಲ್ಲ ಪ್ರಯೋಗಗಳು ನಾಗವರ್ಮನಿಗಿಂತ ಹಿಂದಿನ ಕೃತಿಗಳಿಂದ ಆರಿಸಿಕೊಂಡವು.

'ಕರ್ನಾಟಕ ಭಾಷಾ ಭೂಷಣ'ವು ೧. ಸಂಜ್ಞೆ; ೨. ಸಂಧಿ; ೩. ವಿಭಕ್ತಿ; ೪. ಕಾರಕ ೫.ಶಬ್ದರೀತಿ; ೬. ಸಮಾಸ; ೭. ತದ್ಧಿತ; ೮. ಆಖ್ಯಾತ; ೯. ಅವ್ಯಯ; ೧೦. ನಿಪಾತಗಳೆಂಬ ಹತ್ತು ವಿಧಾನಗಳಿಂದ ಕೂಡಿದೆ.

ನಾಗವರ್ಮನ ಈ ಭೂಷಣವನ್ನು ಆಧರಿಸಿ ಮುಂದಿನ ಶತಮಾನದ ವೈಯಾಕರಣರಾದ ಕೇಶಿರಾಜ ಹಾಗೂ ಭಟ್ಟಾಕಳಂಕ ತಮ್ಮ ತಮ್ಮ ಕೃತಿಗಳನ್ನು ರಚಿಸಿದರು. ಹೀಗೆ 'ಭಾಷಾಭೂಷಣ'ವು ಅದೆಷ್ಟೋ ಲಾಕ್ಷಣಿಕರಿಗೆ ಸಹಾಯಕ ಗ್ರಂಥವಾಗಿ ಒಂದು ಉತ್ತಮ ವ್ಯಾಕರಣ ಕೃತಿಯಾಗಿದೆ. ವಿಭಕ್ತಿ ಪ್ರತ್ಯಯಗಳ ಜೊತೆಗೆ 'ಕಾರಕ ವಿಧಾನಂ' ಎನ್ನುವ ಒಂದು ಪ್ರತ್ಯೇಕ ಪರಿಚ್ಛೇದವನ್ನು ಹೆಚ್ಚಾಗಿ ಭೂಷಣವು ವಿವರಿಸಿದೆ. ಭೂಷಣದ ೫೮-೫೯ ಸೂತ್ರಗಳಲ್ಲಿ ದಿಗ್ವಾಚಿಗಳಿಗೆ ಮಾತ್ರ 'ಅಲ್' ಮತ್ತು 'ಎ' ಪ್ರತ್ಯಯ ಬರುವುದೆಂದು ನಾಗವರ್ಮನು ತಿಳಿಸಿದ್ದಾನೆ. ಆದರೆ ದಿಗ್ವಾಚಿಗಳಲ್ಲದ ಕಡೆಯಲ್ಲೂ 'ಅಲ್' ಪ್ರತ್ಯಯ ಬರುವುದನ್ನು ನಾವು ಪಂಪಾದಿಕವಿಗಳ ಕೃತಿಗಳಲ್ಲಿ ಕಾಣುತ್ತೇವೆ. ಭೂಷಣ "ದೀರ್ಘೋಕ್ತಿರ್ನಯಸೇನಸ್ಯ" ಎಂಬ ನಯಸೇನನ ಉಕ್ತಿಯನ್ನು ಆರಿಸಿಕೊಂಡಿರುವುದು ವಿದ್ವಾಂಸರ ಚರ್ಚೆಗೆ ಒಳ್ಳೆಯ ಗ್ರಾಸವಾಗಿದೆ. ಅಂತೆಯೆ ನಾಗಚಂದ್ರನ "ಬಹುತಾಪಕ್ಕೆ ಬಿಗುರ್ತು ವಿಷ್ಣು ಪಡೆದಂ ಮತ್ಸ್ಯಾವತಾರಕ್ಕೆ" ಎಂಬ ವಿಷಯವೂ ವಾದಗ್ರಸ್ತವಾಗಿದೆ.

ಸರ್ವನಾಮಗಳ ವಿಷಯದಲ್ಲಿ ನಾಗವರ್ಮನು 'ಶಬ್ದಸ್ಮೃತಿ'ಯಲ್ಲಿ ಹೇಳದೆ ಇರುವ ಬಹುವಚನ ಪ್ರತ್ಯಯಗಳನ್ನು ಕುರಿತು 'ಭಾಷಾ ಭೂಷಣ'ದಲ್ಲಿ ವಿವೇಚಿಸಿದ್ದಾನೆ. ಪೊಸಂಬಳ್, ಬಟುವಳ್ ಎಂಬಿತ್ಯಾದಿ ಸ್ತ್ರೀಲಿಂಗ ಸರ್ವನಾಮಗಳನ್ನು ಕುರಿತು ನಾಗವರ್ಮನು ಎರಡು ಕೃತಿಗಳಲ್ಲೂ ವಿವರಿಸಲಿಲ್ಲ, ಅಂತೆ ಏತಱ್, ಏತಕ್ಕೆ ಎಂಬಿತ್ಯಾದಿ ಸರ್ವನಾಮಗಳ ಬಗ್ಗೆ ಪ್ರಸ್ತಾಪವಿಲ್ಲ.

'ಸಮಾಸ ವಿಧಾನಂ' ಎಂಬಲ್ಲಿ ಗಮಕ ಸಮಾಸದ ಬಗ್ಗೆ ಏನನ್ನೂ ಹೇಳಲಿಲ್ಲ. ಆದರೆ ಕೇಶಿರಾಜನು ಇದನ್ನು ಅಸಾಧಾರಣ ಲಕ್ಷಣಗಳಲ್ಲಿ ಒಂದಾಗಿ ಸ್ವೀಕರಿಸಿದ್ದಾನೆ.

ಉತ್ತಮ ಪುರುಷ ಬಹುವಚನ ಪ್ರತ್ಯಯ 'ಎವು' ಪ್ರತ್ಯಯಕ್ಕೆ ವಿಕಲ್ಪವಾಗಿ 'ಎಮ್' ಬರುವುದಾಗಿ ಕೇಶಿರಾಜನು ಹೇಳಿದ್ದರೆ, ನಾಗವರ್ಮನು ಹೇಳಿಲ್ಲ. ಅಂತೆಯೇ ಗುಣವಚನ, ಸರ್ವನಾಮ, ಸಂಖ್ಯೆ ಇವುಗಳಿಗೆ ಆಖ್ಯಾತ ವಿಭಕ್ತಿ ಪ್ರತ್ಯಯ ಹತ್ತುವ ವಿಚಾರವನ್ನು ನಾಗವರ್ಮನು ಹೇಳದೇ ಇರುವುದು ಸೋಜಿಗ.

## ೩. ಅಭಿಧಾನ ವಸ್ತುಕೋಶ:

ಇದು ಸಂಸ್ಕೃತದ ಪದಗಳಿಗೆ ಅರ್ಥ ಹೇಳುವ ಒಂದು ನಿಘಂಟು. ಇದರಲ್ಲಿ ೧೭ ವರ್ಗಗಳಿವೆ. ಏಕಾರ್ಥಕಾಂಡ, ನಾನಾರ್ಥಕಾಂಡ, ಸಾಮಾನ್ಯಕಾಂಡವೆಂದು ಮೂರು ಕಾಂಡಗಳಿವೆ. ಪ್ರಾಚೀನ ಸಂಸ್ಕೃತ ಲಾಕ್ಷಣಿಕರಾದ ವರರುಚಿ, ಹಲಾಯುಧ, ಭಾಗುರಿ, ಶಾಶ್ವತ, ಅಮರಸಿಂಹ- ಈ ಮೊದಲಾದವರ ಕೋಶಗಳನ್ನು ನೋಡಿ ತಾನು ಈ ಗ್ರಂಥವನ್ನು ಬರೆದಿರುವುದಾಗಿ ಹೇಳಿದ್ದಾನೆ. 'ರನ್ನ ಕಂದ'ವೆನ್ನುವ ನಿಘಂಟು ಅಲಭ್ಯವಾಗಿರುವುದರಿಂದ 'ಅಭಿಧಾನ ವಸ್ತುಕೋಶ' ಕನ್ನಡದಲ್ಲಿ ಲಭ್ಯವಾದ ಮೊದಲನೆಯ ನಿಘಂಟು ಎನ್ನಬಹುದು.

ಏಕಾರ್ಥಕಾಂಡ ಅಥವಾ ಅಭಿನ್ನಾರ್ಥಕಾಂಡದಲ್ಲಿ ಒಟ್ಟು ಹದಿನಾರು ವರ್ಗಗಳು, ಎರಡನೆಯ ಕಾಂಡದಲ್ಲಿ ಎರಡು ವರ್ಗಗಳು, ಮೂರನೆಯ ಕಾಂಡದಲ್ಲಿ ನಾನಾರ್ಥವೆಂಬ ಒಂದು ವರ್ಗ - ಹೀಗೆ ಒಟ್ಟು ಕೃತಿಯು ೧೯ ವರ್ಗಗಳಿಂದ ಕೂಡಿದೆ. ಎಂಥ ಮೂಢನಾದರೂ ತನ್ನೀಕೋಶವನ್ನು ಶಬ್ದಾರ್ಥಗಳ ಸಹಾಯದಿಂದ ಸುಲಭವಾಗಿ ಅರ್ಥ ಮಾಡಿಕೊಳ್ಳಬಹುದೆಂದೂ ಅದಕ್ಕಾಗಿ ತಾನೀ ಕೃತಿಯನ್ನು ಬರೆದುದಾಗಿಯೂ, ಅದೇ ತನ್ನ ಗುರಿಯೆಂದೂ ನಾಗವರ್ಮ ತಿಳಿಸಿದ್ದಾನೆ.

'ಅಭಿಧಾನ ವಸ್ತುಕೋಶ' ಕನ್ನಡ ಕಾವ್ಯಗಳಲ್ಲಿ ಕಂಡುಬರುವ ಸಂಸ್ಕೃತ ಪದಗಳಿಗೆ ಪರ್ಯಾಯ ಶಬ್ದಗಳನ್ನು ಒದಗಿಸುವ ಉತ್ತಮ ಕೃತಿ. ಅದು ಕನ್ನಡ ಭಾಷೆಗೆ ಒಂದು ನಿಘಂಟನ್ನು ನೀಡಿ ಆ ಭಾಷೆಯಲ್ಲಿರುವ ಒಂದು ಕೊರತೆಯನ್ನು ನೀಗಿಸಿ, ಶಬ್ದ ಭಂಡಾರವನ್ನು ತುಂಬಿಸಿತು. ಅಲ್ಲಿ ಹೆಚ್ಚಿಗೆ ಕಂದಪದ್ಯಗಳು ಹಾಗೂ ಕೆಲವು ಸಂಸ್ಕೃತ ವೃತ್ತಗಳು ಇವೆ. ಈ ಕೋಶದಲ್ಲಿ ಸುಮಾರು ೭೨೧ ಪದ್ಯಗಳಿವೆ.

ಗ್ರಂಥದ ಆರಂಭದಲ್ಲಿ ಕವಿ ವರ್ಧಮಾನನನ್ನು ಸ್ತುತಿಸಿರುವುದರಿಂದ ಕರ್ತೃ ಜೈನನೆಂಬುದರಲ್ಲಿ ಅನುಮಾನವಿಲ್ಲ. 'ಕಾವ್ಯಾವಲೋಕನ' ಮತ್ತು 'ಅಭಿಧಾನ ವಸ್ತುಕೋಶ'ಗಳು ಕವಿಯೇ ತಿಳಿಸಿರುವಂತೆ ವಾಕ್‌ಶ್ರೀ ಸುಂದರಿಗೆ ರತ್ನಮಂಡನ.

ಶಬ್ದಶಾಸ್ತ್ರ ಪಾರಂಗತನಾದ ನಾಗವರ್ಮನು ಇಂಥ ನಿಘಂಟನ್ನು ಕನ್ನಡದಲ್ಲಿ ನೀಡಿ ಮಹದುಪಕಾರವೆಸಗಿದ್ದಾನೆ. "ಕಿಸು, ಕೊಡಸಿಗೆ, ನಜುವಲ್, ಪಱಪ, ಪಿಱುಕು, ಪೆಂಕುಳಿ, ಬರ್ಕರ, ಅತ್ತಪಳ್, ಕೆಲ್ಲ, ಪಕ್ಕಣ, ಪೊಳವರ್ತಿ, ಬಗರಗೆ, ಪೋಗಂಡ, ಬರ್ಕಣ - ಇಂಥ ಕನ್ನಡ ಶಬ್ದಗಳ ಅರ್ಥ ಸುಬೋಧವಾಗುವುದು ಅವುಗಳ ಸಂಸ್ಕೃತ ಪರ್ಯಾಯ ಶಬ್ದಗಳಿಂದ. ಇದರಿಂದ "ಕನ್ನಡ ಭಾಷೆಗೆ ಪರೋಕ್ಷವಾಗಿ ಸಹಾಯಕವಾಗಿವೆ" ಎಂಬ ಮಾತಿನಲ್ಲಿ ಸತ್ಯವಿದೆ.[೩೦]

## ೪. ಛಂದೋವಿಚಿತಿ:

'ಕಾವ್ಯಾವಲೋಕನ'ದ ಪದ್ಯವೊಂದರ ಪ್ರಕಾರ ಛಂದೋವಿಚಿತಿಯು ನಾಗವರ್ಮ ವಿರಚಿತ ಛಂದಶ್ಶಾಸ್ತ್ರ ಗ್ರಂಥ. ಅದು ಇಲ್ಲಿಯವರೆಗೆ ಉಪಲಬ್ಧವಾಗಿಲ್ಲ. "ಛಂದೋವಿಚಿತಿಯೆಂಬ ಸಾಮಾನ್ಯ ಹೆಸರಿನಿಂದ ಪರಿಚಿತವಿದ್ದರೂ ಇರಬಹುದು. 'ರತ್ನ ಮಂಜೂಷ'ವೆಂದು ನಾಗವರ್ಮನೆ ಅದನ್ನು ಹೆಸರಿಸಿರಬೇಕು."[೩೧]

ಭೀಮರಾವ್ ಚಿಟಗುಪ್ಪಿಯವರು ನಾಗವರ್ಮನು ಹೇಮಚಂದ್ರನಿಗೆ ಸಮಕಾಲೀನನೆಂದು ಅವನು ಬರೆದ 'ರತ್ನ ಮಂಜೂಷ'ಕ್ಕೆ ನಾಗವರ್ಮನು ಒಂದು ಭಾಷ್ಯವನ್ನು ಬರೆದು ಅದಕ್ಕೆ 'ಛಂದೋವಿಚಿತಿ' ಎಂದು ನಾಮಕರಣ ಮಾಡಿರಬೇಕೆಂದು ಪ್ರತಿಪಾದಿಸಿದ್ದಾರೆ.[೩೨] ಆದರೆ ಶ್ರೀಯುತರ ಹೇಳಿಕೆಯನ್ನು ನಂಬಲು ಅಂತರಬಾಹ್ಯ ಪ್ರಮಾಣಗಳು ಸಾಲವು. ಅದು ಏನೇ ಇದ್ದರೂ ಸದ್ಯಕ್ಕಂತೂ 'ಛಂದೋವಿಚಿತಿ'ಯೆಂಬ ಕೃತಿಯನ್ನು ನಾಗವರ್ಮನು ಬರೆದಿದ್ದಾನೆಂದು ತಿಳಿದು ಮುಂದುವರೆದರೆ ಲೇಸು.

## ೫. ವರ್ಧಮಾನ ಪುರಾಣಂ:

ಇತ್ತೀಚೆಗೆ 'ವರ್ಧಮಾನ ಪುರಾಣಂ' ಎಂಬ ಕೃತಿಯು ದೊರೆತಿದ್ದು ಇದರಿಂದ ನಾಗವರ್ಮನ ಬಗ್ಗೆ ಕೆಲವು ವಿಶೇಷಗಳು ಬೆಳಕಿಗೆ ಬಂದಿರುವುದನ್ನು ಈಗಾಗಲೇ ಪ್ರಸ್ತಾಪಿಸಲಾಗಿದೆ. ಮೂಡಬಿದರೆಯ ಶ್ರೀ ದಿಗಂಬರ ಜೈನ ಶಾಲೆಯಲ್ಲಿ ಸಿಕ್ಕಿದ ಈ ಅಪೂರ್ವ ಕೃತಿಯಿಂದ ಕಾವ್ಯಾವಲೋಕನದ ಕರ್ತೃವೇ 'ವರ್ಧಮಾನ ಪುರಾಣ'ದ ಕರ್ತೃವೆಂದು ತಿಳಿದುಬಂದಿದೆ. ಅದಕ್ಕೆ ಕಾರಣ ಅಲ್ಲಿಯ ಕೆಲವು ಪದ್ಯಗಳು. 'ವರ್ಧಮಾನ ಪುರಾಣ'ದ ಪ್ರಾರಂಭದಲ್ಲಿ-

ಗದ್ಯದೊಳಂ ಪದ್ಯದೊಳಂ
ಚೋದ್ಯಮಿದೆನೆ ವತ್ಸರಾಜ ಚರಿತಾಗಮಮಂ
ವಿದ್ಯಾನಿಧಿ ಬರೆದಂ ನಿರ
ವದ್ಯ ಗುಣಂ ನಾಗವರ್ಮನುಪಚಿತ ಶರ್ಮಂ॥ (೧-೪)

ಎಂದಿರುವುದರಿಂದ ಎರಡನೆಯ ನಾಗವರ್ಮನಲ್ಲದೆ ಮತ್ತೊಬ್ಬ ನಾಗವರ್ಮನು 'ವತ್ಸರಾಜ ಚರಿತೆ'ಯನ್ನು ಬರೆದಂತೆ ತಿಳಿದುಬರುತ್ತದೆ. ಆದರೆ ಅದು ಉಪಲಬ್ಧವಿಲ್ಲ. ಅವನು 'ಛಂದೋಂಬುಧಿ'ಯ ಕರ್ತೃ ಮೊದಲನೆಯ ನಾಗವರ್ಮನೇಕಾಗಿರಬಾರದು ಎಂಬ ಪ್ರಶ್ನೆ ಏಳುತ್ತದೆ.

ವರ್ಧಮಾನಪುರಾಣವು ಹದಿನಾರು ಆಶ್ವಾಸಗಳನ್ನೊಳಗೊಂಡ ಒಂದು ಜೈನ ಪುರಾಣ ಗ್ರಂಥ. ಕವಿ ಆಶ್ವಾಸದ ಪ್ರಾರಂಭದಲ್ಲಿ ಪೂರ್ವಕವಿಗಳಾದ ಶ್ರೀವಿಜಯ, ಗುಣವರ್ಮ, ನಾಗವರ್ಮ, ಪೊನ್ನ, ಪಂಪ, ರನ್ನ, ನಾಗದೇವ, ಕವೀಂದ್ರ -ಈ ಮೊದಲಾದವರನ್ನು ಸ್ತುತಿಸಿ ಅನಂತರ ಸತ್ಕಾವ್ಯದ ಲಕ್ಷಣಗಳನ್ನು ಕುರಿತು ಪ್ರಸ್ತಾಪಿಸಿದ್ದಾನೆ. ತಾನು ರಚಿಸಿದ ಈ ಕೃತಿಯನ್ನು ವಾದಿರಾಜ ಪಂಡಿತರೆಂಬ ಜೈನ ಮುನಿವರ್ಯರು ಶೋಧಿಸಿದರೆಂದು ತಿಳಿಸುತ್ತಾನೆ. ಬಳಿಕ ತನ್ನ ಸ್ವವಿಷಯಗಳ ಬಗ್ಗೆ ವಿವೇಚಿಸುತ್ತಾನೆ.

ಇದು ಜೈನಗ್ರಂಥವಾದರೂ ಹಿಂದೂ ಧರ್ಮಕ್ಕನುಗುಣವಾಗಿ ಕೆಲವು ವಿಶೇಷ ಸಂಗತಿಗಳು ಮೇಳೈಸಿವೆ. ಅಲ್ಲಲ್ಲಿ ಈಶ್ವರನ ಸ್ತುತಿಯೂ ಕಂಡುಬರುತ್ತದೆ. ವೈದಿಕ ಬ್ರಾಹ್ಮಣ್ಯದ ಕೆಲವು ಸಂಗತಿಗಳು ಕಾಣಬರುತ್ತವೆ. ಉಪಮೆ, ರೂಪಕ, ನುಡಿಗಟ್ಟು ಎಲ್ಲವೂ ಅಲ್ಲಲ್ಲಿ ಕಾವ್ಯ ಸುಂದರಿಯ ಸೌಂದರ್ಯವನ್ನು ಹೆಚ್ಚಿಸಿವೆ. ಶೈಲಿ ಹಿತಮಿತವಾಗಿದೆ. ಛಂದಸ್ಸು, ಅಲಂಕಾರ, ವ್ಯಾಕರಣ - ಈ ಮೂರು ಸಮುಚಿತವಾಗಿ ಸ್ಥಾನ ಪಡೆದು ನಾಗವರ್ಮನದು ಕಾವ್ಯ ರಚನೆಯಲ್ಲೂ ಪಳಗಿದ ಕೈ ಎಂಬುದನ್ನು ತಿಳಿಸಿಕೊಟ್ಟಿವೆ.

**ಕನ್ನಡ ವ್ಯಾಕರಣ ಪರಂಪರೆಯಲ್ಲಿ ನಾಗವರ್ಮನ ಸ್ಥಾನ:**

ಪ್ರಾಚೀನ ಕನ್ನಡ ಭಾಷಾ ಸ್ವರೂಪವನ್ನು ವಿವೇಚಿಸುವ ನಾಲ್ಕು ಕೃತಿಗಳು ಮಾತ್ರ ನಮಗೆ ಇಲ್ಲಿಯವರೆಗೆ ಉಪಲಬ್ಧವಾಗಿವೆ. ಕಾವ್ಯಾವಲೋಕನದ ಪ್ರಥಮ ಅಧಿಕರಣವಾದ ಶಬ್ದಸ್ಮೃತಿ, ಕರ್ಣಾಟಕ ಭಾಷಾ ಭೂಷಣಂ, ಕೇಶಿರಾಜನ ಶಬ್ದಮಣಿದರ್ಪಣಂ ಮತ್ತು ಭಟ್ಟಾಕಳಂಕನ ಶಬ್ದಾನುಶಾಸನ ಇವು ಆ ನಾಲ್ಕು ಕೃತಿಗಳು. ಹಳಗನ್ನಡ ಭಾಷೆಯ ವ್ಯಾಕರಣದ ಪ್ರಾಚೀನತೆ ಮತ್ತು ಅದರ ವಿಕಾಸಕ್ರಮ ಇಂದಿಗೂ ನಿಗೂಢವಾಗಿಯೇ ಇದೆ. 'ಕವಿರಾಜಮಾರ್ಗ'ದ ಕಾಲಕ್ಕೆ ಕೆಲವು ಕನ್ನಡ ಸಾಹಿತ್ಯ ಕೃತಿಗಳು ನಿರ್ಮಾಣಗೊಂಡಿದ್ದವು. ಅವುಗಳ ಜೊತೆಗೆ ಕೆಲವು ವ್ಯಾಕರಣಗಳೂ ಇದ್ದಿರಬಹುದು. 'ಕವಿರಾಜಮಾರ್ಗ' ಒಂದು ಅಲಂಕಾರ ಗ್ರಂಥವಾದರೂ, ಅದು ಸ್ವಲ್ಪ ಮಟ್ಟಿಗೆ ಹಳಗನ್ನಡ ವ್ಯಾಕರಣದ ಬಗ್ಗೆ ಮಾಹಿತಿ ನೀಡುತ್ತದೆ. ಭಾಷೆಯ ನಿಯಮದ ಕಲ್ಪನೆಯಿಲ್ಲದೆ ಖಚಿತ ಸಾಹಿತ್ಯ ಬೆಳೆಯಲಾರದು. ಇದಕ್ಕೆ 'ಕವಿರಾಜಮಾರ್ಗ'ದಂಥ

ಲಕ್ಷಣ ಗ್ರಂಥಗಳು ನಿದರ್ಶನವಾಗಿವೆ. "ಕವಿರಾಜಮಾರ್ಗ ಮತ್ತು ಶಬ್ದಸ್ಮೃತಿಯ ನಡುವಿನ ಕಾಲಾವಧಿಯಲ್ಲಿ ಕೆಲವು ಕನ್ನಡ ವ್ಯಾಕರಣ ಗ್ರಂಥಗಳು ಹುಟ್ಟಿಕೊಂಡಿರಬಹುದು."[೩೪] ಎಂಬುದು ಒಂದು ಊಹೆ. ಆದರೆ ಪಂಪನ ಕಾಲದ ಶಾಸನಗಳಲ್ಲಿ ಕನ್ನಡ ವ್ಯಾಕರಣ ಸ್ವರೂಪದ ಛಾಯೆ ಅಲ್ಲಲ್ಲಿ ಕಾಣಬಹುದಾಗಿದೆ. 'ರನ್ನಂ ವೈಯಾಕರಣಂ'[೩೫] ಎಂದಿರುವುದರಿಂದ ರನ್ನನು ಓರ್ವ ವೈಯಾಕರಣಿ-ಯಾಗಿರಬೇಕು. ಆದರೆ ಅವನು ಯಾವ ವ್ಯಾಕರಣ ಗ್ರಂಥವನ್ನು ಬರೆದ ಎಂಬುದು ಇಂದಿಗೂ ತಿಳಿದುಬಂದಿಲ್ಲ. ನಾಗವರ್ಮನ 'ಭಾಷಾ ಭೂಷಣ'ದಲ್ಲಿ ದೀರ್ಘೋಕ್ತಿರ್ನಯಸೇನಸ್ಯ"[೩೬] ಎಂದಿರುವುದರಿಂದ ನಾಗವರ್ಮನಿಗೂ ಹಿಂದೆ ನಯಸೇನ ಪಂಡಿತನೆಂಬ ಒಬ್ಬ ವೈಯಾಕರಣಿ ಇದ್ದ ಎಂಬುದನ್ನು ಮುಳುಗುಂದ ಶಾಸನ ಸ್ಪಷ್ಟಪಡಿಸಿದೆ. "ಕನ್ನಡ ವೈಯಾಕರಣಿ ನಯಸೇನನು ಶಾಸನೋಕ್ತ ನಯಸೇನನೂ ಏಕವ್ಯಕ್ತಿಯಾಗಿರುವಂತೆ ಭಾಸವಾಗುತ್ತದೆ"[೩೭] ಎಂಬ ಮಾತಿನಲ್ಲಿ ಸತ್ಯವಿದೆ. ಕವಿ ಸುಮನೋಬಾಣನೆಂಬುವನು ಒಬ್ಬ ವ್ಯಾಕರಣ ಕರ್ತೃ ಆಗಿದ್ದನೆಂಬುದರ ಬಗ್ಗೆ ಚರ್ಚೆ ನಡೆದಿದೆ.[೩೮] ಜನ್ನನ ಅನಂತನಾಥಪುರಾಣದಲ್ಲಿ 'ರನ್ನಂ ವೈಯಾಕರಣಂ, ಜನ್ನಂ ಮೇಣ್ ಕವಿಗಳೊಳ್ ವೈಯಾಕರಣಂ" (೧-೧೯) ಎಂದಿರುವುದರಿಂದ ಜನ್ನನು ಒಬ್ಬ ವೈಯಾಕರಣನಾಗಿ ಇರಬೇಕು. ಆದರೆ ಅವನ ವ್ಯಾಕರಣ ಗ್ರಂಥವಾವುದು ಎಂಬುದು ತಿಳಿದುಬಂದಿಲ್ಲ.

ಕೇಶಿರಾಜ ಕನ್ನಡ ವ್ಯಾಕರಣ ಪ್ರಪಂಚದಲ್ಲಿ ಸುಪ್ರಸಿದ್ಧ. ಅವನ ಕೃತಿ 'ಶಬ್ದಮಣಿದರ್ಪಣಂ' "ಸಿರಿಗೀಕ್ಷಿಪ ರಸಚಿತ್ರಂ, ಸರಸ್ವತಿಗೆ ಎರಡನೆಯ ವೀಣೆ ಎನೆ ಸೌಭಾಗ್ಯಂ" (ಪದ್ಯ ೩೦) "ಆನೆಯ ನಡು ಬಡವೇ?" "ತಾನೇ ಲೋಕದೊಳ್ ಲಾಕ್ಷಣಿಕಂ" (ಪದ್ಯ ೩೩೮) ಎಂಬ ಆತ್ಮಪ್ರಶಂಸೆ ಇದೆ. ಅದರ ಜೊತೆಗೆ ವಿನಯವೂ ಇದೆ. "ಅವಧರಿಪುದು ವಿಬುದರ್....... ದೋಷವಿದೂರಮಾಗೆ ಮೆಚ್ಚಿ ಕೈ ಕೊಳ್ವುದಿದಂ" (ಪದ್ಯ ೪) ಎಂದಿದ್ದಾನೆ.

ಭಟ್ಟಾಕಳಂಕನು ನಾನಾ ಶಾಸ್ತ್ರಗಳಲ್ಲಿ ಪಾರಂಗತ. ಅವನು ಜೈನನಾದರೂ ಪಾಣಿನಿಯನ್ನು ಮನಸಾರೆ ಹೊಗಳಿದ್ದಾನೆ. ಕನ್ನಡ ಸಾಹಿತ್ಯದಲ್ಲಿ ಗ್ರಂಥರಚನೆ ಇಳಿಮುಖವಾಗುತ್ತಿದ್ದ ಸಂದರ್ಭದಲ್ಲಿ ಅವನ ಕೃತಿ ಶಬ್ದಾನುಶಾಸನ ಹೊರಬಂತು. ಕನ್ನಡದ ಪ್ರತಿಷ್ಠೆಯನ್ನು ಎತ್ತಿ ಹಿಡಿದ, ವ್ಯಾಕರಣ ಪ್ರಜ್ಞೆಯನ್ನು ಜಾಗ್ರತಗೊಳಿಸಿದ. ನಾಗವರ್ಮನ 'ಭಾಷಾಭೂಷಣ'ದಂತೆ ಅವನ ಕೃತಿ ಸಂಸ್ಕೃತ ಭಾಷೆಯಲ್ಲಿ ಕನ್ನಡ ವ್ಯಾಕರಣವೇ ಆಗಿದೆ. "ಸಂಸ್ಕೃತಕ್ಕೆ ಅಷ್ಟಾಧ್ಯಾಯಿ ಹೇಗೋ ಕನ್ನಡಕ್ಕೆ ಶಬ್ದಾನುಶಾಸನ ಹಾಗೆ"[೩೯] ಎಂದೂ, "ಕೇಶಿರಾಜ ಕನ್ನಡ ಪಾಣಿನಿ, ಭಟ್ಟಾಕಳಂಕ ಅಭಿನವ ಪಾಣಿನಿ"[೪೦] ಎಂಬ ಮಾತಿನಲ್ಲಿ ಸತ್ಯವಿದೆ.

ಉಪಲಬ್ಧ 'ಕಾವ್ಯಾವಲೋಕನ' ಮತ್ತು 'ಭಾಷಾಭೂಷಣ'ಗಳನ್ನು ಬರೆದ ನಾಗವರ್ಮ ಕನ್ನಡ ಭಾಷಾ ಲೋಕದಲ್ಲಿ ಹೆಸರಿಸಬೇಕಾದ ವ್ಯಕ್ತಿ. ಕನ್ನಡದವರಿಗೆ 'ಶಬ್ದಸ್ಮೃತಿ' ಒಂದು ಮಾದರಿ ಗ್ರಂಥ. 'ಭಾಷಾಭೂಷಣ' ಸಂಸ್ಕೃತದ ಮೂಲಕ ಮೂಡಿಬಂದ ಒಂದು ಶ್ರೇಷ್ಠ ಕೃತಿ.

ಕಾವ್ಯ, ಛಂದಸ್ಸು, ನಿಘಂಟು, ವ್ಯಾಕರಣ -ಇವುಗಳನ್ನು ರಚಿಸಿದ ನಾಗವರ್ಮ ಓರ್ವ ಶ್ರೇಷ್ಠ ಶಾಸ್ತ್ರಜ್ಞ; ಕವಿ. ಜನ್ನನು ನಾಗವರ್ಮನನ್ನು ಜಿನೇಂದ್ರ ಪುರಾಣ ಕರ್ತೃಗಳ ಸಾಲಿನಲ್ಲಿ ಸೇರಿಸಿ, ಅವನ ಬಹುಜ್ಞತೆಯನ್ನು ಹೊಗಳಿರುವುದು ಅವನ ಶಾಸ್ತ್ರ ಗ್ರಂಥಗಳ ಹಿನ್ನೆಲೆಯಲ್ಲಿ ಅರ್ಥಪೂರ್ಣವಾಗಿದೆ. ಅವನೊಬ್ಬ ಕಟಕಾಚಾರ್ಯ, ಕವಿಗುಣೋದಯ, ಕವಿಕರ್ಣಪೂರ, ಎಂಬಂಥ ಬಿರುದುಗಳಿಂದ ಆತನ ಪ್ರತಿಭೆ ಸುವ್ಯಕ್ತ.

ನಾಗವರ್ಮನು ಸ್ವತಂತ್ರ ದೃಷ್ಟಿಯುಳ್ಳವನು, ಎನ್ನಲು 'ಭಾಷಾಭೂಷಣ' ಸಾಕಷ್ಟು ಪುರಾವೆಯನ್ನು ನೀಡಿದೆ. ಅಲ್ಲಿಯ ಕನ್ನಡ ಶುದ್ಧಗೆ ಅವನ ಪ್ರಥಮ ಕಾಣಿಕೆ. "ಯುಷ್ಮದ್ರಾದಿ ವಿಧಾನಂ" ಕನ್ನಡ ವ್ಯಾಕರಣವನ್ನು ಸಂಸ್ಕೃತದಿಂದ ಪ್ರತ್ಯೇಕಗೊಳಿಸುವ ಒಂದು ಪ್ರಕರಣವೇ ಆಗಿದೆ. ವ-ಮ-ಹ-ಪ ಭೇದ, ದೇಶೀಯಾಕ್ಷರಗಳು, ಬಿಂದು- ಈ ಮೊದಲಾದುವು ಸಂಸ್ಕೃತದಿಂದ ಪ್ರತ್ಯೇಕಿಸಿರುವ ಉದಾಹರಣೆಗಳು.

ಆಧುನಿಕ ಭಾಷಾ ವಿಜ್ಞಾನವು ಗ್ರಾಂಥಿಕ ಭಾಷೆಗಿಂತ ಹೆಚ್ಚಾಗಿ ಆಡುನುಡಿಗೆ ಆದ್ಯತೆ ಕೊಟ್ಟರೆ, ನಾಗವರ್ಮನಂಥ ಪ್ರಾಚೀನ ವೈಯಾಕರಣರು ಕಾವ್ಯ ಪ್ರಯೋಗಗಳನ್ನು ಅನುಲಕ್ಷಿಸಿಯೇ ವ್ಯಾಕರಣ ಗ್ರಂಥಗಳನ್ನು ರಚಿಸಿದರು. ನಾಗವರ್ಮನ ವ್ಯಾಕರಣಗಳಿಂದ ಅವನ ಕಾಲದವರೆಗಿನ ಕನ್ನಡ ಭಾಷಾ ಸ್ವರೂಪ ಗೊತ್ತಾಗುತ್ತದೆ. ಅವನ ಕೃತಿಗಳು ಕಾವ್ಯ ಭಾಷೆಗೆ ಲಕ್ಷಣ ಹೇಳುತ್ತಿದ್ದರೂ ಆ ಕಾಲದ ಜನರ ಶಿಷ್ಟ ಭಾಷೆಯನ್ನು ಕೂಡ ಗಮನಕ್ಕೆ ತೆಗೆದುಕೊಂಡಿರಬೇಕೆನಿಸುತ್ತದೆ. ಅವನ ಕಾಲಕ್ಕೆ ಕನ್ನಡದ ಅತ್ಯಂತ ಶ್ರೇಷ್ಠ ಕೃತಿಗಳು ರಚಿತವಾಗಿದ್ದವು. ತತ್ಸಮ ತದ್ಭವಗಳೊಂದಿಗೆ ದೇಶ್ಯ ಶಬ್ದಗಳು ಹೇರಳವಾಗಿ ಬಳಕೆಯಾಗಿದ್ದವು. ಇದೆಲ್ಲವನ್ನು ಗಮನದಲ್ಲಿಟ್ಟುಕೊಂಡು ಕನ್ನಡ ಮತ್ತು ಸಂಸ್ಕೃತದಲ್ಲಿ ವ್ಯಾಕರಣಗಳನ್ನು ಬರೆದು ಕನ್ನಡದ ಶಾಸ್ತ್ರ ಸಾಹಿತ್ಯವನ್ನು ನಾಗವರ್ಮ ಶ್ರೀಮಂತಗೊಳಿಸಿದ.

**ಕೇತನ**

ಪ್ರಾಚೀನ ಆಂಧ್ರ ವೈಯಾಕರಣರಲ್ಲಿ ಕೇತನ ಒಬ್ಬ. ನನ್ನಯ, ತಿಕ್ಕನ, ಪೋತನ ಶ್ರೀನಾಥ ಇತ್ಯಾದಿ ಕವಿಗಳಿಗಿರುವ ಸ್ಥಾನಮಾನಗಳು ಕೇತನನಿಗೂ ಇವೆ. ಅವನು

ಆಂಧ್ರದ ವೆಂಗಿಮಂಡಲದ 'ವೆಂಟಿರಾಲ' ಎಂಬ ಗ್ರಾಮದವನು. ಅಂದು ವೆಂಟಿರಾಲ ಎಂಬುದು ಒಂದು ಅಗ್ರಹಾರವಾಗಿತ್ತು. ಇಂದು ಆ ಹೆಸರಿನ ಯಾವ ಗ್ರಾಮವೂ ಕಾಣಬರುತ್ತಿಲ್ಲ. ಪಶ್ಚಿಮ ಗೋದಾವರಿ- ಕೃಷ್ಣಾ ಜಿಲ್ಲೆಗಳ ಸಮೀಪದಲ್ಲಿದ್ದ ಆ ಊರು ಭೂಗತವಾಗಿರಬೇಕು. ಆದರೆ ಆಂಧ್ರದ ಏಲೂರು ತಾಲೂಕಿನ 'ವಿಜಯರಾಯಿ' ಎಂಬ ಗ್ರಾಮವೊಂದು ಕೇತನನ ಸ್ವಗ್ರಾಮ ಎಂಬುದು ಬಹುತೇಕ ವಿದ್ವಾಂಸರ ಅಭಿಮತ. ಅದರಲ್ಲೂ ಚಾಗಂಟಿ ಶೇಷಯ್ಯನವರು ಅದನ್ನು ದೃಢವಾಗಿ ಸಮರ್ಥಿಸಿದ್ದಾರೆ."[೧]

ಕೇತನನ ತಂದೆ ತಾಯಿಗಳ ಬಗ್ಗೆ ಭಿನ್ನಾಭಿಪ್ರಾಯಗಳಿವೆ. ಸ್ವತಃ ಕವಿಯೇ ತನ್ನ ಎರಡೂ ಕೃತಿಗಳಲ್ಲಿ ಭಿನ್ನವಾಗಿ ಹೆಸರಿಸಿದ್ದಾನೆ. ತನ್ನ ತಂದೆ ಮಾರಯನೆಂದು 'ದಶಕುಮಾರ ಚರಿತ್ರೆ'ಯಲ್ಲಿ, ಮ್ರಾನಯನೆಂದು ಆಂಧ್ರ 'ಭಾಷಾ ಭೂಷಣ' ಮತ್ತು 'ವಿಜ್ಞಾನೇಶ್ವರೀಯ'ಗಳಲ್ಲಿ ಹೇಳಿದ್ದಾನೆ. ಅಂತೆಯೇ ತನ್ನ ತಾಯಿಯ ಹೆಸರು 'ದಶಕುಮಾರ ಚರಿತ್ರೆ'ಯಲ್ಲಿ ಸಂಕಮ ಎಂದು, 'ವಿಜ್ಞಾನೇಶ್ವರೀಯಮು' ಗ್ರಂಥದಲ್ಲಿ ಗಂಗಮ ಎಂದು ತಿಳಿಸಿದ್ದಾನೆ.

'ಮಾರ್ನ ಕೇತನ' ಎಂದು ಮದ್ರಾಸಿನ ಪ್ರಾಚ್ಯಲಿಖಿತ ಪುಸ್ತಕ ಭಂಡಾರದಲ್ಲಿರುವ ಓಲೆಗರಿಯೊಂದರಲ್ಲಿ ಬರೆಯಲಾಗಿದೆ. ಹಲವರ ಪ್ರಕಾರ ಕೇತನನ ತಂದೆ ಮಾನಯ, ತಾಯಿ ಅಂಕಮಾಂಬ; ಇನ್ನು ಕೆಲವರ ಪ್ರಕಾರ ತಂದೆ ಮಾರಯ, ತಾಯಿ ಸಂಕಮಾಂಬ.

'ಭೂಷಣ'ದಲ್ಲಿ ಕೇತನ ತಾನು ಮ್ರಾನಯ ಸಂಕಮ ಎಂಬವರ ಮಗನೆಂದೂ, ಹಿತಮಿತ ಸತ್ಯ ವಚೋನಿಪುಣನೆಂದೂ ವಿಜ್ಞಾನಾನೂನ ಮನಸ್ಸುಳ್ಳವನೆಂದೂ ಜ್ಞಾನಸೂನುವೆಂದೂ ಉತ್ತಮ ಮನಸ್ಸುಳ್ಳವನೆಂದೂ ನಾನಾ ಶಾಸ್ತ್ರಜ್ಞನೆಂದೂ, ಗುಣಾಭಿಜ್ಞನೆಂದೂ ಹೇಳಿಕೊಂಡಿದ್ದಾನೆ. ಈ ಅಭಿಪ್ರಾಯಗಳೇ ಇವನ ಮತ್ತೊಂದು ಕೃತಿಯಾದ 'ವಿಜ್ಞಾನೇಶ್ವರ'ದಲ್ಲೂ ವ್ಯಕ್ತವಾಗಿವೆ.

'ದಶಕುಮಾರ ಚರಿತ್ರೆ'ಯಿಂದ ಕೇತನನು 'ಅಭಿನವ ದಂಡಿ' ಬಿರುದಾಂಕಿತನೆಂದೂ, ಸಂಸ್ಕೃತಾದಿ ಭಾಷೆಗಳ ಕಾವ್ಯರಚನೆಯಿಂದ ಹೆಸರುವಾಸಿಯಾದವನೆಂದೂ ತಿಳಿದುಬರುತ್ತದೆ. ಅಲ್ಲದೆ ಆಂಧ್ರ 'ಭಾಷಾ ಭೂಷಣ' ಮತ್ತು 'ವಿಜ್ಞಾನೇಶ್ವರ'ಗಳ ಪ್ರಕಾರ "ಇವನು ವಿವಿಧ ಕಳಾ ನಿಪುಣ, ಕವಿಜನ ಮಿತ್ರ, ಖ್ಯಾತ ಶುಭ ಚರಿತ್ರ, ಸತ್ಕವಿ". ಇವನು ಉಭಯ ಕವಿ ಮಿತ್ರನೂ ಆಗಿದ್ದನು.

ಈತನು ಕೌಂಡಿನ್ಯ ಗೋತ್ರೋದ್ಭವ. ಮೂಲ ಘಟಿಕಾಸ್ಥಾನೀಯ. ಸ್ವಾಧ್ಯಾಯ ನಿರತ. ಕವಿಯ ಮನೆತನದವರು ಮೂಲ ಘಟಿಕದವರು. ಮೂಲ ಘಟಿಕದವರು

ಬ್ರಾಹ್ಮಣರೆಂದು ಗುಂಟೂರು ಜಿಲ್ಲೆಯ ನಾದೆಂಡ್ಲ ಮೂಲ ಸ್ಥಾನೇಶ್ವರ ದೇವಾಲಯದ ಮುಖಮಂಟಪದಲ್ಲಿರುವ ಶಾಸನವೊಂದು ಹೇಳುತ್ತದೆ. ಅದರ ಕಾಲ ಶಾಲಿವಾಹನ ಶಕ ೧೧೫೬. ಇದೇ ಶಾಸನದ ಪ್ರಕಾರ ಮೂಲಘಟಿಕಾನ್ವಯ ನಾಯಕರು ದಂಡನಾಯಕರಾಗಿದ್ದರೆಂದು ರಾಜಾಸ್ಥಾನದ ಉದ್ಯೋಗದಲ್ಲಿ ಅವರು ನಿರತರಾಗಿದ್ದರೆಂದು ಸ್ಪಷ್ಟವಾಗುತ್ತದೆ. ಕವಿ ತಾನು ಬಂಡಾರು ಕೇತನ ದಂಡಾಧೀಶನಿಗೆ ಭಾವ ಮೈದುನನಾಗಿದ್ದುದಾಗಿ ಹೇಳಿಕೊಂಡಿದ್ದಾನೆ.

**ಬಿರುದುಗಳು:**

ಕೇತನನಿಗೆ ವಿವಿಧ ಕಳಾ ನಿಪುಣ, ಅಭಿನವ ದಂಡಿ, ಕವಿಜನಮಿತ್ರ, ಸತ್ಕವಿ ಎಂಬ ಬಿರುದುಗಳಿದ್ದವು. ಕನ್ನಡ ಜನ್ನನಿಗೂ ಕವಿಜನಮಿತ್ರನೆಂಬುದು ಬಿರುದು.

**ಕಾಲ:**

ಕೇತನನ ಕಾಲದ ಬಗ್ಗೆ ಸ್ಪಷ್ಟ ನಿಲುವು ಇದೆ. ನಾಗವರ್ಮನ ಕಾಲದಂತೆ ಅಲ್ಲಿ ಜಟಿಲತೆ ಇಲ್ಲ, ಸಂಕೀರ್ಣತೆ ಗೋಚರಿಸದು. ಯಾವುದೇ ವಿವಾದಕ್ಕೆ ಎಡೆ ಇಲ್ಲ.

ಕೇತನ ದಂಡಿಯ 'ದಶಕುಮಾರ ಚರಿತ್ರೆ'ಯನ್ನು ಬರೆದು ತಿಕ್ಕನನಿಗೆ ಅರ್ಪಿಸಿರುವ ಸಂಗತಿ ತಿಳಿದುಬಂದಿದೆ. ಆಗ ತಿಕ್ಕನ ವೃದ್ಧಾಪ್ಯವನ್ನು ಪಡೆದಿರಬೇಕು. ತಿಕ್ಕನನ ಕಾಲ ಕ್ರಿ.ಶ.೧೨೦೦. ಈ ಕಾರಣ ಕೇತನನ ಕಾಲವನ್ನು ಕ್ರಿ.ಶ. ೧೨೬೦ ಎಂದು ತಿಳಿಯಲಾಗಿದೆ. ಹದಿಮೂರನೆಯ ಶತಮಾನದ ಉತ್ತರಾರ್ಧದಲ್ಲಿದ್ದ ಕೇತನನು ಕನ್ನಡ ಕವಿವರ್ಯರಾದ ಹರಿಹರ, ರಾಘವಾಂಕ, ಕೆರೆಯ ಪದ್ಮರಸರ ಸಮಕಾಲೀನ. ಅವನ ಕಾಲವನ್ನು ತೆಲುಗು ಕವಿಚರಿತ್ರೆಕಾರರು ಕ್ರಿ.ಶ. ೧೨೧೦-೧೩೦೦ ಎಂದು ತಿಳಿಸಿದ್ದಾರೆ. ತಿಕ್ಕನನ ಕಾಲವು ಸ್ಪಷ್ಟವಾದುದರಿಂದ ಕೇತನನ ಕಾಲವೂ ಸ್ಪಷ್ಟವಾಗಿಯೇ ಇದೆ. ದಂಡಿಯ 'ದಶಕುಮಾರ ಚರಿತ್ರೆ'ಯನ್ನು ಕೇತನ ಕ್ರಿ.ಶ.ಸು. ೧೨೫೮ರಲ್ಲೂ 'ಭಾಷಾ ಭೂಷಣ'ವನ್ನು ಸು. ೧೨೬೦ರಲ್ಲೂ ಬರೆದಿರಬಹುದು.

**ಕೇತನನ ಕೃತಿಗಳು:**

ಕೇತನನು ದಶಕುಮಾರ ಚರಿತಮು, ಆಂಧ್ರಭಾಷಾ ಭೂಷಣಂ, ವಿಜ್ಞಾನೇಶ್ವರೀಯಮು ಎಂಬ ಮೂರು ಗ್ರಂಥಗಳನ್ನು ರಚಿಸಿದ್ದಾನೆ. ತನ್ನ 'ಆಂಧ್ರ ಭಾಷಾಭೂಷಣಂ' ಪೀಠಿಕೆಯಲ್ಲಿ ತಾನು ತಿಕ್ಕನ ಮೆಚ್ಚುವಂತೆ 'ದಶಕುಮಾರ ಚರಿತ್ರೆ'ಯನ್ನು ಬರೆದಿರುವುದಾಗಿ ಹೇಳಿಕೊಂಡಿದ್ದಾನೆ. ಇದರ ಪ್ರಕಾರ 'ದಶಕುಮಾರ ಚರಿತ್ರೆ'ಯು ಆಂಧ್ರ 'ಭಾಷಾ ಭೂಷಣ'ದ ಪೂರ್ವದಲ್ಲಿ ಬರೆದ ಕೃತಿಯೆಂದು

ಹೇಳಬಹುದು. ಅವನ ಮೊದಲ ಕೃತಿ ದಶಕುಮಾರ ಚರಿತಮು, ಎರಡನೆಯ ಕೃತಿ ಆಂಧ್ರ ಭಾಷಾ ಭೂಷಣಮು, ಮೂರನೆಯ ಕೃತಿ ವಿಜ್ಞಾನೇಶ್ವರಮು.

**ದಶಕುಮಾರ ಚರಿತಮು:**

ದಂಡಿ ಸಂಸ್ಕೃತ ಭಾಷೆಯ ಉದ್ದಾಮ ಕವಿ. ಅವನು ದಶಕುಮಾರ ಚರಿತೆ, ಕಾವ್ಯಾದರ್ಶ, ಅವಂತಿ ಸುಂದರೀ ಕಥಾ-ಎಂಬ ಕೃತಿಗಳನ್ನು ಬರೆದಿದ್ದಾನೆ. ಕ್ರಿ.ಶ.ಸು. ೧೩೦೦ರಲ್ಲಿ ಚೌಂಡರಸನೆಂಬ ಕವಿಯು 'ದಶಕುಮಾರ ಚರಿತೆ'ಯನ್ನು ಕನ್ನಡ ಭಾಷೆಗೆ ಅನುವಾದಿಸಿದ್ದಾನೆ. ಇದನ್ನು ಕೇತನನೂ ಸು. ೧೨೫೮ರಲ್ಲಿ ಆಂಧ್ರೀಕರಿಸಿದ್ದಾನೆ. ಹೀಗೆ ಕನ್ನಡ- ತೆಲುಗು ಎರಡೂ ಭಾಷೆಗಳಲ್ಲಿ ಸುಮಾರು ೫೦ ವರ್ಷಗಳ ಅಂತರಲ್ಲಿ ಸಂಸ್ಕೃತದ 'ದಶಕುಮಾರ ಚರಿತೆ' ಅನುವಾದಗೊಂಡಿದೆ ಎಂಬುದು ಗಮನಾರ್ಹ.

ದಂಡಿಯ 'ದಶಕುಮಾರ ಚರಿತ್ರೆ'ಯು ಹತ್ತು ಮಂದಿ ರಾಜಕುಮಾರರ ದಿಗ್ವಿಜಯವನ್ನು ವರ್ಣಿಸುವ ಹತ್ತು ಕಥೆಗಳ ಬೃಹತ್ ಕಥಾ ಸಂಕಲನ. ಕಥಾ ಸಂದರ್ಭಾನುಸಾರವಾಗಿ ಅನೇಕ ಉಪಕಥೆಗಳು ಮುಖ್ಯ ಕಥೆಗೆ ಪೂರಕವಾಗಿ ಬರುತ್ತವೆ. ಈ ದೃಷ್ಟಿಯಿಂದ ಅದು ಕಥೆಗಳ ಗುಚ್ಛವೇ ಆಗಿದೆ. ಸಂಸ್ಕೃತವನ್ನು ಆಧರಿಸಿ ಬರೆದ ಈ ಕೇತನನ 'ದಶಕುಮಾರ ಚರಿತೆ'ಯೂ ಹತ್ತು ಮಂದಿ ರಾಜಕುಮಾರರ ಜೊತೆಗೆ ಉಪಕಥೆಗಳನ್ನು ವರ್ಣಿಸುವಲ್ಲಿ ಸುಮಾರು ೧೩೧ ಪಾತ್ರಗಳು ಬರುತ್ತವೆ. ವೈದಿಕ ವರ್ಣಾಶ್ರಮ ಪದ್ಧತಿಗೆ ಸಂಬಂಧಿಸಿದಂತೆ ಅಲ್ಲಿ ೧೨ ಜನ ಬ್ರಾಹ್ಮಣರು, ೩೧ ಮಂದಿ ಕ್ಷತ್ರಿಯರು, ೨೭ ಮಂದಿ ವೈಶ್ಯರು, ಮೂವರು ಋಷಿವರ್ಯರು, ೫ ಜನ ವೇಶ್ಯಾ ಸ್ತ್ರೀಯರು, ಇನ್ನುಳಿದ ೨೮ ಜನ ಸ್ತ್ರೀ ಪಾತ್ರಗಳು ಸೊಗಸಾಗಿ ಮೂಡಿವೆ. ಮುಖ್ಯವಾಗಿ ಸೋಮದತ್ತ, ಅರ್ಥಪಾಲ, ಕಾಮಪಾಲ ಮುಂತಾದವರ ಕಥೆಗಳ ಸ್ವಾರಸ್ಯದ ಸವಿಯನ್ನು ನೆನೆಯಬಹುದು.

ಕೇತನನು ತನ್ನ 'ದಶಕುಮಾರ ಚರಿತೆ'ಯ ಪೀಠಿಕಾ ಪ್ರಕರಣದಲ್ಲಿ ಸಂಸ್ಕೃತಾದಿಭಾಷೆಗಳ ಕಾವ್ಯ ಕರ್ತೃವಿನ ಮತಿಯುಳ್ಳವನು ಎಂದು ತನ್ನನ್ನು ತಾನೇ ಪ್ರಶಂಸಿಕೊಂಡಿದ್ದಾನೆ. ಕೇತನನು ದಂಡಿಯ 'ದಶಕುಮಾರ ಚರಿತೆ'ಯನ್ನು ಆಂಧ್ರೀಕರಿಸುವಲ್ಲಿ ಚೌಂಡರಸನ ಕೃತಿಯನ್ನು ನೋಡಿರಬೇಕೆಂದೂ ಕನ್ನಡ ಗ್ರಂಥದ ಪ್ರಭಾವ ಕೇತನನ ಮೇಲೆ ಸಾಕಷ್ಟು ಬಿದ್ದಿರಬೇಕೆಂದೂ ಕೆಲವರು ತಿಳಿದಿದ್ದಾರೆ.[೬] ಆದರೆ ಅದಕ್ಕೆ ಅಧಾರವಿಲ್ಲ. ಮೇಲಾಗಿ ದಂಡಿಯ ಕೃತಿಯನ್ನು ಮೊದಲು ಅನುವಾದ ಮಾಡಿದವನು ಕೇತನ. ಚೌಂಡರಸ ಕೇತನನಿಗಿಂತ ಸುಮಾರು ೫೦ ವರ್ಷ ಈಚಿನವನು. ಈ ಇಬ್ಬರ ಕೃತಿಗಳು ಸುಮಾರು ಒಂದೇ ಕಾಲದಲ್ಲಿ ಬಂದ ಎರಡು ಅನುವಾದಗಳೆಂಬುದು ಮಾತ್ರ ನಿಜ.

## ಆಂಧ್ರ ಭಾಷಾ ಭೂಷಣಂ:

ಇದು ಕೇತನನ ಎರಡನೆಯ ಗ್ರಂಥ. 'ದಶಕುಮಾರ ಚರಿತೆ'ಯನ್ನು ಆಂಧ್ರೀಕರಿಸಿದ ಅನಂತರದಲ್ಲಿ ಅದನ್ನು ಬರೆದಿರುವಂತೆ ಅವನ ಕೃತಿಗಳಿಂದ ತಿಳಿದುಬರುತ್ತದೆ. ಕ್ರಿ.ಶ.೧೨೬೦ರಲ್ಲಿ ಕೇತನನು ಆಂಧ್ರ 'ಭಾಷಾ ಭೂಷಣ'ವನ್ನು ಬರೆದಿರಬೇಕು. ಇದು ತೆಲುಗು ಭಾಷೆಯಲ್ಲಿ ಬರೆದ ಮೊದಲ ವ್ಯಾಕರಣ ಗ್ರಂಥ. ನನ್ನಯನು ಬರೆದನೆಂದು ಕೆಲವರು ಭಾವಿಸಿರುವ ಆಂಧ್ರ 'ಶಬ್ದ ಚಿಂತಾಮಣಿ' ಸಂಸ್ಕೃತ ಭಾಷೆಯಲ್ಲಿದೆ. ಅಥರ್ವಣ ಕೃತವಾದ ತ್ರಿಲಿಂಗ ಶಬ್ದಾನುಶಾಸನ ವ್ಯಾಕರಣದ ಆದ್ಯ ಕೃತಿಯೆಂದು ಕೆಲವು ವಿದ್ವಾಂಸರ ಅಭಿಮತ. ಡಾ.ಎ.ರಾಜೇಶ್ವರ ಶರ್ಮ ಎಂಬುವರು "ಅಥರ್ವಣ ಕೃತಿಯಾದ 'ತ್ರಿಲಿಂಗ ಶಬ್ದಾನುಶಾಸನ'ಕ್ಕೆ ಸ್ವಲ್ಪ ಅನಂತರವೋ ಅಥವಾ ಸಮಕಾಲೀನರಲ್ಲಿಯೋ ಹೊರಬಂದ ಆಂಧ್ರ ವ್ಯಾಕರಣ ಗ್ರಂಥವೇ ಆಂಧ್ರ ಭಾಷಾ ಭೂಷಣ" ಎಂದಿದ್ದಾರೆ.[೪೪]

ಕೇತನನೇ ಆಂಧ್ರದ ಪ್ರಥಮ ವ್ಯಾಕರಣ ಕರ್ತೃವೆಂಬುದಕ್ಕೆ 'ಭಾಷಾ ಭೂಷಣ'ದಲ್ಲಿಯ ಅವನದೇ ಒಂದು ಪದ್ಯವನ್ನು ನೋಡಬಹುದು:

ಮುನ್ನು ತೆನುಗುನಕು ಲಕ್ಷಣ
ಮೆನ್ನಡು ನೆವ್ವರುನು ಚಪ್ಪರೇ ಚೆಪ್ಪೆರ ವಿ
ದ್ವನ್ನಿಕರಮು ಮದಿ ಮೆಚ್ಚಗ
ನನ್ನಯ ಭಟ್ಟಾದಿ ಕವಿ ಜನಂಬುಲ ಕರುಣನ್॥

(ಆಂ. ಭಾ.ಭೂ. ಪ. ೬)

(ಈ ಮೊದಲಿಗೆ ತೆಲುಗು ಭಾಷೆಯಲ್ಲಿ ಅದರ ಲಕ್ಷಣವನ್ನು ಯಾರೂ ಎಂದೂ ಹೇಳಲಿಲ್ಲವಾದುದರಿಂದ ವಿದ್ವಾಂಸರ ಮನಸ್ಸನ್ನು ಸಂತೋಷಪಡಿಸಲು ನನ್ನಯ ಭಟ್ಟಾದಿ ಕವಿವರ್ಯರ ಕೃಪೆಯಿಂದ ನಾನು ಹೇಳುತ್ತೇನೆ.)

ಮೇಲಿನ ಪದ್ಯದ ಆಧಾರದಿಂದ ದಿವಂಗತ ವೀರೇಶಲಿಂಗಂ ಪಂತುಲುರವರು "ಮೇಲಿನ ಪದ್ಯವನ್ನು ಅನುಸರಿಸಿ ಆಂ.ಭಾ.ಭೂ.ದ ರಚನೆಯ ಪೂರ್ವದಲ್ಲಿ ಯಾರೂ ಆಂಧ್ರ ವ್ಯಾಕರಣವನ್ನು ರಚಿಸಿರಲಾರರು" ಎಂದಿದ್ದಾರೆ.[೪೫]

"ಏನಾದರೂ ಅದು (ಆಂ.ಶ.ಚಿಂ) ಸಂಸ್ಕೃತದಲ್ಲಿ ಬರೆಯಲಾದ ವ್ಯಾಕರಣ. ತೆಲುಗು ವ್ಯಾಕರಣಕ್ಕೆ ತೆಲುಗು ಭಾಷೆಯಲ್ಲಿ ಪ್ರಪ್ರಥಮವಾಗಿ ಬರೆದುದು ಕೇತನನೇ."[೪೬]

ಕೇತನನು ಆಂಧ್ರ ವ್ಯಾಕರಣದ ಕರ್ತೃ ಅಲ್ಲ ಎಂಬ ವಾದ-ವಿವಾದಗಳು ಇಲ್ಲದೇ ಇಲ್ಲ. ಅಂಥವುಗಳಲ್ಲಿ ಒಂದನ್ನು ಹೀಗೆ ಸಂಗ್ರಹಿಸಬಹುದು:

೧೭ನೆಯ ಶತಮಾನದ ಗಣಪವರಪ್ರ ವೆಂಕಟಕವಿ ಕೂಡ ತನ್ನ 'ಆಂಧ್ರ ಕೌಮುದಿ'ಯಲ್ಲಿ ತನಗಿಂತ ಮೊದಲು ವ್ಯಾಕರಣವೇ ಇಲ್ಲವೆಂದು ನಿಶ್ಚಯಿಸಿ ಹೇಳಿದ್ದಾನೆ. ಹಾಗೆಯೇ ಕೇತನನೂ ತನಗೆ ಮೊದಲು ತೆಲುಗು ವ್ಯಾಕರಣವಿಲ್ಲವೆಂದು ತಿಳಿದಿದ್ದಾನೆ. ಆದುದರಿಂದ ಕೇತನನಿಗೆ ಮೊದಲೇ ವ್ಯಾಕರಣಗಳಿರಬೇಕೆಂದು ಶ್ರೀ ಚಿನ ಸೀತಾರಾಮಸ್ವಾಮಿ ಶಾಸ್ತ್ರಿಯವರ ಅಭಿಪ್ರಾಯ. ಕೇತನನಿಗಿಂತ ಮೊದಲು ಆಂಧ್ರ ವ್ಯಾಕರಣ ಗ್ರಂಥಗಳು ಇದ್ದುವೆಂದು ನಿರ್ಣಯಿಸುವುದರಲ್ಲಿ ಯಾವ ಅಭ್ಯಂತರವೂ ಇಲ್ಲ. ಆದರೆ ಆಂಧ್ರ 'ಶಬ್ದ ಚಿಂತಾಮಣಿ' ಮಾತ್ರ ಕೇತನನಿಗಿಂತ ಮೊದಲು ಬರೆದ ವ್ಯಾಕರಣ ಗ್ರಂಥವಲ್ಲ. ಕವಿ ಭಲ್ಲಟನು ನಿಶ್ಚಯವಾಗಿ ಕೇತನನಿಗಿಂತ ಪೂರ್ವಿಕನೆಂದು ತಿಳಿಯಬಹುದು.[೪೭]

ಕೇತನನು ಆಂಧ್ರದ ಪ್ರಥಮ ವ್ಯಾಕರಣ ಕರ್ತೃ ಹೌದೋ ಅಲ್ಲವೋ ಎಂಬ ಜಿಜ್ಞಾಸೆಯಿದ್ದಾಗಲೂ ಕೆಲವು ವಿದ್ವಾಂಸರು ತೆಲುಗಿನ ಪ್ರಥಮ ವ್ಯಾಕರಣದ ಕರ್ತೃವಿನ ಬಗ್ಗೆ ಹೀಗೆ ವಿವೇಚಿಸಿದ್ದಾರೆ:

೧. ವಾಲ್ಮೀಕಿ; ೨. ಕಣ್ವ; ೩. ಬೃಹಸ್ಪತಿ; ೪. ಹೇಮಚಂದ್ರ; ೫. ಪುಷ್ಪದಂತ; ೬. ರಾವಣ; ೭. ಕವಿ ಭಲ್ಲಟ; ೮. ಕವಿರಾಕ್ಷಸ; ೯. ವಿಷ್ಣುಶರ್ಮ; ೧೦. ಶ್ರೀಕವಿ; ೧೧. ಹರಿ; ೧೨. ಶೃಂಗಾರ ಭೂಷಣ; ೧೩. ಕವಿ ಶಿಖಾಮಣಿ; ೧೪. ಮೃದು ಭೂಷಣ; ೧೫. ಶೌರಿಕವಿ; ೧೬. ಭಾವುಕ; ೧೭. ಅಥರ್ವಣ. ೧೮. ರೇಚನ; ೧೯. ಕೇತನ; ೨೦. ನನ್ನಯ.

ಮೇಲಿನವರೆಲ್ಲರೂ ಆಂಧ್ರದ ಪ್ರಥಮ ವ್ಯಾಕರಣದ ಪಟ್ಟಿಯಲ್ಲಿದ್ದಾರೆ. ಡಾ.ಎ.ರಾಜೇಶ್ವರ ಶರ್ಮರು ತಮ್ಮ ಅಭಿಪ್ರಾಯವನ್ನು ಹೇಳುತ್ತಾ 'ಆಂಧ್ರ ಶಬ್ದ ಚಿಂತಾಮಣಿ' ನನ್ನಯ ಭಟ್ಟಾರಕನು ಬರೆದನು ಎನ್ನುವುದಕ್ಕಿಂತ ಬರೆಯಲಿಲ್ಲ ಎನ್ನಲು ಕಾರಣ ಹೆಚ್ಚಾಗಿ ಇರುವುದರಿಂದ 'ಚಿಂತಾಮಣಿ' ಪ್ರಥಮ ವ್ಯಾಕರಣ ಗ್ರಂಥವಲ್ಲವೆಂದು ತಿಳಿದು ಬರುತ್ತದೆ[೪೮] ಎಂದಿದ್ದಾರೆ.

ಆಂಧ್ರ ಭಾಷಾ ಭೂಷಣ ಬಿಟ್ಟರೆ ಬೇರೆ ವ್ಯಾಕರಣ ಗ್ರಂಥಗಳ ಬಗ್ಗೆ ಖಚಿತವಾಗಿ ಹೇಳಲು ಮಾಹಿತಿಗಳಿಲ್ಲ. ಇದರಿಂದ ಕೇತನನೇ ತೆಲುಗಿನ ಮೊದಲ ವ್ಯಾಕರಣಕಾರನೆಂದು ಸದ್ಯಕ್ಕೆ ಇಟ್ಟುಕೊಳ್ಳಬಹುದು.

ಪ್ರಥಮ ವ್ಯಾಕರಣ ಕರ್ತನಾದ ಕೇತನ ಸಂಸ್ಕೃತ ಮತ್ತು ಪ್ರಾಕೃತ ವ್ಯಾಕರಣ ಗ್ರಂಥಗಳ ಪ್ರಭಾವಕ್ಕೆ ಒಳಗಾಗಿದ್ದಾನೆ. ಅವನು ಪಾಣಿನಿ ಸಂಪ್ರದಾಯವನ್ನು, ಅದರ ಜೊತೆಗೆ ಕುಮಾರಸ್ವಾಮಿ ವ್ಯಾಕರಣ ಸಂಪ್ರದಾಯವನ್ನು ಸ್ವೀಕರಿಸಿದಂತೆ ತನ್ನ ಕೃತಿಯಲ್ಲಿ ವಿವರಿಸಿದ್ದಾನೆ. ಕೆಲವು ವಿಷಯಗಳಿಗೆ ಕಾತಂತ್ರವನ್ನು ಅನುಸರಿಸಿದ್ದಾನೆ. ಅವುಗಳ ವಿವರಣೆಯನ್ನು ಮುಂದೆ ತಿಳಿಸಲಾಗಿದೆ.

ಆಂ.ಭಾ.ಭೂ.ದ ಕರ್ತೃ ತನ್ನ ವ್ಯಾಕರಣ ತೆಲುಗು ಭಾಷೆಗೆ ಸಮಗ್ರವಲ್ಲವೆಂದು ಅದು ಕೇವಲ ದಿಕ್ಪ್ರದರ್ಶನವೆಂದು ಸ್ಪಷ್ಟವಾಗಿ ಹೇಳಿದ್ದಾನೆ.

ಕಂಚಿ ನೆಲ್ಲೂರು ಮಱಿಯೋರುಗಲ್ಲಯೋಧ್ಯ
ಮನು ಪುರಂಬುಲ ಪೈ ಗಂಗಕರುಗುಮನಿನ
ಪಗಿದಿ ನೊಕ ತ್ರೋವ ಜೂಪೆದ ಬಹುಪದಂಬು
ಲಾಂಧ್ರ ಭಾಷಕು ಗಲವನಿ ಯರಸಿಕೊನುಡು (ಪ.೧೩)

ಮೇಲಿನ ಪದ್ಯದ ಅನಂತರ ಕೇತನನು ಸಮಗ್ರ ಭಾಷೆಗೆ ತಾಯಿ ಸಂಸ್ಕೃತ ಎಂದೇ ಸಾರಿದ್ದಾನೆ. ಮುಂದೆ ತನ್ನ ಗ್ರಂಥದಲ್ಲಿ ಇರುವ ಪ್ರಕರಣಗಳನ್ನು ನೇರವಾಗಿ ಹೇಳದಿದ್ದರೂ ಆರು ಪ್ರಕರಣಗಳಿರುವಂತೆ ಸೂಚಿಸಿದ್ದಾನೆ. ಆ ಆರು ಪ್ರಕರಣಗಳು ೧. ಭಾಷಾ ಭೇದ ವಿವರಣೆ (ಸಂಜ್ಞಾಪ್ರಕರಣ); ೨. ತತ್ಸಮ ಪ್ರಕರಣಮು; ೩. ಸಂಧಿ ಪ್ರಕರಣಮು; ೪. ವಿಭಕ್ತಿ ಪ್ರಕರಣಮು; ೫. ಸಮಾಸ ಪ್ರಕರಣಮು; ೬. ಕ್ರಿಯಾಪ್ರಕರಣಮು.

ಆಂಧ್ರ ವ್ಯಾಕರಣ ರಚನೆಯಲ್ಲಿ ತನ್ನದು ಪ್ರಥಮ ಪ್ರಯತ್ನವೆಂದು ಅಲ್ಲಿರುವ ಕೆಲವು ತಪ್ಪುಗಳನ್ನು ಸಹೃದಯರು ಸರಿಯಾಗಿ ತಿದ್ದಬೇಕೆಂದೂ, ಒಪ್ಪುಗಳನ್ನು ಮಾತ್ರ ಸ್ವೀಕರಿಸಬೇಕೆಂದೂ ವಿನಯದಿಂದ ಸುಕವಿಗಳನ್ನು ಕೇಳಿಕೊಂಡಿದ್ದಾನೆ.

ಒಪ್ಪುಲು ಗಲ್ಗಿನ ಮೆಚ್ಚುಡು
ತಪ್ಪುಲು ಗಲ್ಗಿನ ನೆಱಿಂಗಿ ತಗದಿದ್ದುಡು ತ
ಪ್ಪೊಪ್ಪನಕುಡೊಪ್ಪು ತಪ್ಪನಿ
ಚೆಪ್ಪಕುಡೀ ಕವುಲುಪಾನ್ತಿ ಚೇಸೆದ ಮಿಮ್ಮುನ್॥ (ಪ.೯)

ಈ ತಪ್ಪುಗಳಾದರೂ ಕಾಳಿದಾಸ, ಮಯೂರಾದಿ ಕವಿಗಳ ಗ್ರಂಥಗಳಲ್ಲಿರ ಬೇಕಾದರೆ ಇತರರ ಬಗ್ಗೆ ಹೇಳುವುದರಲ್ಲೇನಿದೆ? ತನ್ನತ್ತ ಕರುಣೆದೋರಬೇಕೆಂದು ಸುಕವಿಗಳಲ್ಲಿ ಪ್ರಾರ್ಥಿಸಿಕೊಂಡಿದ್ದಾನೆ.

ನೇರಮುಲು ಕಾಳಿದಾಸ ಮ
ಯೂರಾದುಲ ಕೈನಗಲುಗು ನೊರುಲಕು ತೀವೇ
ಸಾರಮತು ಲೈನ ಸುಕವುಲ
ಕಾರುಣ್ಯಮು ಕಲಿಮಿ ನೇರ್ಪು ಕವಿ ಜನಮುಲಕುನ್॥ (ಪ.೧೨)

ಕೇತನನು ತನ್ನ ಕೃತಿಯ ಪ್ರಣಾಳಿಕೆಯಲ್ಲಿ ೬ ಸಮಾಸಗಳನ್ನು, ೨೬ ಅಂತಗಳನ್ನು, ೬ ಸಂಧಿಗಳನ್ನು, ಅವ್ಯಯಗಳನ್ನು, ೩ ರೀತಿಗಳನ್ನು, ೭ ವಿಭಕ್ತಿಗಳನ್ನು ಕುರಿತು ಹೇಳಿರುವುದಾಗಿ ತಿಳಿಸಿದ್ದಾನೆ. ಅವನ ಕೃತಿಯ ಪ್ರಣಾಳಿಕೆಯನ್ನು ಅರುಹುವ ಪದ್ಯವೊಂದು ಹೀಗಿದೆ:

ಅಜು ಸಮಾಸಮು ಅರುವದಿ
ಯಾಜಂತಮು ಲಾಜು ಸಂಧುಲವ್ಯಯಮುಲು ಪೆ-
ಕ್ಕಾಜಿಂಟ ಸಗಮು ರೀತುಲು
ನಾಜಿಂಟಿಕಿ ನೊಕ್ಕಡೆಕ್ಕು ಡೌನು ವಿಭಕ್ತುಲ್॥ (ಪ.೧೮)

ಆದರೆ ಕೇತನನಲ್ಲಿ ಇವುಗಳನ್ನು ವಿವರಿಸುವಲ್ಲಿ ಸಂಧಿ ಸಮಾಸಗಳ ಸಂಖ್ಯೆಯನ್ನು ಸ್ಪಷ್ಟಪಡಿಸಿಲ್ಲ, ಅಸ್ತವ್ಯಸ್ತಗೊಂಡಿವೆ.

ಸಾರಾಂಶವಾಗಿ - ವರ್ಣ ಸಮಾಮ್ನಾಯವು ಸಮಗ್ರವಾಗಿ ನಿರೂಪಿತವಾಗಿಲ್ಲ. ಆರು ಸಂಧಿಗಳನ್ನು ಹೇಳಿದ್ದರೂ, ಅವುಗಳ ಹೆಸರುಗಳನ್ನು ವಿವರಿಸಲಿಲ್ಲ. ಸಮಾಸಗಳಲ್ಲಿ ಪ್ರಸಿದ್ಧವಾದ ಕರ್ಮಧಾರಯ ಮತ್ತು ತತ್ಪುರುಷಗಳ ಬಗ್ಗೆ ಹೇಳುವುದಿರಲಿ, ಅವುಗಳ ಹೆಸರನ್ನೂ ಸೂಚಿಸಿಲ್ಲ. ೨೬ ಅಂತಗಳಾವುವು ಎಂಬುದರ ಕಲ್ಪನೆ ಇಲ್ಲ. ಸಂಧಿಗಳ ಬಗ್ಗೆ ಸಮಗ್ರ ಚಿಂತನೆ ಸಾಲದು. ಅವ್ಯಯಗಳ ಬಗ್ಗೆ ಕೇವಲ ಹೆಸರಿಸಿದ್ದಾನೆಯೇ ಹೊರತು, ಅವುಗಳ ವಿವರಣೆಗೆ ಹೋಗಿಲ್ಲ. ಸಪ್ತ ವಿಭಕ್ತಿ ಪ್ರತ್ಯಯಗಳನ್ನು ಹೆಸರಿಸಿದ್ದರೂ, ಹೆಚ್ಚಾಗಿ ಬಹುವಚನ ಮತ್ತು ಸಂಬೋಧನೆಯನ್ನು ಕುರಿತು ತಿಳಿಸಿದ್ದಾನೆ. ಪದ್ಯಗಳಲ್ಲಿ ಪ್ರಕ್ರಿಯೆಗಳು ತಲೆಕೆಳಗಾಗಿವೆ. ಕೆಲವು ಪ್ರತಿಗಳಲ್ಲಿ ಕೆಲವು ಲಕ್ಷಣ ಪದ್ಯಗಳಿಲ್ಲವೆಂಬುದೂ ಗಮನಾರ್ಹ.

ತೆಲುಗು ವ್ಯಾಕರಣ ವಿಭಜನೆಯನ್ನು ಕುರಿತು ತಿಳಿಸುವಲ್ಲಿ ೧. ತತ್ಸಮ ೨. ತದ್ಭವ ೩. ಅಚ್ಚತೆನುಗು ೪. ದೇಶ್ಯಮು ೫. ಗ್ರಾಮ್ಯ ಎಂಬ ಐದು ಪ್ರಭೇದಗಳನ್ನು ಗುರುತಿಸಿದ್ದಾನೆ. ತನ್ನ ಕೃತಿ ದಿಗ್‌ದರ್ಶನವಾದುದರಿಂದಲೋ ಏನೋ ಅವುಗಳನ್ನು ಸಂಕ್ಷಿಪ್ತವಾಗಿ ನಿರೂಪಿಸಿರುವುದು ಸುವ್ಯಕ್ತ. ಆದರೂ ವಿಪುಲವಾದ ವ್ಯಾಕರಣ ಅಂಶಗಳ ವಿವರಣೆಯಲ್ಲಿ ವಸ್ತು ಸಾಲದು. ಆ ಕೃತಿ ಇತರ ಕೃತಿಗಳಿಂದ ಭಿನ್ನವಾಗಿದೆ.

ಒಟ್ಟಾರೆ ಕೇತನನ ವ್ಯಾಕರಣ ಕೃತಿ ಪ್ರಥಮ ವ್ಯಾಕರಣವಾದುದರಿಂದ, ಕೇವಲ ೧೯೦ ಕಂದ ಪದ್ಯಗಳ ಒಂದು ಸ್ವತಂತ್ರ ವ್ಯಾಕರಣ ಗ್ರಂಥವಾದುದರಿಂದ ಅದನ್ನು ಮೆಚ್ಚಲೇ ಬೇಕು. ಕೆಲವೊಂದು ವಿಶಿಷ್ಟ ಗುಣಗಳಿಂದ ಅದು ಮುಂದಿನ ವೈಯಾಕರಣರಿಗೆ ಮಾರ್ಗದರ್ಶಕವಾಯಿತು.

**ವಿಜ್ಞಾನೇಶ್ವರಮು:**

ಕೇತನನ ಕಾಲ ಧರ್ಮದ ಕಾಲವಾಗಿತ್ತು. ಜನ ಹೆಚ್ಚು ಭಕ್ತಿ ಭಾವನೆಯಿಂದ ಕೂಡಿದ್ದರು. ಧರ್ಮ ಗ್ರಂಥಗಳಿಗೆ ಹೆಚ್ಚಿನ ಪ್ರಾಮುಖ್ಯತೆ ದೊರೆತಿತ್ತು. ಅಂತಹವುಗಳಲ್ಲಿ 'ವಿಜ್ಞಾನೇಶ್ವರಮು' ಒಂದು. ಆ ಕಾಲದಲ್ಲಿ ಸಂಸ್ಕೃತದ ಧರ್ಮಗ್ರಂಥಗಳು ಯಾವುವೂ

ಪ್ರಾದೇಶಿಕ ಭಾಷೆಗಳಲ್ಲಿ ಅನುವಾದಗೊಂಡಿರಲಿಲ್ಲ. 'ವಿಜ್ಞಾನೇಶ್ವರಮು' ತೆಲುಗು ಭಾಷೆಗೆ ಅನುವಾದಗೊಂಡ ಮೊಟ್ಟಮೊದಲು ಉಪಲಬ್ಧ ಧರ್ಮಶಾಸ್ತ್ರ ಗ್ರಂಥ.

ಯಾಜ್ಞವಲ್ಕ್ಯನ 'ಯಾಜ್ಞವಲ್ಕ್ಯಸ್ಮೃತಿ' ಸಂಸ್ಕೃತದ ಒಂದು ಶ್ರೇಷ್ಠ ಧರ್ಮ ಗ್ರಂಥ. ಅದರಲ್ಲಿ ಒಟ್ಟು ೧೦೧೧ ಸಂಸ್ಕೃತದ ಶ್ಲೋಕಗಳಿವೆ. ಅದಕ್ಕೆ ವಿಜ್ಞಾನೇಶ್ವರನ 'ಮಿತಾಕ್ಷರಿ' ಎಂಬ ವ್ಯಾಖ್ಯಾನವಿದೆ. ಅದನ್ನೇ ಕೇತನ ಕೇವಲ ೪೩೩ ಪದ್ಯಗಳಲ್ಲಿ ಅನುವಾದಿಸಿದ್ದಾನೆ. ಅವನಿಟ್ಟ 'ವಿಜ್ಞಾನೇಶ್ವರಮು' ಎಂಬ ತಲೆಬರೆಹ ಅರ್ಥಪೂರ್ಣ.

ಕೇತನ ಓರ್ವ ಉತ್ತಮ ಅನುವಾದಕ. 'ದಶಕುಮಾರ ಚರಿತ್ರೆ' ಮತ್ತು 'ವಿಜ್ಞಾನೇಶ್ವರಮು' ಇದಕ್ಕೆ ನಿದರ್ಶನ. ಕೇತನನು ರಚಿಸಿದ ಮೂರು ಗ್ರಂಥಗಳು ಮೂರು ವಿಧವಾಗಿ ವಿಶಿಷ್ಟವಾದವು ಎನ್ನಬಹುದು. ೧. ಗದ್ಯ ಕಾವ್ಯದ ಚಂಪೂರೂಪದ ಅನುವಾದ 'ದಶಕುಮಾರ ಚರಿತ್ರ'. ೨. ಪ್ರಥಮಾಂಧ್ರ ವ್ಯಾಕರಣ ಗ್ರಂಥವಾದ ಆಂ.ಭಾ.ಭೂ. ೩. ಪ್ರಥಮ ಧರ್ಮಶಾಸ್ತ್ರ 'ವಿಜ್ಞಾನೇಶ್ವರಮು'. ಹೀಗೆ ಕವಿಯಾಗಿ ಅನುವಾದಕನಾಗಿ, ವೈಯಾಕರಣಿಯಾಗಿ ಆಂಧ್ರ ವಾಙ್ಮಯದಲ್ಲಿ ಕೇತನ ವಿಶಿಷ್ಟ ಸ್ಥಾನಗಳಿಸಿದ್ದಾನೆ.

**ತೆಲುಗು ವ್ಯಾಕರಣ ಪರಂಪರೆಯಲ್ಲಿ ಕೇತನನ ಸ್ಥಾನ:**

"ತೆಲುಗು ವ್ಯಾಕರಣ ದೀಪ ಚಿಕ್ಕದು" ಎಂದೇ ಪ್ರಸಿದ್ಧವಾದ ಹೇಳಿಕೆ ಇದ್ದರೂ ತೆಲುಗು ಭಾಷೆಗೆ ಹಲವು ವ್ಯಾಕರಣಗಳು ರಚಿತವಾಗಿರುವುದನ್ನು ಗಮನಿಸಬಹುದು. ಇವುಗಳಲ್ಲಿ ಕೆಲವು ತೆಲುಗಿನಲ್ಲಿ ರಚಿತವಾಗಿದ್ದರೆ ಕೆಲವು ಸಂಸ್ಕೃತದಲ್ಲಿ ರಚಿತವಾಗಿವೆ. ಕೆಲವು ಸೂತ್ರ ರೂಪದಲ್ಲಿದ್ದರೆ ಮತ್ತೆ ಕೆಲವು ಪದ್ಯ ರೂಪದಲ್ಲಿವೆ. ನನ್ನಯನಿಂದ (ಕ್ರಿ.ಶ. ೧೧ನೆಯ ಶತಮಾನ) ಸಂಸ್ಕೃತದಲ್ಲಿ ರಚಿತವಾಯಿತೆಂದು ಭಾವಿಸಿದ್ದ ಆಂಧ್ರ 'ಶಬ್ದಚಿಂತಾಮಣಿ' ನನ್ನಯನದಲ್ಲವೆಂದೇ ಅನೇಕರು ಅಭಿಪ್ರಾಯಪಟ್ಟಿದ್ದಾರೆ. ಅಥರ್ವಣ ಕಾರಿಕಾವಳಿಯನ್ನು ಸಂಸ್ಕೃತದಲ್ಲಿ ಬರೆದ ಅಥರ್ವಣಾಚಾರ್ಯ ಕೂಡ ೧೧ನೆಯ ಶತಮಾನವೆಂದು ಕೆಲವರು ಅಭಿಪ್ರಾಯಪಟ್ಟಿದ್ದರೂ ಅವನು ಕೇತನನಿಗಿಂತ ಅನಂತರದವನೆಂದು ಹೆಚ್ಚಿನ ವಿದ್ವಾಂಸರ ಮತ. ಇದೇನೇ ಇದ್ದರೂ ತೆಲುಗು ಭಾಷೆಗೆ ವ್ಯಾಕರಣ ಬರೆದವರಲ್ಲಿ ಮೊದಲನೆಯವನೆಂಬ ಪ್ರಶಸ್ತಿ ಕೇತನನಿಗೆ ಲಭಿಸಿದೆ.

ಆಂಧ್ರ ವಾಙ್ಮಯದಲ್ಲಿ ೧೩ನೆಯ ಶತಮಾನಕ್ಕೆ ಸಂಸ್ಕೃತ ವಾಙ್ಮಯದ ಸಾಹಿತ್ಯ ಪ್ರಕಾರಗಳನ್ನು ದೇಶೀಯ ಸಾಹಿತ್ಯ ಪ್ರಕಾರಗಳನ್ನು ಅನುಸರಿಸಿ ಕವಿಗಳು ಗ್ರಂಥ ರಚನೆ ಮಾಡಿದ್ದರು. ಕೇತನನಾದರೂ ಸ್ವಲ್ಪ ಸಂಸ್ಕೃತ ಮತ್ತೆ ಸ್ವಲ್ಪ ತೆಲುಗು ಸಂಪ್ರದಾಯಗಳನ್ನು ಸ್ವೀಕರಿಸಿ ತನ್ನ ವ್ಯಾಕರಣಗ್ರಂಥವಾದ ಆಂಧ್ರ 'ಭಾಷಾ ಭೂಷಣ'ಕ್ಕೆ ನಾಂದಿ ಹಾಡಿದ.

ತನ್ನದೇ ಆದ ಒಂದು ವ್ಯಾಕರಣದ ಪ್ರಣಾಳಿಕೆಯನ್ನು ಸಿದ್ಧಪಡಿಸಿದ. ಅವನು ರಚಿಸಿದ ಆಂಧ್ರ 'ಭಾಷಾ ಭೂಷಣಂ' ಆಂಧ್ರ ಭಾಷೆಗೆ ಭೂಷಣಪ್ರಾಯವಾಯಿತು. ಇದೊಂದು ಚಿಕ್ಕ ಗ್ರಂಥವಾದರೂ ವ್ಯಾಕರಣ ಪ್ರಕ್ರಿಯೆಗಳಿಂದ ಚೊಕ್ಕವಾಗಿಯೇ ಇವೆ. ನನ್ನಯನ ಚಂಪು ಯುಗ ಬದಲಾಗಿ ದೇಶಿಯತ್ತ ತಿರುಗುವುದನ್ನು ಕೇತನನು ರಚಿಸಿದ ಆಂಧ್ರ 'ಭಾಷಾ ಭೂಷಣ'ದಂತಹ ಕೃತಿಗಳು ಸಮರ್ಥಿಸುತ್ತವೆ. ಸಂಸ್ಕೃತ ಪದಗಳನ್ನು ಆಂಧ್ರೀಕರಿಸುವಲ್ಲಿ ಅವನ ಸ್ವತಂತ್ರ ಮನೋಭಾವನೆ ಎದ್ದು ಕಾಣುತ್ತದೆ. ಅವನು ನಿರೂಪಿಸಿದ ಡು, ಮು, ವು, ಲು- ಪ್ರತ್ಯಯ, ಅರಸೊನ್ನೆ, ಸರ್ವನಾಮ, ತೆಲುಗು ಭಾಷಾ ವಿಭಜನೆಯಲ್ಲಿ ಕಂಡು ಬರುವ ಅಚ್ಚತೆನುಗು, ದೇಶ್ಯ, ಗ್ರಾಮ್ಯ- ಇಂಥ ಪ್ರಸಂಗಗಳು ಕೃತಿಕಾರನ ಸ್ವತಂತ್ರ ಮನೋಭಾವಕ್ಕೆ ಸೂಚಕಗಳಾಗಿವೆ. ಕೇತನ ತನ್ನ ಕೃತಿರಚನೆಯಲ್ಲಿ ಪಾಣಿನಿಯ ಸಂಪ್ರದಾಯವನ್ನಲ್ಲದೆ ಕುಮಾರಸ್ವಾಮಿಯನ್ನು ಕೂಡ ಹೆಸರಿಸಿರುವುದರಿಂದ ಕೌಮಾರ ವ್ಯಾಕರಣವನ್ನು ನೋಡಿರಬಹುದು. ಆದರೆ ಕುಮಾರ ಸ್ವಾಮಿ ಅದಾವ ಸಂಸ್ಕೃತ ವ್ಯಾಕರಣ ಗ್ರಂಥವನ್ನು ರಚಿಸಿರುವನೋ ತಿಳಿಯದು. ಶರ್ವವರ್ಮ ರಚಿಸಿದ 'ಕಾತಂತ್ರ ವ್ಯಾಕರಣ'ವನ್ನೇ ಕೌಮಾರವ್ಯಾಕರಣವೆಂದು ಲಾಕ್ಷಣಿಕರು ಕರೆದಿದ್ದಾರೆ. ಅದು ಕೇತನನ ಮೇಲೆ ಪ್ರಭಾವ ಬೀರಿದೆ. ಹೀಗೆ ಕೇತನ ಪಾಣಿನಿ ಹಾಗೂ ಕಾತಂತ್ರ ಸಂಪ್ರದಾಯಗಳಿಂದ ಪ್ರಭಾವಿತನಾಗಿ ತನ್ನ ವ್ಯಾಕರಣ ಗ್ರಂಥವನ್ನು ಬರೆದನು. ಇದು ಸಂಸ್ಕೃತ ಸಂಪ್ರದಾಯಗಳ ಮೇಲೆ ಅವನಿಟ್ಟ ಅಭಿಮಾನ. ಈ ಕಾರಣ ತನ್ನ ವ್ಯಾಕರಣಕ್ಕೆ ತೆಲುಗು ಭಾಷೆಗೆ ಸಮಗ್ರ ಶಾಸನವಲ್ಲವೆಂದು, ಅದು ಕೇವಲ ದಿಕ್‌ಪ್ರದರ್ಶನ ಮಾತ್ರವೆಂದು ಸ್ಪಷ್ಟವಾಗಿ ಪದ್ಯವೊಂದರಲ್ಲಿ ತಿಳಿಸಿರುತ್ತಾನೆ (ಪ.೧೩). ಸಮಸ್ತ ಭಾಷೆಗಳಿಗೆ ಸಂಸ್ಕೃತವೇ ತಾಯಿಯೆಂದು ಆ ಸಂಸ್ಕೃತದಿಂದಲೇ ಸ್ವಲ್ಪ ಉಂಟಾಗಿ, ಸ್ವಲ್ಪ ತಾನೇ ಉದ್ಭವಿಸಿ ಒಟ್ಟು ಸೇರಿ ತೆಲುಗು ಭಾಷೆ ಆಯಿತು ಎಂದಿದ್ದಾನೆ. ಇದರಿಂದ ಸಂಸ್ಕೃತ ವ್ಯಾಕರಣ ಪ್ರಭಾವ ಅನಿವಾರ್ಯ. ಸಂಸ್ಕೃತದ ಜೊತೆ ಜೊತೆಗೆ ಪ್ರಾಕೃತ ವ್ಯಾಕರಣಗಳನ್ನು ಅನುಸರಿಸಲಾಗಿದೆ.

ಆಂಧ್ರ ಭಾಷೆಯ ಪ್ರಥಮ ವ್ಯಾಕರಣ ಕರ್ತೃವಿನ ಬಗ್ಗೆ ಅನುಮಾನಗಳಿವೆ. ಆದರೂ ನನ್ನಯ ಭಟ್ಟಾರಕನ ಆಂಧ್ರ 'ಶಬ್ದಚಿಂತಾಮಣಿ' ಹಾಗೂ ಅಥರ್ವಣನ 'ತ್ರಿಲಿಂಗ ಶಬ್ದಾನುಶಾಸನ' ಇವುಗಳು ಕೇತನನಿಗಿಂತ ಪೂರ್ವದಲ್ಲಿದ್ದ ವ್ಯಾಕರಣ ಕೃತಿಗಳು ಎಂಬ ಮಾತು ಕೇಳಿ ಬರುತ್ತದೆ. ಆದರೆ ಅವುಗಳ ಪ್ರಾಚೀನತೆಗೆ ಯಾವುದೇ ಆಧಾರ ದೊರೆತಿಲ್ಲ. ಮೇಲಾಗಿ ಆಂಧ್ರ 'ಶಬ್ದಚಿಂತಾಮಣಿ' ಕೃತಿಯನ್ನು ನನ್ನಯನು ಬರೆದನೇ ಎಂಬ ಸಂಗತಿಯೂ ಅನುಮಾನಾಸ್ಪದವಾಗಿದೆ. ಇವುಗಳಿಂದ ಪ್ರಸ್ತುತ ಕೇತನನೇ ಆಂಧ್ರದ ಪ್ರಥಮ ವೈಯಾಕರಣಿ ಎಂದು ತಿಳಿಯಬಹುದು.

ತೆಲುಗು ವ್ಯಾಕರಣ ವಾಙ್ಮಯದಲ್ಲಿ ಕೇತನನ ಪೂರ್ವ ಅಥವಾ ಸಮಕಾಲೀನ ಕಾಲದಲ್ಲಿ ಕೆಲವು ವ್ಯಾಕರಣ ಗ್ರಂಥಗಳನ್ನು ಗಮನಿಸಬಹುದು. ಆಂಧ್ರ 'ಶಬ್ದ ಚಿಂತಾಮಣಿ'ಯ ಬಗ್ಗೆ ಹಿಂದೆ ಹೇಳಿದೆ. 'ವಿಕೃತಿ ವಿವೇಕಮು' ಎಂಬುದು ಆಂಧ್ರ 'ಶಬ್ದಚಿಂತಾಮಣಿ'ಗೆ ಶೇಷಗ್ರಂಥವೆಂದು ಒಂದು ಅಭಿಪ್ರಾಯ.[೪೯] ಅಥರ್ವಣಾಚಾರ್ಯನು ಬರೆದ 'ವಿಕೃತಿ ವಿವೇಕಮು' ಎಂಬ ಕೃತಿಗೆ ಮತ್ತೊಂದು ಹೆಸರು 'ಅಥರ್ವಣ ಕಾರಿಕಾವಳಿ' ಎಂದು. ಚಿಂತಾಮಣಿ ಮತ್ತು ಅಥರ್ವಣ ಕಾರಿಕಾವಳಿ-ಈ ಎರಡೂ ಆಂ.ಭಾ.ಭೂ. ಅನಂತರದ ಕೃತಿಗಳೆಂದೇ ಹೇಳಬಹುದು. ವಿನ್ನಕೋಟ ಪೆದ್ದನನ 'ಕಾವ್ಯಾಲಂಕಾರ ಚೂಡಾಮಣಿ', ಪ್ರಾಚೀನ ತೆಲುಗು ವ್ಯಾಕರಣ ಕೃತಿಗಳಲ್ಲಿ ಒಂದು. ಅನಂತರದಲ್ಲಿ ಅನಂತನು ಬರೆದ 'ಅನಂತುನಿ ಛಂದಸ್ಸು' ಎಂಬ ಕೃತಿಯು ಕೂಡ ವ್ಯಾಕರಣಾಂಶಗಳನ್ನು ಒಳಗೊಂಡಿದೆ. ಮುದ್ದರಾಜು ರಾಮಚಂದ್ರ ಕವಿ ವಿರಚಿತ 'ಕವಿಜನ ಸಂಜೀವಿನಿ' ಎಂಬುದು ಕೂಡ ಒಂದು ತೆಲುಗು ವ್ಯಾಕರಣ ಕೃತಿ. ವೆಲ್ಲಂಕಿ ತಾತಂಭಟ್ಟು ರಚಿಸಿದ 'ಕವಿ ಚಿಂತಾಮಣಿ'; 'ಬಾಲ ಸರಸ್ವತೀಯಮು' (ಎಲಕೂಚಿ ಬಾಲಸರಸ್ವತಿ), ಅಪ್ಪ ಕವಿಯ ಅಪ್ಪಕವೀಯಮು; 'ವೈಕೃತ ಚಂದ್ರಿಕ' ಅಹೋಬಲ ಪಂಡಿತನು ಬರೆದ 'ಕವಿ ಶಿರೋಭೂಷಣಮು' ಇಲ್ಲವೇ 'ಅಹೋಬಲ ಪಂಡಿತೀಯಮು' ಗಣಪ ವರಪು ವೆಂಕಟಪತಿಯ 'ಆಂಧ್ರ ಕೌಮುದಿ', ತಿಮ್ಮಕವಿಯ 'ಸರ್ವಲಕ್ಷಣಸಾರ ಸಂಗ್ರಹಮು' ಇವು ತೆಲುಗಿನ ಪ್ರಾಚೀನ ವ್ಯಾಕರಣ ಗ್ರಂಥಗಳು.

ಕೇತನನ ಕೃತಿಯ ಪ್ರಭಾವವು ಅನಂತರದ ವ್ಯಾಕರಣಕಾರರ ಮೇಲೆ ಬಿದ್ದಿರುವುದು ತಿಳಿದು ಬರುತ್ತದೆ. ವಿನ್ನಕೋಟ ಪೆದ್ದನ, ಗಣಪ ವರಪು ವೆಂಕಟಕವಿ- ಈ ಮೊದಲಾದವರು ಕೇತನನ ಮಾರ್ಗವನ್ನು ಚಾಚೂ ತಪ್ಪದೆ ಅನುಸರಿಸಿದ್ದಾರೆ. ಅನಂತ, ಅಪ್ಪಕವಿ ಈ ಮೊದಲಾದವರು ಕೇತನನನ್ನು ಹೆಸರಿಗೆ ಮಾತ್ರ ಸೂಚಿಸಿ, ಅಲ್ಲಿಯ ಕೆಲವಂಶಗಳನ್ನು ಮಾತ್ರ ಸ್ವೀಕರಿಸಿದ್ದಾರೆ. ಇವರಲ್ಲದೆ ಅಹೋಬಲ ಪಂಡಿತ, ಕೂಚಿಮಂಚಿ ತಿಮ್ಮಕವಿ, ಚಿನ್ನಯ ಸೂರಿಯಂಥ ಲಾಕ್ಷಣಿಕರು ಕೇತನನು ಹೇಳಿದ ವ್ಯಾಕರಣಾಂಶಗಳನ್ನು ಸ್ವೀಕರಿಸಿ, ಕೆಲವನ್ನು ಖಂಡಿಸಿರುತ್ತಾರೆ ಕೂಡ. ಹೀಗೆ ಕೇತನ ಹಾಗೂ ಅವನ ಕೃತಿಯು ಇತರ ವ್ಯಾಕರಣ ಕರ್ತೃಗಳ ಮೇಲೆ ಸಾಕಷ್ಟು ಪ್ರಭಾವ ಬೀರಿರುವುದು ಮಾತ್ರವಲ್ಲದೆ, ಇತರ ಕೃತಿಗಳಿಗೆ ಉತ್ತಮ ಮಾರ್ಗಸೂಚಿಯಾಗಿದೆ.

ಕೇತನನ ಆಂಧ್ರ ಭಾಷಾ ಭೂಷಣಂ, ಆಂಧ್ರ ಶಬ್ದಚಿಂತಾಮಣಿ, ವಿಕೃತಿ ವಿವೇಕಮು ಇವುಗಳನ್ನು ಅನುಸರಿಸಿಬರೆಯಲಾದ ಟೀಕು, ವ್ಯಾಖ್ಯಾನ, ವೃತ್ತಿ, ವಿವರಣಾದಿ ವಾಙ್ಮಯ ವಿಭಾಗವು- ಎಲ್ಲವೂ ಸಂಪ್ರದಾಯಸ್ಥ ಮಾರ್ಗಕ್ಕೆ ಸಂಬಂಧಿಸಿದವು. ಆದರೂ ಕೇತನಾದಿ ವೈಯಾಕರಣರು ವ್ಯಾಕರಣ ಪ್ರಕ್ರಿಯೆಗಳಲ್ಲಿ

ಸ್ವತಂತ್ರರಾಗಿ ಗೋಚರಿಸುತ್ತಾರೆ. ಸಂಪ್ರದಾಯಸ್ಥ ಮತ್ತು ಸ್ವತಂತ್ರ - ಈ
ಸ್ವೀಕರಿಸಿದ ಉಭಯ ಮತವೊಂದು ತೆಲುಗು ವ್ಯಾಕರಣದಲ್ಲಿ ಕಾಣ
ಅಡಿದಮು ಸೂರಕವಿಯ 'ಕವಿ ಸಂಶಯ ವಿಚ್ಛೇದ', ಅಪ್ಪಕವಿಯ 'ಅಪ್ಪಕವಿ
ಇಂಥ ಮತಕ್ಕೆ ಸೇರಿದ್ದು. ಇವರಲ್ಲಿ ಪ್ರಯೋಗಗಳು ಅಧಿಕ.

ಇನ್ನು ಅರ್ವಾಚೀನ ಯುಗದಲ್ಲಿ ಕಾಣಿಸಿಕೊಂಡ ತೆಲುಗು ಕೃತಿ
ಪಟ್ಟಾಭಿರಾಮ ಪಂಡಿತೀಯಮು, ತೆಲುಗು ವ್ಯಾಕರಣಮು, ಪ್ರಶ್ನೋ
ವ್ಯಾಕರಣ, ತೆಲುಗು ವ್ಯಾಕರಣ ಸಂಗ್ರಹಮು, ಆಂಧ್ರ ಶಬ್ದಾನುಶಾಸನ
ವ್ಯಾಕರಣ, ಪ್ರೌಢ ವ್ಯಾಕರಣ ಮುಂತಾದವು. ಈ ಎಲ್ಲ ವ್ಯಾಕರ
ಪರಿಶೀಲಿಸಿದಾಗ ೧೩ನೆಯ ಶತಮಾನದಲ್ಲಿ ತೆಲುಗಿಗೆ ತೆಲುಗಿನಲ್ಲಿ ಮೊದ
ಲಕ್ಷಣ ಹೇಳಲು ಹೊರಟ ಆಂ.ಭಾ.ಭೂ. ವಿಶಿಷ್ಟ ಸ್ಥಾನವನ್ನೇ ಪಡೆದಿದೆ ಎನ್ನ

## ಅಡಿಟಿಪ್ಪಣಿ

೧. ಕನ್ನಡ ಅಧ್ಯಯನ ಸಂಸ್ಥೆಯ ಕನ್ನಡ ಸಾಹಿತ್ಯ ಚರಿತ್ರೆ, ಸಂ.೩, ಪು.೫
೨. ಅನೇಕ ವಿದ್ವಾಂಸರು ಎರಡನೆಯ ನಾಗವರ್ಮ ಎಂದಿದ್ದರೂ ಹಾಗೆ ಕರೆ
ಸರಿಯಲ್ಲ ಎನಿಸುತ್ತದೆ. ಸಂಸ್ಕೃತದಲಿ ಹರ್ಷ, ಭೋಜ ಮುಂತಾದವರು ಅನ
ಒಂದನೆಯ, ಎರಡನೆಯ ಇತ್ಯಾದಿ ವ್ಯವಹಾರವಿಲ್ಲ. ಒಂದೇ ವಂಶದವ
ಹಾಗೆ ವ್ಯವಹರಿಸುತ್ತಾರೆ. ಇದೇ ಅಭಿಪ್ರಾಯವನ್ನು ಡಾ. ಟಿ.ವಿ. ವೆಂಕಟಾ
ಮತ್ತು ಶ್ರೀ ಸೀತಾರಾಮ ಜಾಗೀರ್‌ದಾರ್ ವ್ಯಕ್ತಪಡಿಸಿದ್ದಾರೆ.
೩. ಕರ್ನಾಟಕ ಕವಿಚರಿತೆ ಸಂ. ೧, ಪು. ೫೪.
೪. ಕನ್ನಡ ಛಂದಸ್ಸಂಪುಟ, ಪೀಠಿಕೆ, ಪು. ೫೧.
೫. ಕರ್ನಾಟಕ ಕವಿಚರಿತೆ, ಸಂ. III ಪು. ೪೭೮.
೬. ಕೆಲವು ಕನ್ನಡ ಕವಿಗಳ ಜೀವನ ಕಾಲ ವಿಚಾರ, ಪು. ೧೫೨-೧೮೧.
೭. ಕ.ಸಾ.ಪ. ಸಂಪುಟ ೨೦, ಸಂ. ೧-೨, ಪು. ೧೫೫.
೮. ಕರ್ನಾಟಕ ಕಾದಂಬರಿ ಸಂಗ್ರಹ, ಪು. vii-xii.
೯. ಕ.ಸಾ.ಪ. ಸಂಪುಟ ೬೭, ಸಂ.೨, ಪು. ೨೮.
೧೦. ಅದೇ.
೧೧. ಕರ್ನಾಟಕ ಕವಿಚರಿತೆ ಸಂ. ೧, ಪು. ೫೪.
೧೨. ಕರ್ನಾಟಕ ಕವಿಚರಿತೆ ಸಂ.೧, ಪು. ೫೪.
೧೩. ಕೆಲವು ಕನ್ನಡ ಕವಿಗಳ ಜೀವನ ಕಾಲ ವಿಚಾರ, ಪು. ೧೫೨-೧೮೧.
೧೪. ಅದೇ.

೧೫. 'ಇಮ್ಮಡಿ ನಾಗವರ್ಮನ ಛಂದೋವಿಚಿತಿ', ಪ್ರ.ಕ. ಸಂಪುಟ ೫೦, ಸಂ ೪.
೧೬. ನಾಗವರ್ಮರು ಎಷ್ಟುಮಂದಿ? ಕ.ಸಾ.ಪ. ಸಂಪು. ೧. ಸಂ. ೨೦, ಪು. ೧೫೫.
೧೭. ಎರಡನೆಯ ನಾಗವರ್ಮ ವಿರಚಿತ ವರ್ಧಮಾನಪುರಾಣಂ; ಪೀಠಿಕೆ, ಪು.xix-xxiv.
೧೮. ಕ.ಸಾ.ಪ. ಸಂಪುಟ ೬೦. ಸಂ. ೨.
೧೯. 'ಎರಡನೆಯ ನಾಗವರ್ಮನ ಕಾಲ', ಸಾಧನೆ ೪-೩, ಪು. ೭೯-೯೨.
೨೦. ಕರ್ಣಾಟಕ ಭಾಷಾ ಭೂಷಣಂ, ಮುನ್ನುಡಿ, ಪು. ೧.
೨೧. ಛಂದೋಂಬುಧಿ, ಮುನ್ನುಡಿ ಪು. ೧೨.
೨೨. ಕ.ಸಾ.ಪ. ಸಂಪುಟ ೨೦, ಸಂ ೧-೨.
೨೩. ಕನ್ನಡ ಸಾಹಿತ್ಯ ಚರಿತ್ರೆ, ಪು. ೮೨-೧೨೧.
೨೪. ಪ್ರ.ಕ. ೫೦-೪.
೨೫. ಕನ್ನಡ ಅಧ್ಯಯನ ಸಂಸ್ಥೆಯ ಕನ್ನಡ ಸಾಹಿತ್ಯ ಚರಿತ್ರೆ ಸಂ.೩, ಪು. ೫೪೦.
೨೬. ಎರಡನೆಯ ನಾಗವರ್ಮ, ಭಾಗ ೧, ಪು. ೮.
೨೭. ಎ.ವೆಂಕಟಸುಬ್ಬಯ್ಯ, 'ಪ್ರಜಾವಾಣಿ', ವಾಚಕರ ವಾಣಿ, ೭-೧೦-೧೯೮೯.
೨೮. ಇಮ್ಮಡಿ ನಾಗವರ್ಮನ ಛಂದೋವಿಚಿತಿ, ಪ್ರ.ಕ. ೫೦-೪
೨೯. Kavyavalokanam, Introduction, PP. ixxv -ixxvi.
೨೯(ಎ).ಕಾವ್ಯಾವಲೋಕನಂ - ೧೯೬೭, ಪು. ೪.
೩೦. ತರಗತಿಯ ಪಾಠದಿಂದ ಉದ್ಧೃತ, ಬಿ.ಎಸ್. ಸಣ್ಣಯ್ಯ, ಕ.ಅ. ಸಂಸ್ಥೆಯ ಕನ್ನಡ ಸಾಹಿತ್ಯ ಚರಿತ್ರೆ, ಸಂಪುಟ ೩, ಪು. ೭೩೧.
೩೧. ಡಾ. ಟಿ.ವಿ. ವೆಂಕಟಾಚಲಶಾಸ್ತ್ರೀ, ಕ.ಅ. ಸಂಸ್ಥೆಯ ಕನ್ನಡ ಸಾಹಿತ್ಯ ಚರಿತ್ರೆ, ಸಂಪುಟ ೩, ಪು. ೭೩೫.
೩೨. 'ಇಮ್ಮಡಿ ನಾಗವರ್ಮನ ಛಂದೋವಿಚಿತಿ' ಪ್ರ.ಕ. ೫೦-೪.
೩೩. 'ಇಮ್ಮಡಿ ನಾಗವರ್ಮನ ಛಂದೋವಿಚಿತಿ', ಪ್ರ.ಕ. ೫೦-೪.
೩೪. ಡಾ. ಪಿ. ಶ್ರೀಕೃಷ್ಣಭಟ್: ಕನ್ನಡ ವ್ಯಾಕರಣ ಪರಂಪರೆಯ ಮೇಲೆ ಸಂಸ್ಕೃತದ ಪ್ರಭಾವ, ಪು. ೪೮.
೩೫. ರನ್ನ : ಅಜಿತನಾಥ ಪುರಾಣಂ, ೧೪-೭೭.
೩೬. ನಾಗವರ್ಮ : ಕ.ಭಾ.ಭೂ. ಸೂತ್ರ ೭೩.
೩೭. ಎ. ವೆಂಕಟಸುಬ್ಬಯ್ಯ : ಕೆಲವು ಕನ್ನಡ ಕವಿಗಳ ಕಾಲವಿಚಾರ, ಪು. ೧೮೧.
೩೮. ಡಾ. ಪಿ. ಶ್ರೀಕೃಷ್ಣಭಟ್ : ಪೂರ್ವೋಕ್ತ, ಪು. ೫೨.
೩೯. ಎಂ.ವಿ. ಸೀತಾರಾಮಯ್ಯ : ಪ್ರಾಚೀನ ಕನ್ನಡ ವ್ಯಾಕರಣಗಳು, ಪು.೧೦೩.

೪೦. ಅದೇ.

೪೧. ಆಂಧ್ರಕವಿ ತರಂಗಿಣಿ, ಭಾಗ ೩, ಪು. ೩೬.

೪೨. "ಕವಿಜನ ಮಿತ್ರಂ ಜನ್ನಯ್ಯನ ಕವಿತೆ" ತರೀಕೆರೆಯ ಅಮೃತಾಪುರದ ಶಾಸನದ ಸಂಖ್ಯೆ ೪೫, E.C. Vol .VI.

೪೩. ಡಾ. ಹರಿಶಿವಕುಮಾರ್ : ಕೇತನ, ಪು. ೮.

೪೪. ಆಂಧ್ರ ವ್ಯಾಕರಣ ವಿಕಾಸಮು, ಪು.೨೩೩.

೪೫. ಆಂಧ್ರ ಕವುಲ ಚರಿತಮು, ಭಾಗ ೫, ಪು. ೨೬೫.

೪೬. ಡಾ. ಶಿವಕುಮಾರ್, ಕೇತನ, ಪು. ೯೦.

೪೭. ಈ ಚರ್ಚೆಗಳಿಗೆ ನೋಡಿ : ಡಾ. ಎ. ರಾಜೇಶ್ವರ ಶರ್ಮ, ಆಂಧ್ರ ವ್ಯಾಕರಣ ವಿಕಾಸಮು, ಪು. ೨೩೬-೨೩೭.

೪೮. ಈ ಚರ್ಚೆಗಳಿಗೆ ನೋಡಿ ಡಾ. ಎ. ರಾಜೇಶ್ವರ ಶರ್ಮ, ಆಂಧ್ರ ವ್ಯಾಕರಣ ವಿಕಾಸಮು, ಪು. ೨೩೬-೨೩೭.

೪೯. ಬೊಡ್ಡುಪಲ್ಲಿ ಪುರಷೋತ್ತಂ, ಆಂಧ್ರ ವ್ಯಾಕರಣ ವಿಕಾಸಮು, ಪು.೨೩.

# ವರ್ಣಮಾಲೆ

ಒಂದು ಭಾಷೆಯಲ್ಲಿ ಕಾಲಕಾಲಕ್ಕಾದ ಮಾರ್ಪಾಟುಗಳನ್ನು ಭಾಷೆಯ ಬೆಳವಣಿಗೆಯನ್ನು ಗುರುತಿಸಲು ನೆರವಾಗುವ ಮುಖ್ಯ ಸಾಮಗ್ರಿಗಳೆಂದರೆ ಶಾಸನಗಳು ಮತ್ತು ಪ್ರಾಚೀನ ಕೃತಿಗಳು. ಆಧುನಿಕ ಭಾಷಾ ವಿಜ್ಞಾನವು ಗ್ರಾಂಥಿಕ ಭಾಷೆಗಿಂತ ಹೆಚ್ಚಾಗಿ ಆಡುನುಡಿಗೆ ಪ್ರಾಧಾನ್ಯವನ್ನು ಕೊಡುತ್ತಾ ಬಂದಿದೆ. ಆದರೆ ಪ್ರಾಚೀನ ವೈಯಾಕರಣರು ಕಾವ್ಯ ಪ್ರಯೋಗಗಳನ್ನು ಅನುಸರಿಸಿಯೇ ವ್ಯಾಕರಣ ಗ್ರಂಥಗಳನ್ನು ರಚಿಸಿದರು. ಒಂದು ಕಾಲದ ಗ್ರಾಂಥಿಕ ಭಾಷೆ, ಭಾಷೆಯ ಸಂಪೂರ್ಣ ಸ್ವರೂಪವನ್ನು ಪ್ರತಿಬಿಂಬಿಸುವುದಿಲ್ಲ. ಆದುದರಿಂದ ವ್ಯಾಕರಣಗಳಿಂದಲೇ ಭಾಷಾ ಸ್ವರೂಪ ತಿಳಿಯುವುದಿಲ್ಲ. ಶತಮಾನಗಳ ಅಂತರವುಳ್ಳ ನಮ್ಮ ಪ್ರಮುಖ ವ್ಯಾಕರಣಗಳನ್ನು, ಅದರಲ್ಲೂ ಸಹೋದರ ಭಾಷೆಗಳ ವ್ಯಾಕರಣಗಳನ್ನು ತೌಲನಿಕವಾಗಿ ಪರಿಶೀಲಿಸಿದಾಗ ಒಂದು ಭಾಷೆಯ ವರ್ಣಮಾಲೆಯಂತಹ ಭಾಷಾ ಭಾಗಗಳನ್ನು ವಿಶ್ಲೇಷಿಸಲು ಸಾಧ್ಯವಾಗುವುದು.

**ಸಂಸ್ಕೃತ ವರ್ಣಮಾಲೆ:**

ವ್ಯಾಕರಣವು ಶಬ್ದಾನುಶಾಸನವಾದುದರಿಂಪ ಶಬ್ದಗಳು ಧ್ವನ್ಯಾತ್ಮಕವಾದುದರಿಂದ ಧ್ವನಿಗಳು ಒಂದು ಭಾಷೆಯಲ್ಲಿ ವರ್ಣಾಕೃತಿ ಪಡೆಯುವುದರಿಂದ ಒಂದು ಭಾಷೆಯ ವ್ಯಾಕರಣವನ್ನು ನಿರೂಪಿಸುವುದಕ್ಕಾಗಿ ಪ್ರತಿಜ್ಞೆ ಮಾಡಿದವನು ಆ ಭಾಷೆಗೆ ಸಂಬಂಧಿಸಿದ ವರ್ಣಮಾಲೆಯನ್ನು ನಿರೂಪಿಸುವುದು ಅಷ್ಟೇ ಅವಶ್ಯಕವಾಗಿದೆ.

ಸಂಸ್ಕೃತ ಭಾಷೆಗೆ ವ್ಯಾಕರಣವನ್ನು ರೂಪಿಸಿದ ವರ್ಣಮಾಲೆಯ ಕ್ರಮವನ್ನು ಮಾಹೇಶ್ವರ ಸಂಪ್ರದಾಯಕ್ಕೆ ಅನುಸಾರವಾಗಿ ಕೊಟ್ಟಿದ್ದಾನೆ. "ಅ-ಇ-ಉಣ್" ಎಂದು ಪ್ರಾರಂಬಿಸಿ 'ಹಲ್' ಎನ್ನುವವರೆಗೆ ೧೪ ಸೂತ್ರಗಳು ಮುಗಿಯುತ್ತಲೇ, "ಇತಿ ಮಾಹೇಶ್ವರಾಣಿ ಪ್ರತ್ಯಾಹಾರ ಸೂತ್ರಾಣಿ" ಎಂದು ಅಷ್ಟಾಧ್ಯಾಯಿ ವಚನ. ಇದು ವರ್ಣಮಾಲೆಯ ಕ್ರಮ: ಅ-ಇ-ಉ; ಋ-ಒ; ಏ-ಓ; ಐ -ಔ ಇವು ಒಂಬತ್ತು.

ಸ್ವರಗಳು; ಹ-ಯ-ವ-ರ; ಲ; ಞ-ಮ-ಙ-ಣ-ನ; ಝ-ಭ; ಘ-ಢ-ಧ; ಜ-ಬ-ಗ-ಡ-ದ; ಖ-ಫ-ಛ-ಠ-ಥ-ಚ-ಟ-ತ; ಕ-ಪ; ಶ-ಷ-ಸ; ಹ-ಇವು ವ್ಯಂಜನಗಳು. ಒಟ್ಟು ಹದಿನಾಲ್ಕು ಸೂತ್ರಗಳಿಂದ ತಿಳಿದು ಬರುವ ವರ್ಣಗಳ ಮೊತ್ತ ೪೨. ಅನುಸ್ವಾರ ವಿಸರ್ಗಗಳನ್ನು ಸ್ವೀಕರಿಸಿದರೆ ವರ್ಣಗಳ ಒಟ್ಟು ಸಂಖ್ಯೆ ೪೪.

"ಸಿದ್ಧೋವರ್ಣಸಮಾಮ್ನಾಯಃ" (ಸಂಜ್ಞಿ-ಸೂತ್ರ ೧) ಎಂಬ ಕಾತಂತ್ರವ್ಯಾಕರಣ ಸೂತ್ರವನ್ನು ಭಾವಸೇನನೆಂಬ ವಿದ್ವಾಂಸನು ಹೀಗೆ ವ್ಯಾಖ್ಯಾನಿಸಿದ್ದಾನೆ- "ಸಿದ್ಧ: ಖಲುವರ್ಣ ಸಮಾಮ್ನಾಯ: ವೇದಿತವ್ಯ: ತೇ ಕೇ? ಅ-ಆ-ಇ-ಈ-ಉ-ಊ-ಋ-ೠ-ಌ-ೡ ಎ-ಐ-ಒ- ಔ, ಕ-ಖ-ಗ-ಘ-ಙ; ಚ-ಛ-ಜ-ಝ-ಞ; ಟ-ಠ-ಡ-ಢ-ಣ; ತ-ಥ-ದ-ಧ-ನ; ಪ-ಫ-ಬ-ಭ-ಮ; ಯ-ರ-ಲ-ವ-ಶ-ಷ-ಸ-ಹ- ಇತಿ" ಈ ಮಾಲಿಕೆಯಲ್ಲಿರುವ ವರ್ಣಮಾಲೆಯ ಕ್ರಮ ಮಾಹೇಶ್ವರ ಸಂಪ್ರದಾಯವಲ್ಲವೆಂಬುದು ಸ್ಪಷ್ಟ. ವ್ಯಂಜನಗಳ ಕ್ರಮವಂತು ಮಾಹೇಶ್ವರ ಸಂಪ್ರದಾಯಕ್ಕೆ ತೀರಾ ಭಿನ್ನವಾದುದು.

"ಈ ಅಕ್ಷರ ಸಮಾಮ್ನಾಯವು ಸಂಸ್ಕೃತ ವ್ಯಾಕರಣ ವಾಙ್ಮಯದಲ್ಲಿಯೇ ಒಂದು ರೀತಿಯಲ್ಲಿಲ್ಲ."[೧] ಮಾಹೇಶ್ವರ ಸೂತ್ರ ವಾಜಸನೇಯ ಪ್ರಾತಿಶಾಖ್ಯ, ಋಕ್ ಪ್ರಾತಿಶಾಖ್ಯ, ತೈತ್ತಿರೀಯ ಪ್ರಾತಿಶಾಖ್ಯ ಮುಂತಾದವುಗಳಲ್ಲಿ ಸಂಸ್ಕೃತ ವರ್ಣಗಳ ಸಂಖ್ಯೆ ಭಿನ್ನ ಭಿನ್ನವಾಗಿವೆ.

ಒಟ್ಟಾರೆ ಸಂಸ್ಕೃತ ವರ್ಣಮಾಲೆಯಲ್ಲಿ ವರ್ಣಗಳ ಸಂಖ್ಯೆಯನ್ನು ಭಿನ್ನ ಭಿನ್ನ ಸಂಪ್ರದಾಯಗಳು ಹೀಗೆ ತಿಳಿಸಿವೆ. ಅಷ್ಟಾಧ್ಯಾಯಿ -೪೪, ಪಾಣಿನೀಯ ಶಿಕ್ಷಾ-೫೪, ಋಗ್ವೇದ ಪ್ರಾತಿಶಾಖ್ಯ-೪೭; ತೈತ್ತಿರೀಯ ಪ್ರಾತಿಶಾಖ್ಯ -೫೮, ವಾಜಸನೇಯ - ೬೫, ಕಾತಂತ್ರ ೫೧ ಮತ್ತು ಸಿದ್ಧಹೇಮ ಶಬ್ದಾನುಶಾಸನ- ೫೧.

ಜಿಹ್ವಾಮೂಲೀಯ, ಉಪಧ್ಮಾನೀಯಗಳೆರಡು ಕಲ್ಪಿತ ವರ್ಣಗಳೆಂದು, ಅವು ಸಹಜ ವರ್ಣಗಳಲ್ಲವೆಂದು, ಆದ್ದರಿಂದ ಅವುಗಳನ್ನು ವರ್ಣಮಾಲೆಯಲ್ಲಿ ಗಣನೆಗೆ ತೆಗೆದುಕೊಳ್ಳಕೂಡದೆಂದು ಕೆಲವು ವಿದ್ವಾಂಸರ ಅಭಿಪ್ರಾಯ.[೨] ಈ ಹೇಳಿಕೆಯನ್ನು ಸ್ವೀಕರಿಸಿದರೆ ಆಗ ಸಂಸ್ಕೃತದಲ್ಲಿ ೫೦ ಅಕ್ಷರಗಳಾಗುತ್ತವೆ. ಹೀಗೆಯೇ 'ಌ' ವರ್ಣದ ಬಗ್ಗೆ ಆಕ್ಷೇಪವಿದೆ.[೩] 'ಳ' ಕಾರವು ಸಂಸ್ಕೃತದಲ್ಲಿಲ್ಲ. ಕೆಲವು ವೇದ ಮಂತ್ರಗಳಲ್ಲಿ ಎರಡು ಸ್ವರಗಳ ನಡುವೆ ಕಾಣಿಸಿಕೊಳ್ಳುವ 'ಡ' (ड) ಕಾರಣ ಸ್ಥಳದಲ್ಲಿ 'ಳ' ಕಾರವು ಬರುವುದು. (ಉಚ್ಚಾರಣೆಯಲ್ಲಿ) ಅದು ಕಲ್ಪಿತವೆಂದು ತಿಳಿದುಬಂದಿದೆ.

**ಉದಾಹರಣೆಗೆ :**

"ಅಗ್ನಿಮೀಢೇ(ಳೇ)ಪುರೋಹಿತಂ". ಹೀಗೆ ಸಂಸ್ಕೃತದಲ್ಲಿ ಅನಗತ್ಯವೆನ್ನಬಹುದಾದ ನಾಲ್ಕು ವರ್ಣಗಳಾದ ᳵ ᳶ ಜಿಹ್ವಾಮೂಲೀಯ ಮತ್ತು ಉಪಧ್ಮಾನೀಯಗಳನ್ನು ಕಳೆದರೆ ಕೇವಲ ೪೮ ವರ್ಣಗಳು ಮಾತ್ರ ಉಳಿಯುವವು. ಆದರೂ ಸಂಸ್ಕೃತ ವರ್ಣಮಾಲೆಯಲ್ಲಿ ೫೨ ಅಥವಾ ೫೦ ವರ್ಣಗಳು ಎನ್ನುವುದು ರೂಢಿಯಾಗಿದೆ. "ಕನ್ನಡ ವರ್ಣಮಾಲೆಯ ನಿರೂಪಣಾ ವಿಧಾನದ ಆಧಾರದಿಂದ ಸಂಸ್ಕೃತದ ವರ್ಣಮಾಲೆಯಲ್ಲಿ ಅವರೆಷ್ಟು ವರ್ಣಗಳನ್ನು ಕಂಡಿದ್ದಾರೆಂಬುದನ್ನು ಹೇಳಬಹುದಾಗಿದೆ. ಸ್ಮೃತಿ ೪೭; ಭೂಷಣ ೪೯; ದರ್ಪಣ ೫೨".[೪]

**ಕನ್ನಡ ವ್ಯಾಕರಣಗಳಲ್ಲಿ ವರ್ಣಮಾಲೆ:**

ಸಂಸ್ಕೃತದ ಜಾಡಿನಲ್ಲಿ ನಡೆದ ಕನ್ನಡ ವೈಯಾಕರಣರು ತಮ್ಮ ತಮ್ಮ ಗ್ರಂಥಗಳಲ್ಲಿ ವರ್ಣ ಸಮಾಮ್ನಾಯವನ್ನು ಕುರಿತು ಭಿನ್ನಭಿನ್ನವಾಗಿಯೇ ವಿವೇಚಿಸಿದ್ದಾರೆ. ನಾಗವರ್ಮನ ಕಾವ್ಯಾವಲೋಕನದ ಶಬ್ದಸ್ಮೃತಿಯ ಮೊದಲ ಅಧಿಕರಣದಲ್ಲಿ ವರ್ಣಗಳು ೫೦ ಎಂದು ನಿರೂಪಿತವಾಗಿದೆ. ಅವು ೧೪ ಸ್ವರಗಳು, ೨೫ ವರ್ಗೀಯ ವ್ಯಂಜನಗಳು ಮತ್ತು ೧೧ ಅವರ್ಗೀಯ ವ್ಯಂಜನಾಕ್ಷರಗಳು. ಶಬ್ದಸ್ಮೃತಿಯಲ್ಲಿ ಸಂಸ್ಕೃತದಲ್ಲಿರುವ ಜಿಹ್ವಾಮೂಲೀಯ ಮತ್ತು ಉಪಧ್ಮಾನೀಯಗಳು ಕನ್ನಡಕ್ಕೆ ಬೇಡವೆಂದು ಅವುಗಳನ್ನು ಕೈಬಿಟ್ಟಿದ್ದಾನೆ. "ಒಟ್ಟಿನ ಮೇಲೆ, ಶಬ್ದಸ್ಮೃತಿಯ ಸೂತ್ರಗಳು ವರ್ಣಮಾಲೆಯ ವಿವರಣೆಯಲ್ಲಿ ಸ್ವಯಂ ಸ್ಪಷ್ಟವಾಗಿಲ್ಲ" ಎಂಬ ಮಾತಿದೆ.[೫]

ನಾಗವರ್ಮನ ಕೃತಿಯಾದ "ಕರ್ಣಾಟಕ ಭಾಷಾ ಭೂಷಣ"ದಲ್ಲಿ ಕನ್ನಡ ವರ್ಣಮಾಲೆಯ ಸಂಖ್ಯೆ ೪೬ ಎಂದಿದೆ. ಕೇಶಿರಾಜನು ತನ್ನ 'ಶಬ್ದಮಣಿದರ್ಪಣ'ದಲ್ಲಿ ೪೭ ಅಕ್ಷರಗಳೆಂದು ತಿಳಿಸಿದ್ದಾನೆ. ಅವು ಕನ್ನಡ ಶುದ್ಧಗೆಗಳು. ಮುಂದಿನ ಶತಮಾನಗಳಲ್ಲಿ ಭಟ್ಟಾಕಳಂಕನೆಂಬ ವೈಯಾಕರಣಿ ತನ್ನ ಕೃತಿಯಾದ ಶಬ್ದಾನುಶಾಸನವೆಂಬಲ್ಲಿ ಕನ್ನಡಕ್ಕೆ ೫೧ ಅಕ್ಷರಗಳನ್ನು ಸೂಚಿಸಿದ್ದಾನೆ. ಆದರೆ ವ್ಯಾಖ್ಯಾನದಲ್ಲಿ ೬೪ ಅಕ್ಷರಗಳನ್ನೂ ಹೇಳಲಾಗಿದೆ. ವ್ಯಾಖ್ಯಾನವು ಸೂತ್ರ ಮತ್ತು ವೃತ್ತಿಯನ್ನು ಅನುಸರಿಸಿಲ್ಲ.

ಒಂದೇ ಒಂದು ವರ್ಣ ಸಮಾಮ್ನಾಯವನ್ನು ಮೇಲಿನ ನಾಲ್ಕು ಜನ ಪ್ರಾಚೀನ ವೈಯಾಕರಣರು ನಾಲ್ಕು ಬಗೆಯಾಗಿ ನಿರೂಪಿಸಿರುವುದು ಆಶ್ಚರ್ಯ. ನಿರ್ದಿಷ್ಟ ಸಂಖ್ಯೆಯನ್ನು ಅನುಸರಿಸಿರುವುದು ಎದ್ದು ಕಾಣುತ್ತದೆ. "ವರ್ಣ ಸಮಾಮ್ನಾಯ ಪ್ರಕರಣದಲ್ಲಿ ಕೇಶಿರಾಜನ ಸ್ವತಂತ್ರ ವಿಚಾರಕ್ರಮ ಮತ್ತು ಸ್ವೋಪಜ್ಞತೆ ಚೆನ್ನಾಗಿ ಪ್ರಕಟಗೊಂಡಿವೆ"[೬] ಎಂಬ ಮಾತನ್ನು ಸ್ವೀಕರಿಸಬಹುದಾದರೂ ಮುಂದಿನ ಹೇಳಿಕೆ

“ಆದರೂ ಅವನು ಅಲ್ಲಲ್ಲಿ ಗೊಂದಲಕ್ಕೆ ಸಿಕ್ಕಿ ಹಾಕಿಕೊಂಡು ಓದುಗರನ್ನು ಗೊಂದಲದಲ್ಲಿ ಕೆಡುವುತ್ತಾನೆ”[೭] ಎಂಬುದನ್ನು ಒಪ್ಪಲಾಗದು. ಈ ವಿಷಯದಲ್ಲಿ ಕೇಶಿರಾಜನ ನಿಲುವು ಸ್ಪಷ್ಟವಾಗಿಯೇ ಇದೆ.

ನಾಗವರ್ಮನ ಕ.ಭಾ.ಭೂ.ದ ವರ್ಣಸಮಾಮ್ನಾಯವು ಖಚಿತವಾಗಿದೆ ಎಂದೇ ಹೇಳಬಹುದು. ಸೂತ್ರದ ಆಶಯವನ್ನು ವೃತ್ತಿಯಲ್ಲಿ ಅವನು ಸ್ಪಷ್ಟವಾಗಿ ಹೇಳಿರುವುದರಿಂದ ಅಲ್ಲಿ ಯಾವುದೇ ಊಹಾಪೋಹಕ್ಕಾಗಲಿ, ಸಂದೇಹಕ್ಕಾಗಲಿ ಎಡೆಯಿಲ್ಲ ಎನ್ನಬಹುದು. ಅವನ ನಿರೂಪಣಾ ವಿಧಾನ ಶಾಸ್ತ್ರೀಯವಾಗಿದೆ. ಅಲ್ಲಿಯ ‘ಸಂಜ್ಞಾವಿಧಾನಂ’ ಎಂಬಲ್ಲಿ ಇರುವ ೧೭ ಸೂತ್ರಗಳಲ್ಲಿ ೪ ಸೂತ್ರಗಳು ವರ್ಣಸಮಾಮ್ನಾಯಕ್ಕೆ ಮೀಸಲಾಗಿದೆ.

ಎರಡನೆಯ ಸೂತ್ರವಾದ ‘ಅಕಾರಾದಯಃ ಪ್ರಸಿದ್ಧವರ್ಣಾಃ’ ಎಂಬುದರ ವೃತ್ತಿಯಲ್ಲಿ “ಅಕಾರಾದಯೋ ವರ್ಣಾಃ ಹಕಾರ ಪರ್ಯವಸಾನಾ: ಪ್ರಸಿದ್ಧಾ ಏವ ವೇದಿತವ್ಯಾಃ...... ಎಂದು ಸಂಸ್ಕೃತ ವರ್ಣಮಾಲೆಯನ್ನು ಕುರಿತು ತಿಳಿಸಿದೆ. ಅದರ ಪ್ರಕಾರ ಸ್ವರಗಳು: ಅ ಆ ಇ ಈ ಉ ಊ ಋ ೠ ಌ ೡ ಎ ಏ ಐ ಓ ಔ-೧೪

| | | |
|---|---|---|
| ವರ್ಗೀಯ ವ್ಯಂಜನಗಳು : | ಕ್ ಖ್ ಗ್ ಘ್ ಙ | |
| | ಚ್ ಛ್ ಜ್ ಝ್ ಞ | |
| | ಟ್ ಠ್ ಡ್ ಢ್ ಣ್ | |
| | ತ್ ಥ್ ದ್ ಧ್ ನ್ | |
| | ಪ್ ಫ್ ಬ್ ಭ್ ಮ್ | -೨೫ |
| ಅವರ್ಗೀಯ ವ್ಯಂಜನಗಳು: | ಯ್ ರ್ ಲ್ ವ್ ಶ್ ಸ್ ಹ್ | -೦೮ |
| | | ೪೭ |

ಅ ಕಾರದಿಂದ ಹ ಕಾರದ ವರೆಗಿನ ಅಕ್ಷರಗಳನ್ನೂ ಹೇಳಲಾಗಿದೆ. ಸಂಸ್ಕೃತದ ವಿರಳ ‘ಳ’ ಕಾರವನ್ನು ಸೇರಿಸಿಕೊಳ್ಳದೇ ಇರುವುದು ಗಮನಾರ್ಹ. ಅದು ಕೇಶಿರಾಜನಲ್ಲಿದೆ. ಈ ಒಂದಕ್ಷರದಲ್ಲೇ ನಾಗವರ್ಮನಿಗೂ ಕೇಶಿರಾಜನಿಗೂ ವ್ಯತ್ಯಾಸವಿದೆ. ಡ ಕಾರದ ಕಾರ್ಯವನ್ನು ನಿರ್ವಹಿಸುತ್ತಿರುವುದರಿಂದ ‘ಳ’ ಕಾರವನ್ನು ನಾಗವರ್ಮ ಬಿಟ್ಟಿರಬೇಕು. ಡ ಕಾರವನ್ನು ಗಟ್ಟಿಯಾಗಿ ಉಚ್ಚರಿಸಿದರೆ ‘ಳ’ ಕಾರ ಬರುವುದೆಂದು ಅವನೇ ಮುಂದೆ ಹೇಳಿದ್ದಾನೆ. ಇದು ‘ಅತಿ ಪೀಡನದಿಂ

ರೇಫಾಶ್ರಿತಮಾದ ಡಕಾರಂ'- ಎಂಬ ಕೇಶಿರಾಜನ ಮಾತನ್ನು ನೆನಪಿಗೆ ತರುತ್ತದೆ. ಆದರೆ ಕೇಶಿರಾಜನು ಹೇಳಿದುದು ರಳ (ೞ) ದ ಬಗ್ಗೆ. ಈ 'ಳ' ದ ಬಗ್ಗೆಯಲ್ಲ. ಈ 'ಳ'ವಲ್ಲ.

**ಸೂತ್ರ ೩:**

"ತೇ ಷ್ವಾ ದೌ ಚತುರ್ದಶ ಸ್ವರಾಃ" ಎಂದಿರುವುದರಿಂದ ೧೪ ಸ್ವರಗಳಿವೆ ಎಂದು ಅರ್ಥ ಬರುತ್ತದೆ. ಆ ಸ್ವರಗಳ ಪ್ರಭೇದಗಳ ಬಗ್ಗೆ ಮುಂದಿನ ಸೂತ್ರ ತಿಳಿಸುತ್ತದೆ.

**ಸೂತ್ರ ೪:**

"ಏಕ ದ್ವಿ ತ್ರಿ ಮಾತ್ರಾಸ್ತೇ ಹ್ರಸ್ವ ದೀರ್ಘ ಪ್ಲುತಾಃ" ಎಂದಿದೆ. ಆ ಹದಿನಾಲ್ಕು ಸ್ವರಗಳು ಒಂದು, ಎರಡು, ಮೂರು ಮಾತ್ರೆಗಳಿಂದ ಕೂಡಿ ಕ್ರಮವಾಗಿ ಹ್ರಸ್ವ ದೀರ್ಘ ಸಂಜ್ಞೆಗಳನ್ನು ಪಡೆಯುತ್ತವೆ. "ಹ್ರಸ್ವ-ದೀರ್ಘ-ಸ್ವರಿತಗಳು ಮೂಲತಃ ಸ್ವರಗಳಿಗೆ ಅನ್ವಯಿಸುವ ಸಂಜ್ಞೆಯಾದರೆ, ಲಘು-ಗುರು-ಪ್ಲುತಗಳು ಆ ಅಕ್ಷರಗಳನ್ನು ಉಚ್ಚರಿಸಲು ಬೇಕಾದ ಕಾಲದ ಸಂಜ್ಞೆಗಳಾಗಿರುವವೆನ್ನಬಹುದು. ಮೊದಲನೆಯವು ಮುಖ್ಯವಾಗಿ ವ್ಯಾಕರಣ ಸಂಜ್ಞೆಗಳಾದರೆ- ಅವನ್ನು ಮತ್ತೊಂದು ವಿಧವಾಗಿ ವಿವರಿಸಲು ಬಳಸಿಕೊಂಡ ಛಂದಸ್ಸಂಜ್ಞೆಗಳು ಎರಡನೆಯವು. ಎರಡು ವ್ಯಂಜನಗಳನ್ನು ಉಚ್ಚರಿಸಲು ಬೇಕಾಗುವಷ್ಟು ಕಾಲ ಪರಿಮಾಣಕ್ಕೆ ಒಂದು ಮಾತ್ರಯೆಂದೂ, ಆ ಒಂದು ಮಾತ್ರೆಯ ಕಾಲದಲ್ಲಿ ಉಚ್ಚರಿಸಿ ಮುಗಿಸಬಲ್ಲ ಒಂದು ಸ್ವರಕ್ಕೆ ಲಘು (ಹ್ರಸ್ವ) ವೆಂದೂ ಎರಡು ಮಾತ್ರೆಗಳ ಕಾಲದಲ್ಲಿ ಉಚ್ಚರಿಸಿ ಮುಗಿಸಬಲ್ಲ ಒಂದು ಸ್ವರಕ್ಕೆ ಪ್ಲುತ (ಸ್ವರಿತ)ವೆಂದೂ ಸಂಕೇತ."

**ಸೂತ್ರ ೫:**

"ಏದೋತಾಹ್ರಸ್ವಾಚ" ಕೆಲವು ಭಾಷೆಗಳಲ್ಲಿ 'ಎ ಒ' ಎಂಬ ಹ್ರಸ್ವಾಕ್ಷರಗಳಿರುವುದನ್ನು ಹೇಳುತ್ತದೆ. ಈ ಸೂತ್ರದಲ್ಲಿ ಕನ್ನಡದಲ್ಲಿ 'ಎ ಏ ಒ ಓ' ಎಂಬ ನಾಲ್ಕು ಅಕ್ಷರಗಳಿವೆ ಎಂಬುದನ್ನು ಹೇಳುವುದೇ ನಾಗವರ್ಮನ ಉದ್ದೇಶವಾದರೂ ಪ್ರಸಕ್ತಾನುಪ್ರಸಕ್ತವಾಗಿ ಸಂಧ್ಯಕ್ಷರಗಳ ಬಗೆಗೂ ಹೇಳಲಾಗಿದೆ. 'ನಿತ್ಯಂ ಸಂಧ್ಯಕ್ಷರಾಣಿ ದೀರ್ಘಾಣಿ' ಎಂಬುದು ಯಾವ ಯಾವ ಅಕ್ಷರಗಳಿಗೆ ಅನ್ವಯವಾಗುತ್ತದೆ ಎಂಬುದನ್ನು ನಾಗವರ್ಮ ಸ್ಪಷ್ಟಪಡಿಸಿಲ್ಲ. ಆದರೆ 'ಏ ಐ ಓ ಔ' ಎಂಬ ನಾಲ್ಕು ಅಕ್ಷರಗಳು ಸಂಧ್ಯಕ್ಷರಗಳೆಂದು ಕಾತಂತ್ರ 'ಏಕಾರಾದೀನಿ ಸಂಧ್ಯಕ್ಷರಾಣಿ' (೧-೧-೮) ಎಂಬ ಸೂತ್ರದಲ್ಲಿ ಸೂಚಿಸಿದೆ. ನಾಗವರ್ಮ ಇಲ್ಲಿ ಐ ಔ ಗಳ ಬಗ್ಗೆ ಹೇಳಿಲ್ಲ.

ಕೇಶಿರಾಜನು ಈ ಸಂದರ್ಭದಲ್ಲಿ "ಸವಿನಿಸಿದೆ ಎ ಏ ಒ ಓ ಯೆಂಬಿವು ಕನ್ನಡದೊಳ್ ಸ್ವಭಾವದಿಂದೊಳವು" ಎಂದಿದ್ದಾನೆ. (ಶಮದ ಸೂತ್ರ ೧೮) ಅವನು

ಅವುಗಳಿಗೆ ಸವರ್ಣವನ್ನು ಕಲ್ಪಿಸಿದ್ದಾನೆ. ಸವರ್ಣದ ಪ್ರಸ್ತಾಪ ನಾಗವರ್ಮನಲ್ಲಿ ಈ ಹದಿನಾಲ್ಕು ಸ್ವರಗಳಲ್ಲಿ ಮೊದಲ ಅ ಆ ಗಳನ್ನು ಬಿಟ್ಟು ಉಳಿದ ಹನ್ನೆರ ಅಕ್ಷರಗಳಿಗೆ 'ನಾಮಿ' ಎಂದು ಹೆಸರು. ಕೇಶಿರಾಜನು ಇದನ್ನು ಹೇಳಿದ್ದಾ ನಾಗವರ್ಮನಲ್ಲಿ ಇದು ಇಲ್ಲ. ಮುಂದಿನ ಸೂತ್ರಗಳು ವ್ಯಂಜನಗಳಿಗೆ ಸಂಬಂಧಿಸಿ

ಸೂತ್ರ ೬ ರಲ್ಲಿ "ಕಾದಯಸ್ತ್ರಯ ಸ್ತ್ರಿಂಶದ್ವ್ಯಂಜನಾನಿ" ಎಂದಿರುವುದರಿಂ ವರ್ಗೀಯ ಮತ್ತು ಅವರ್ಗೀಯ ವ್ಯಂಜನಾಕ್ಷರಗಳು 'ಕ' ಕಾರದಿಂದ ಮೊದಲ 'ಹ' ಕಾರಂ ಕಡೆಯಾಗಿ ಇರುವುವು. ಅವು ೩೩. ಹೀಗೆ ವರ್ಗೀಯ ೨೫, ಅವರ್ಗೀ ೮. ಅಲ್ಲಿ ಸಂಸ್ಕೃತದ ವಿರಳ 'ಳ' ಕಾರವು ಲೋಪಿಸಿದೆ. ವರ್ಗೀಯ ವ್ಯಂಜನಾಕ್ಷರಗಳ ಐದು ಐದು ಅಕ್ಷರಗಳಂತೆ ಐದು ಭಾಗಮಾಡಿರುವ ಸೂತ್ರ ಮುಂದಿನದು. ಸೂ ೭ರಲ್ಲಿ "ವರ್ಗೀಸ್ತೇಮಾಂತಾಃ ಪಂಚಶಃ ಪಂಚ" ಎಂದಿದೆ. ಸೂತ್ರ ೮ರ ಅನುನಾಸಿಕಾಸ್ತೇಷಾಂ ಪಂಚಮಾಃ" ಎಂದಿರುವುದರಿಂದ ವರ್ಗದ ಪಂಚಮಾಕ್ಷರಗಳಾ ಙ್, ಞ್, ಣ್, ನ್, ಮ್ ಗಳು ಅನುನಾಸಿಕಾಕ್ಷರಗಳು. ಹೀಗೆ ಇವು ವರ್ಗೀ ವ್ಯಂಜನಾಕ್ಷರಗಳು. ಅವು ಒಟ್ಟು ೨೫. ಸೂತ್ರ ೯ರಲ್ಲಿ ಯ, ಲ, ವ ಎಂಬು ವಿಕಲ್ಪದಿಂದ ಅನುನಾಸಿಕಾಕ್ಷರಗಳಾಗುತ್ತವೆಂದು "ವಿಭಾಷಯಾಯವಲಾಃ" ಎಂದಿದ್ದಾ ಇದಕ್ಕೆ ಕೆಲವು ಪ್ರಯೋಗಗಳನ್ನು ಕೊಟ್ಟಿದ್ದಾನೆ. ಸೇವೆ, ಕಲ್ಲನೆ, ಜವಂ, ಗಾವ ಓವ, ಕಾವ, ಬಲ್ಲನೆ - ಇವು ನಿರ್ ಅನುನಾಸಿಕಗಳು. ಸೇಂವೆ, ಕಂಲನೆ, ಜಂವ ಗಾಂವೆ, ಓಂವ, ತಾಂವ, ಬಂಲನೆ- ಇವು ಅನುನಾಸಿಕಾಕ್ಷರ ಉಚ್ಚಾ ಉದಾಹರಣೆಗಳು. ಜನ ವ್ಯವಹಾರದ ಭಾಷೆಯನ್ನು ನಾಗವರ್ಮ ಗಮನಿಸಿ ನೆಂಬುದಕ್ಕೆ ಈ ಉದಾಹರಣೆಗಳು ಸಾಕ್ಷಿಯಾಗಿವೆ.

**ಲರಡ > ಳಱೞಗಳು :**

ಸೂತ್ರ ೧೦ರಲ್ಲಿ 'ಲರಡಾ ಏವ ಳ ಱೞಃ ಪ್ರಯತ್ನಾಶ್ರಯತ್' ಎಂ ಲರಡಗಳಿಗೆ ಆದೇಶವಾಗಿ ಬರುವ ಳ; ಱ; ೞ ಕಾರಗಳನ್ನು ಕುರಿತು ಹೇಳಿದ್ದಾ ಇವು ದೇಶೀಯಾಕ್ಷರಗಳು. ಲರಡಗಳನ್ನು 'ಪ್ರಯತ್ನಾಶ್ರಯಾತ್' ಎಂದರೆ ಒ ಉಚ್ಚರಿಸುವುದರಿಂದ (ಅತಿಪೀಡನ) ಲ > ಳ; ರ > ಱ; ಡ > ೞ-ಗ ಹುಟ್ಟಿಕೊಳ್ಳುತ್ತವೆ. ಈ ಒತ್ತಿ ಉಚ್ಚರಿಸುವುದನ್ನೇ ನಾಗವಮ "ಬೆಟ್ಟಿತ್ತಾಗುಚ್ಚರಿಸುವುದು" ಎಂದು ಸೂತ್ರ೧೦ರ ಟೀಕುವಿನಲ್ಲಿ ತಿಳಿಸಿದ್ದಾ ನಾಗವರ್ಮನ ಈ ದೇಶೀಯಾಕ್ಷರದ ಕಲ್ಪನೆ ಮುಂದಿನ ಶಬ್ದಮಣಿ ದರ್ಪಣಕಾರನಿ ಪ್ರೇರಣೆಯಾಯಿತು. ದೇಶೀಯಾಕ್ಷರಗಳ ವಿವರಣೆಯಿಂದ ಕನ್ನಡ ಜಾಯಮಾನವ ಎತ್ತಿ ಹಿಡಿದಿದ್ದಾನೆ.

ಕೇಶಿರಾಜನ ದೇಶೀಯಾಕ್ಷರಗಳ ವ್ಯಾಖ್ಯಾನಕ್ಕೆ ನಾಗವರ್ಮನ ಕೃತಿ ಪ್ರಭಾವ ಬೀರಿದೆ. ಳ; ಱ ; ೞ ಗಳ ಜೊತೆಗೆ 'ಎ' ಮತ್ತು 'ಒ' ಕಾರಗಳೂ ದೇಶೀಯಾಕ್ಷರಗಳು. ಅದನ್ನು ನಾಗವರ್ಮನು ಸೂತ್ರ ೫ ರಲ್ಲಿ ಸೂಚಿಸಿದ್ದಾನೆ. ಒಟ್ಟು ಳ; ಱ; ೞ; ಎ; ಒ. ಗಳು ದೇಶೀಯಾಕ್ಷರಗಳು. ಸೂತ್ರ ವೃತ್ತಿಯಲ್ಲಿ "ಲಕಾರಂ ಪುಟ್ಟುವ ತಾಣಮಂ ಬೆಟ್ಟಿತ್ತಾಗಿ ಉಚ್ಚರಿಸೆ ಕುಳವೆಸರ ಳ ಕಾರಂ ಪುಟ್ಟುಗುಂ; ರೇಫೆ ಪುಟ್ಟುವ ತಾಣಮಂ ಬೆಟ್ಟಿತ್ತಾಗಿ ಉಚ್ಚರಿಸೆ ಱಕಾರಂ ಪುಟ್ಟುಗುಂ; ಡ ಕಾರ ಪುಟ್ಟುವ ತಾಣಮಂ ಬೆಟ್ಟಿತ್ತಾಗಿ ಉಚ್ಚರಿಸೆ ಱೞ ವೆಸರ ೞ ಕಾರ ಪುಟ್ಟುಗುಂ" ಎಂದು ಲ> ಳ, ರ> ಱ ಡ> ೞ- ಇವುಗಳ ಉತ್ಪತ್ತಿಯನ್ನು ಕುರಿತು ವಿವರಿಸಿ ಇವುಗಳಿಗೆ ಉದಾಹರಣೆಗಳನ್ನೂ ಕೊಟ್ಟಿದ್ದಾನೆ.

ಲ > ಳ ಕಾರಕ್ಕೆ: ಮೊಲೆ > ಮೊಳೆ; ಕಲೆ > ಕಳೆ; ಸಲಿಲಂ > ಸಳಿಳಂ; ಇಲಾ > ಇಳೆ,

ರ > ಱ ಕಾರಕ್ಕೆ : ಮೊರೆ> ಮೊಱೆ; ಮರೆ > ಮಱೆ

ಡ > ೞ ಕಾರಾಕ್ಕೆ : ಖಡ್ಗಂ ಖೞ್ಗಂ; ಕೋಡುಕುಟ್ಟು > ಕೋೞ್ಕುಟ್ಟು; ಕಾಡುಕಿಚ್ಚು > ಕಾೞ್ಕಿಚ್ಚು

ಇನ್ನು ಕ್ಷಳದ ಬಗ್ಗೆಯೂ ನಾಗವರ್ಮನು ಹೇಳಿದ್ದಾನೆ. ಸಂಸ್ಕೃತ ಶಬ್ದದ ಲಕಾರಕ್ಕೆ ಪುಟ್ಟಿದ ಕ್ಷಳವೆಸರ 'ಳ' ವು ಪ್ರಾಸಕ್ಕೆ ಸಲ್ಲುತ್ತದೆ ಎಂದು ಅದಕ್ಕೆ ಒಂದು ಪ್ರಯೋಗವನ್ನು ಕೊಟ್ಟಿದ್ದಾನೆ.

ಕಿಳಿಱ್ ಹಯಂಗಳ್ ಗರ್ಜಿಸೆ......
ಜಳದ ನಿಭಂಗಳ್ ಗಜಂಗಳ್.......

ಕ್ಷಳದ ಬಗ್ಗೆ ಪ್ರಸ್ತಾವಿಸುತ್ತಾ ಎಂ.ವಿ. ಸೀತಾರಾಮಯ್ಯನವರು "ಕ್ಷಳ ಸಂಜ್ಞೆ ಸಂಸ್ಕೃತ ವ್ಯಾಕರಣದಲ್ಲಾಗಲಿ ನಾಗವರ್ಮನ ವ್ಯಾಕರಣದಲ್ಲಾಗಲಿ ಕಂಡುಬರುವುದಿಲ್ಲ"[೯] ಎಂದಿದ್ದಾರೆ. ಕ್ಷಳ ಸಂಸ್ಕೃತದಲ್ಲಿ ಕಾಣಬರುವುದಿಲ್ಲವಾದರೂ ಅದು ನಾಗವರ್ಮನ ಸೂತ್ರ ಮತ್ತು ವೃತ್ತಿಯಲ್ಲಿ ಕಾಣದೇ ಇದ್ದಾಗಲೂ ಅಲ್ಲಿ ಅದು ಧ್ವನಿತವಾಗಿದೆ ಎನ್ನಬಹುದು. ಟೀಕುವಿನಲ್ಲಿ ಕ್ಷಳದ ಬಗ್ಗೆ ಸ್ಪಷ್ಟ ನಿಲುವು ಇದೆ. ಆದರೆ ಟೀಕು ನಾಗವರ್ಮನದಲ್ಲ ಎಂಬ ಮಾತಿದೆ. ಒಟ್ಟಾರೆ ವೃತ್ತಿಯಲ್ಲಿ "ಸಂಸ್ಕೃತಪದೇಷು ತೇಷಾವೈಕ್ಯಮೇವ-ಸಲಿಲಂ, ಸಳಿಳಂ" (ಸೂತ್ರ -೧೦) ಎಂದಿರುವುದರಿಂದ ಕ್ಷಳದ ಪ್ರಸ್ತಾವನೆ ನಾಗವರ್ಮನು ಮಾಡಿದಂತೆಯೇ ಸರಿ. ಹೀಗೆ ಳ; ಱ; ೞ -ಗಳು ದ್ರಾವಿಡ

ಭಾಷೆಗಳಲ್ಲಿ ನಾಗವರ್ಮನ ಕಾಲಕ್ಕಾಗಲೇ ಪ್ರಚಾರದಲ್ಲಿದ್ದು ಸ್ಪಷ್ಟ ಉಚ್ಚಾರಣೆಗೆ ಕಾರಣವಾಗಿದ್ದವು. ಕನ್ನಡದಲ್ಲಿಯಂತು ಅವು ಸಾಮಾನ್ಯ ವರ್ಣಗಳು. ಅದಕ್ಕೆ ನಾಗವರ್ಮನು ಅವುಗಳ ವಿವರಣೆ ಕೊಟ್ಟಿದ್ದಾನೆ. ಅವನ ಹೇಳಿಕೆ ಮುಂದಿನ ಕೇಶಿರಾಜಾದಿ ವೈಯಾಕರಣರಿಗೆ ಮಾರ್ಗಸೂಚಿಯಾಯಿತು. ಈ ಳ, ಱ, ೞ ಗಳ ಜೊತೆಗೆ ಹ್ರಸ್ವಸ್ವರ ಎ ಮತ್ತು ಒ ಗಳು ಸೇರಿ ಐದು ದೇಶೀಯಾಕ್ಷರಗಳೆನಿಸಿಕೊಂಡವು.

ಮುಂದಿನ ಸೂತ್ರ ಮಹಾಪ್ರಾಣಗಳನ್ನು ಕುರಿತದ್ದು. "ನಾತ್ರ ಪ್ರಾಯೇಣವರ್ಗಾಣಾಂ ದ್ವಿತೀಯ ಚತುರ್ಥಾಃ " (ಸೂತ್ರ ೧೧) ವರ್ಗ ದ್ವಿತೀಯ ಹಾಗೂ ವರ್ಗ ಚತುರ್ಥಾಕ್ಷರಗಳು ಮಹಾಪ್ರಾಣಾಕ್ಷರಗಳು. ಅವು ಸಂಖ್ಯೆ ಮತ್ತು ಅನುಕರಣೆಯಲ್ಲಿ ಕಾಣಬರುವುವು. ಸೂತ್ರದಲ್ಲಿ ನ + ಅತ್ರ = ನಾತ್ರ ಎಂದಿರುವುದರಿಂದ ಕನ್ನಡ ಭಾಷೆಯಲ್ಲಿ ಮಹಾ ಪ್ರಾಣಗಳು ಸಾಮಾನ್ಯವಾಗಿ ಇಲ್ಲ ಎಂಬ ಅಭಿಪ್ರಾಯ ಬರುತ್ತದೆ. "[೮] ಶಬ್ದಸ್ಮೃತಿಯು ಸಂಖ್ಯಾವಾಚಕ ಮತ್ತು ಅನುಕರಣವಾಚಕಗಳಲ್ಲಿ ಮಹಾಪ್ರಾಣಗಳು ಬರುವುದಾಗಿ ಸೂತ್ರ ೬ ರಲ್ಲಿ ಸೂಚಿಸಿದೆ. ಅಲ್ಲಿ ವರ್ಗದ ಅಕ್ಷರಗಳ ಬಗ್ಗೆ ಭೂಷಣದಂತೆ ಕಂಡುಬರುವುದಿಲ್ಲ. ಕೇಶಿರಾಜನಾದರೂ "ಒಳವು ಮಹಾಪ್ರಾಣಂಗಳ್ ವಿಳಸತ್ ಕರ್ಣಾಟಕ ಭಾಷೆಯೊಳ್ ಕೆಲವು ನಿಜೋಜ್ವಳಮಾಗಿ" ಎಂದು ತಿಳಿಸಿದ್ದಾನೆ (ಶ.ಮ.ದ.ಸೂ. ೨೫) ವರ್ಗ ದ್ವಿತೀಯಾ ಮತ್ತು ಚತುರ್ಥಾಕ್ಷರಗಳಾದ ಖ್, ಘ್, ಛ್, ಝ್, ಠ್, ಢ್, ಥ್, ಧ್, ಫ್, ಭ್- ಅನುಕರಣೆ ಮತ್ತು ಸಂಖ್ಯೆಯಲ್ಲಿ ಮಾತ್ರ ಬರುತ್ತದೆ ಎಂದು ಎಲ್ಲ ಕನ್ನಡ ವೈಯಾಕರಣರು ತಿಳಿಸಿರುತ್ತಾರೆ. ನಾಗವರ್ಮನ ಉದಾಹರಣೆಗಳು:

**ಸಂಖ್ಯೆಗೆ** : ಇರ್ಛಾಸಿರಂ; ಎಣ್ಭಾಸಿರಂ, ನೂರ್ಛಾಸಿರಂ - ಈ ಮೊದಲಾದವು.

**ಅನುಕರಣೆಗೆ** : ಖಿಮ್ಮನೆ, ಘಟಿಲೆನೆ, ಛಿಲ್ಲೆನೆ, ಫಿಲೆನೆ. ದುಧುಮ್ಮನೆ- ಇತ್ಯಾದಿ

ವಾಸ್ತವವಾಗಿ ಮೇಲಿನ ಯಾವೊಂದು ಪದವೂ ಕನ್ನಡದ ಮಹಾಪ್ರಾಣವಲ್ಲ. ಅವು ಸಂಸ್ಕೃತ, ಪ್ರಾಕೃತ, ಮರಾಠಿ ಪ್ರಭಾವದಿಂದ ಉಚ್ಚರಿತವಾಗುವ ಶಬ್ದಗಳು. ಅಲ್ಲಿಂದ ಇಲ್ಲಿಗೆ ತದ್ಭವವಾಗಿಯೋ ಅಥವಾ ಮತ್ತೆ ಬೇರೊಂದು ರೂಪವನ್ನು ತಾಳಿಯೋ ನುಸುಳಿಕೊಂಡು ಬಂದಿವೆ. ಈ ದೃಷ್ಟಿಯಿಂದ ಮಹಾಪ್ರಾಣಗಳ ಬಗ್ಗೆ ಜಿಜ್ಞಾಸೆ ಉಂಟಾಗುವುದು ಸಹಜ."[೯] ಅದಕ್ಕೆ ಕಾರಣ ಭಾಷೆಯ ಮೇಲಿನ ಅಭಿಮಾನ. ಅದನ್ನು ಕೇಶಿರಾಜನಲ್ಲೂ ಕಾಣಬಹುದು. ನಾಗವರ್ಮನು ಕೊಟ್ಟ ಉದಾಹರಣೆಗಳನ್ನು ಗಮನಿಸಿದರೆ ಮಹಾಪ್ರಾಣಗಳು ಕೇವಲ ಸಂಖ್ಯೆ ಮತ್ತು ಅನುಕರಣೆಯಲ್ಲಿ ಮಾತ್ರವಿದ್ದು ಉಳಿದಕಡೆ ಇಲ್ಲವೆಂಬ ಅರ್ಥ ಬರುತ್ತದೆ. ಕನ್ನಡದ ಎಲ್ಲ ವೈಯಾಕರಣರ

ಮಹಾಪ್ರಾಣಗಳ ವ್ಯಾಖ್ಯಾನ ಅಸ್ಪಷ್ಟ ಚಿತ್ರವಾಗಿದೆ. ಈ ಕಾರಣ ಅವುಗಳನ್ನು ಕನ್ನಡ ವರ್ಣಮಾಲೆಗೆ ಸೇರಿಸಬೇಕೋ ಬೇಡವೋ ಎಂಬ ಜಿಜ್ಞಾಸೆಯೂ ಇದೆ. ನಾಗವರ್ಮನಲ್ಲಿದ್ದ ಈ ಅನುಮಾನಾಸ್ಪದ ಸಂಗತಿಗಳನ್ನು ಸ್ಪಷ್ಟವಾಗಿ ನಿರೂಪಿಸಲೆಂದೇ ಕೇಶಿರಾಜನು ಶಬ್ದಮಣಿದರ್ಪಣದಂತಹ ಕೃತಿಯನ್ನು ಬರೆದರೂ ಅನುಮಾನಗಳು ಹಾಗೆಯೇ ಉಳಿದಿವೆ. ಸಂಸ್ಕೃತ ಭಾಷೆಯ ಅನುಕರಣೆ, ಮಹಾ ಪ್ರಾಣಗಳಂತಹವು ಕನ್ನಡದಲ್ಲೂ ಇವೆ ಎಂದು ಹೇಳಬೇಕೆಂಬ ಹಂಬಲ ಕನ್ನಡದ ವ್ಯಾಕರಣಕಾರರು ಹೀಗೆ ಹೇಳಲು ಕಾರಣ ಇರಬಹುದು.

ಮುಂದಿನ ಸೂತ್ರ ೧೨ರಲ್ಲಿ "ಶಕ್ಷೌಚ" ಎಂದು ಕನ್ನಡ ಭಾಷೆಯಲ್ಲಿ ಶ, ಷ ಗಳಿಲ್ಲವೆಂದು ನಾಗವರ್ಮನು ತಿಳಿಸಿರುತ್ತಾನೆ.

ಮಹಾಪ್ರಾಣಾಕ್ಷರಗಳ ಜೊತೆಗೆ ಶ, ಷ ಕಾರಗಳು ಕೂಡ ಕನ್ನಡದಲ್ಲಿ ಇಲ್ಲ ಎಂಬ ಅಭಿಪ್ರಾಯವನ್ನು ಶ್ರೀ ರಾಜಗೋಪಾಲರು ವ್ಯಕ್ತಪಡಿಸಿದ್ದಾರೆ.[೧೦] ಆದರೆ ಎಂ.ವಿ ಸೀತಾರಾಮಯ್ಯನವರು ಕನ್ನಡದಲ್ಲಿ ನಾಗವರ್ಮನು ಮಹಾಪ್ರಾಣಗಳನ್ನು ಸ್ವೀಕರಿಸಿದ್ದಾನೆಂದೂ, ಕೇವಲ ಶ,ಷ, ಕಾರಗಳನ್ನು ಮಾತ್ರ ಬಿಟ್ಟಿದ್ದಾನೆಂದೂ ಅರ್ಥಬರುವಂತೆ ಬರೆದಿದ್ದಾರೆ.[೧೧]

ನಾಗವರ್ಮನು ಪ್ರಾಯಃ ಮಹಾಪ್ರಾಣಗಳು ಇಲ್ಲ ಎಂದು ಹೇಳಿ, ಪ್ರಾಯಃ ಎಂದು ಹೇಳಿದ್ದಕ್ಕೆ ವಿವರಣೆಯನ್ನು ನೀಡಿದ್ದಾನೆ. ಮಹಾಪ್ರಾಣಗಳು ಕನ್ನಡದಲ್ಲಿವೆ ಎಂಬ ಅಭಿಪ್ರಾಯ ನಾಗವರ್ಮನಿಗೆ ಇದ್ದಿದ್ದರೆ. 'ಶಷೌಚ' ಎಂದು ಮುಂದಿನ ಸೂತ್ರ ಬರೆಯುವ ಪ್ರಮೇಯವೇ ಇರುತ್ತಿರಲಿಲ್ಲ. ಶ,ಷ ಗಳು ಕೂಡ ಇಲ್ಲ ಎಂಬ ಮಾತಿನಿಂದ ಮಹಾಪ್ರಾಣಗಳು ಇಲ್ಲ ಎಂದು ಅರ್ಥ ಹೇಳಲೇಬೇಕು. ಕೆಲವೇ ಕೆಲವು ಕಡೆ ಮಹಾಪ್ರಾಣಗಳು ಇದ್ದ ಮಾತ್ರಕ್ಕೆ ಅವನ್ನು ಕನ್ನಡ ವರ್ಣಮಾಲೆಗೆ ಸ್ವೀಕರಿಸಬೇಕಾಗಿಲ್ಲವೆಂದೇ ನಾಗವರ್ಮನ ಅಭಿಪ್ರಾಯ.

ಮುಂದಿನ ಸೂತ್ರ ೧೩ರಲ್ಲಿ "ಋಕಾರಾದಯಶ್ಚತ್ವಾತ: ಸ್ವರಾ:" ಎಂದಿದೆ. ಋ, ೠ ಌ ೡ ಎಂಬ ನಾಲ್ಕು ಸ್ವರಗಳು ಕನ್ನಡ ಭಾಷೆಯಲ್ಲಿ ಸಲ್ಲವು ಎಂದು ಸ್ಪಷ್ಟಪಡಿಸಿದೆ. ಕನ್ನಡ ಭಾಷೆಯಲ್ಲಿ ಋೠಗಳಿಂದ ಪ್ರಾರಂಭವಾಗುವ ಶಬ್ದಗಳು ಸಂಸ್ಕೃತ ಶಬ್ದಗಳು. ಅವುಗಳನ್ನು ತದ್ಭವ ಮಾಡಿಕೊಂಡಾಗ ಧ್ವನಿ ವ್ಯತ್ಯಾಸವಾಗುತ್ತದೆ. ಉದಾಹರಣೆಗೆ: ಋಷಿ> ರಿಸಿ; ವೃಷಭ > ಬಸವಂ; ಇತ್ಯಾದಿ. ಈ ಕಾರಣ ಋ ೠಕಾರಗಳು ಕನ್ನಡಕ್ಕೆ ಅನಾವಶ್ಯಕ. ಅಂತೆ ಌ ೡ ಗಳು ಕೂಡ.

ಸೂತ್ರ ೧೪ರಲ್ಲಿ 'ಅನುಸ್ವಾರೋ ಬಿಂದುಃ" ಎಂದಿರುವುದರಿಂದ ಅನುಸ್ವಾರ, ಬಿಂದು ಸಂಜ್ಞೆ ಪಡೆಯುತ್ತದೆ ಎಂದು ಹೇಳಿದೆ. ಅನುಸ್ವಾರಕ್ಕೆ ಸ್ವತಂತ್ರ ಉಚ್ಚಾರಣೆ

ಭಾಷೆಗಳಲ್ಲಿ ನಾಗವರ್ಮನ ಕಾಲಕ್ಕಾಗಲೇ ಪ್ರಚಾರದಲ್ಲಿದ್ದು ಸ್ಪಷ್ಟ ಉಚ್ಚಾರಣೆಗೆ ಕಾರಣವಾಗಿದ್ದವು. ಕನ್ನಡದಲ್ಲಿಯಂತು ಅವು ಸಾಮಾನ್ಯ ವರ್ಣಗಳು. ಅದಕ್ಕೆ ನಾಗವರ್ಮನು ಅವುಗಳ ವಿವರಣೆ ಕೊಟ್ಟಿದ್ದಾನೆ. ಅವನ ಹೇಳಿಕೆ ಮುಂದಿನ ಕೇಶಿರಾಜಾದಿ ವೈಯಾಕರಣರಿಗೆ ಮಾರ್ಗಸೂಚಿಯಾಯಿತು. ಈ ಳ, ಱ, ೞ ಗಳ ಜೊತೆಗೆ ಹ್ರಸ್ವಸ್ವರ ಎ ಮತ್ತು ಒ ಗಳು ಸೇರಿ ಐದು ದೇಶೀಯಾಕ್ಷರಗಳೆನಿಸಿಕೊಂಡವು.

ಮುಂದಿನ ಸೂತ್ರ ಮಹಾಪ್ರಾಣಗಳನ್ನು ಕುರಿತದ್ದು. "ನಾತ್ರ ಪ್ರಾಯೇಣವರ್ಗಾಣಾಂ ದ್ವಿತೀಯ ಚತುರ್ಥಾಃ" (ಸೂತ್ರ ೧೧) ವರ್ಗ ದ್ವಿತೀಯ ಹಾಗೂ ವರ್ಗ ಚತುರ್ಥಾಕ್ಷರಗಳು ಮಹಾಪ್ರಾಣಾಕ್ಷರಗಳು. ಅವು ಸಂಖ್ಯೆ ಮತ್ತು ಅನುಕರಣೆಯಲ್ಲಿ ಕಾಣಬರುವುವು. ಸೂತ್ರದಲ್ಲಿ ನ + ಅತ್ರ = ನಾತ್ರ ಎಂದಿರುವುದರಿಂದ ಕನ್ನಡ ಭಾಷೆಯಲ್ಲಿ ಮಹಾ ಪ್ರಾಣಗಳು ಸಾಮಾನ್ಯವಾಗಿ ಇಲ್ಲ ಎಂಬ ಅಭಿಪ್ರಾಯ ಬರುತ್ತದೆ. [೮] ಶಬ್ದಸ್ಮೃತಿಯು ಸಂಖ್ಯಾವಾಚಕ ಮತ್ತು ಅನುಕರಣವಾಚಕಗಳಲ್ಲಿ ಮಹಾಪ್ರಾಣಗಳು ಬರುವುದಾಗಿ ಸೂತ್ರ ೬ ರಲ್ಲಿ ಸೂಚಿಸಿದೆ. ಅಲ್ಲಿ ವರ್ಗದ ಅಕ್ಷರಗಳ ಬಗ್ಗೆ ಭೂಷಣದಂತೆ ಕಂಡುಬರುವುದಿಲ್ಲ. ಕೇಶಿರಾಜನಾದರೂ "ಒಳವು ಮಹಾಪ್ರಾಣಂಗಳ್ ವಿಳಸತ್ ಕರ್ಣಾಟಕ ಭಾಷೆಯೊಳ್ ಕೆಲವು ನಿಜೋಜ್ವಳಮಾಗಿ" ಎಂದು ತಿಳಿಸಿದ್ದಾನೆ (ಶ.ಮ.ದ.ಸೂ. ೨೫) ವರ್ಗ ದ್ವಿತೀಯಾ ಮತ್ತು ಚತುರ್ಥಾಕ್ಷರಗಳಾದ ಖ್, ಘ್, ಛ್, ಝ್, ಠ್, ಢ್, ಥ್, ಧ್, ಫ್, ಭ್- ಅನುಕರಣೆ ಮತ್ತು ಸಂಖ್ಯೆಯಲ್ಲಿ ಮಾತ್ರ ಬರುತ್ತದೆ ಎಂದು ಎಲ್ಲ ಕನ್ನಡ ವೈಯಾಕರಣರು ತಿಳಿಸಿರುತ್ತಾರೆ. ನಾಗವರ್ಮನ ಉದಾಹರಣೆಗಳು:

**ಸಂಖ್ಯೆಗೆ** : ಇರ್ಛಾಸಿರಂ; ಎಣ್ಭಾಸಿರಂ, ನೂರ್ಛಾಸಿರಂ - ಈ ಮೊದಲಾದವು.

**ಅನುಕರಣೆಗೆ** : ಖಮ್ಮನೆ, ಘಟಿಲೆನೆ, ಛಿಲ್ಲನೆ, ಫರಿಲೆನೆ. ಧುಧುಮ್ಮನೆ- ಇತ್ಯಾದಿ

ವಾಸ್ತವವಾಗಿ ಮೇಲಿನ ಯಾವೊಂದು ಪದವೂ ಕನ್ನಡದ ಮಹಾಪ್ರಾಣವಲ್ಲ. ಅವು ಸಂಸ್ಕೃತ, ಪ್ರಾಕೃತ, ಮರಾಠಿ ಪ್ರಭಾವದಿಂದ ಉಚ್ಚರಿತವಾಗುವ ಶಬ್ದಗಳು. ಅಲ್ಲಿಂದ ಇಲ್ಲಿಗೆ ತದ್ಭವವಾಗಿಯೋ ಅಥವಾ ಮತ್ತೆ ಬೇರೊಂದು ರೂಪವನ್ನು ತಾಳಿಯೋ ನುಸುಳಿಕೊಂಡು ಬಂದಿವೆ. ಈ ದೃಷ್ಟಿಯಿಂದ ಮಹಾಪ್ರಾಣಗಳ ಬಗ್ಗೆ ಜಿಜ್ಞಾಸೆ ಉಂಟಾಗುವುದು ಸಹಜ.[೮] ಅದಕ್ಕೆ ಕಾರಣ ಭಾಷೆಯ ಮೇಲಿನ ಅಭಿಮಾನ. ಅದನ್ನು ಕೇಶಿರಾಜನಲ್ಲೂ ಕಾಣಬಹುದು. ನಾಗವರ್ಮನು ಕೊಟ್ಟ ಉದಾಹರಣೆಗಳನ್ನು ಗಮನಿಸಿದರೆ ಮಹಾಪ್ರಾಣಗಳು ಕೇವಲ ಸಂಖ್ಯೆ ಮತ್ತು ಅನುಕರಣೆಯಲ್ಲಿ ಮಾತ್ರವಿದ್ದು ಉಳಿದಕಡೆ ಇಲ್ಲವೆಂಬ ಅರ್ಥ ಬರುತ್ತದೆ. ಕನ್ನಡದ ಎಲ್ಲ ವೈಯಾಕರಣರ

ಮಹಾಪ್ರಾಣಗಳ ವ್ಯಾಖ್ಯಾನ ಅಸ್ಪಷ್ಟ ಚಿತ್ರವಾಗಿದೆ. ಈ ಕಾರಣ ಅವುಗಳನ್ನು ಕನ್ನಡ ವರ್ಣಮಾಲೆಗೆ ಸೇರಿಸಬೇಕೋ ಬೇಡವೋ ಎಂಬ ಜಿಜ್ಞಾಸೆಯೂ ಇದೆ. ನಾಗವರ್ಮನಲ್ಲಿದ್ದ ಈ ಅನುಮಾನಾಸ್ಪದ ಸಂಗತಿಗಳನ್ನು ಸ್ಪಷ್ಟವಾಗಿ ನಿರೂಪಿಸಲೆಂದೇ ಕೇಶಿರಾಜನು ಶಬ್ದಮಣಿದರ್ಪಣದಂತಹ ಕೃತಿಯನ್ನು ಬರೆದರೂ ಅನುಮಾನಗಳು ಹಾಗೆಯೇ ಉಳಿದಿವೆ. ಸಂಸ್ಕೃತ ಭಾಷೆಯ ಅನುಕರಣೆ, ಮಹಾ ಪ್ರಾಣಗಳಂತಹವು ಕನ್ನಡದಲ್ಲೂ ಇವೆ ಎಂದು ಹೇಳಬೇಕೆಂಬ ಹಂಬಲ ಕನ್ನಡದ ವ್ಯಾಕರಣಕಾರರು ಹೀಗೆ ಹೇಳಲು ಕಾರಣ ಇರಬಹುದು.

ಮುಂದಿನ ಸೂತ್ರ ೧೨ರಲ್ಲಿ "ಶಕ್ಷೌಚ" ಎಂದು ಕನ್ನಡ ಭಾಷೆಯಲ್ಲಿ ಶ, ಷ ಗಳಿಲ್ಲವೆಂದು ನಾಗವರ್ಮನು ತಿಳಿಸಿರುತ್ತಾನೆ.

ಮಹಾಪ್ರಾಣಾಕ್ಷರಗಳ ಜೊತೆಗೆ ಶ, ಷ ಕಾರಗಳು ಕೂಡ ಕನ್ನಡದಲ್ಲಿ ಇಲ್ಲ ಎಂಬ ಅಭಿಪ್ರಾಯವನ್ನು ಶ್ರೀ ರಾಜಗೋಪಾಲರು ವ್ಯಕ್ತಪಡಿಸಿದ್ದಾರೆ.[೧೦] ಆದರೆ ಎಂ.ವಿ ಸೀತಾರಾಮಯ್ಯನವರು ಕನ್ನಡದಲ್ಲಿ ನಾಗವರ್ಮನು ಮಹಾಪ್ರಾಣಗಳನ್ನು ಸ್ವೀಕರಿಸಿದ್ದಾನೆಂದೂ, ಕೇವಲ ಶ,ಷ, ಕಾರಗಳನ್ನು ಮಾತ್ರ ಬಿಟ್ಟಿದ್ದಾನೆಂದೂ ಅರ್ಥಬರುವಂತೆ ಬರೆದಿದ್ದಾರೆ.[೧೧]

ನಾಗವರ್ಮನು ಪ್ರಾಯಃ ಮಹಾಪ್ರಾಣಗಳು ಇಲ್ಲ ಎಂದು ಹೇಳಿ, ಪ್ರಾಯಃ ಎಂದು ಹೇಳಿದ್ದಕ್ಕೆ ವಿವರಣೆಯನ್ನು ನೀಡಿದ್ದಾನೆ. ಮಹಾಪ್ರಾಣಗಳು ಕನ್ನಡದಲ್ಲಿವೆ ಎಂಬ ಅಭಿಪ್ರಾಯ ನಾಗವರ್ಮನಿಗೆ ಇದ್ದಿದ್ದರೆ. 'ತಷೌಚ' ಎಂದು ಮುಂದಿನ ಸೂತ್ರ ಬರೆಯುವ ಪ್ರಮೇಯವೇ ಇರುತ್ತಿರಲಿಲ್ಲ. ಶ,ಷ ಗಳು ಕೂಡ ಇಲ್ಲ ಎಂಬ ಮಾತಿನಿಂದ ಮಹಾಪ್ರಾಣಗಳು ಇಲ್ಲ ಎಂದು ಅರ್ಥ ಹೇಳಲೇಬೇಕು. ಕೆಲವೇ ಕೆಲವು ಕಡೆ ಮಹಾಪ್ರಾಣಗಳು ಇದ್ದ ಮಾತ್ರಕ್ಕೆ ಅವನ್ನು ಕನ್ನಡ ವರ್ಣಮಾಲೆಗೆ ಸ್ವೀಕರಿಸಬೇಕಾಗಿಲ್ಲವೆಂದೇ ನಾಗವರ್ಮನ ಅಭಿಪ್ರಾಯ.

ಮುಂದಿನ ಸೂತ್ರ ೧೩ರಲ್ಲಿ "ಋಕಾರಾದಯಶ್ಚತ್ವಾತ: ಸ್ವರಾ:" ಎಂದಿದೆ. ಋ, ೠ ಌ ೡ ಎಂಬ ನಾಲ್ಕು ಸ್ವರಗಳು ಕನ್ನಡ ಭಾಷೆಯಲ್ಲಿ ಸಲ್ಲವು ಎಂದು ಸ್ಪಷ್ಟಪಡಿಸಿದೆ. ಕನ್ನಡ ಭಾಷೆಯಲ್ಲಿ ಋೠಗಳಿಂದ ಪ್ರಾರಂಭವಾಗುವ ಶಬ್ದಗಳು ಸಂಸ್ಕೃತ ಶಬ್ದಗಳು. ಅವುಗಳನ್ನು ತದ್ಭವ ಮಾಡಿಕೊಂಡಾಗ ಧ್ವನಿ ವ್ಯತ್ಯಾಸವಾಗುತ್ತದೆ. ಉದಾಹರಣೆಗೆ: ಋಷಿ> ರಿಸಿ; ವೃಷಭ > ಬಸವಂ; ಇತ್ಯಾದಿ. ಈ ಕಾರಣ ಋ ೠಕಾರಗಳು ಕನ್ನಡಕ್ಕೆ ಅನಾವಶ್ಯಕ. ಅಂತೆ ಌ ೡ ಗಳು ಕೂಡ.

ಸೂತ್ರ ೧೪ರಲ್ಲಿ 'ಅನುಸ್ವಾರೋ ಬಿಂದುಃ" ಎಂದಿರುವುದರಿಂದ ಅನುಸ್ವಾರ, ಬಿಂದು ಸಂಜ್ಞೆ ಪಡೆಯುತ್ತದೆ ಎಂದು ಹೇಳಿದೆ. ಅನುಸ್ವಾರಕ್ಕೆ ಸ್ವತಂತ್ರ ಉಚ್ಚಾರಣೆ

ಇಲ್ಲ. ಅದು ಸ್ವರವನ್ನೋ ವ್ಯಂಜನವನ್ನೋ ಆಶ್ರಯಿಸಿಕೊಂಡಿರುತ್ತದೆ. ಬಿಂದುವಿನ ಸ್ವರೂಪ ವೃತ್ತಾಕಾರ. ಸೊನ್ನೆ ಎಂದೂ ಅದಕ್ಕೆ ಹೆಸರು. ಆ ಸೊನ್ನೆ ಮೇಲೆ ಕೆಳಗೆ ಒಂಪರ ಜೊತೆ ಬಂದು ಕೂಡಿದ್ದರೆ ಅದಕ್ಕೆ ವಿಸರ್ಗವೆನ್ನುವರು. ಈ ಎರಡಕ್ಷರಗಳು ಸಂಸ್ಕೃತದ ಯೋಗವಾಹಗಳಲ್ಲಿ ಕಾಣಬರುವುವು. ಸೂತ್ರ ೧೫ರಲ್ಲಿ ನಾಗವರ್ಮ ವಿಸರ್ಗದ ಬಗ್ಗೆ ತಿಳಿಸಿದ್ದಾನೆ

**ಸೂತ್ರ ೧೫:** "ಸ ಉಪರ್ಯಧಸ್ತಾಚ್ಚ ವಿಸರ್ಗ:" ಎಂದು. ಆದರೆ ನಾಗವರ್ಮನು ಕನ್ನಡದಲ್ಲಿ ಇದನ್ನು ಸ್ವೀಕರಿಸಬೇಕೋ ಬೇಡವೋ ತಿಳಿಸಿಲ್ಲ. ಅನುಸ್ವಾರ ಮತ್ತು ವಿಸರ್ಗ ಈ ಎರಡಕ್ಷರಗಳನ್ನು ನಾಗವರ್ಮನು ವರ್ಣಮಾಲೆಯಲ್ಲಿ ಸ್ವೀಕರಿಸಿದ್ದಾನೆ. "ಹಳಗನ್ನಡ ವೈಯಾಕರಣರಿಗಂತೂ ಬಿಂದುವಿನ ಬಗ್ಗೆ ಸಂದೇಹವಿಲ್ಲ. ಅವರ ನಿರೂಪಣೆಯ ಹಿನ್ನೆಲೆಯಲ್ಲಿ ವಿಚಾರಿಸಿದರೂ ಕನ್ನಡ ವರ್ಣಮಾಲೆಯಲ್ಲಿ ಬಿಂದುವಿಗೆ ಸ್ಥಾನ ದೊರಕದು"[೧೨] ಎಂಬ ಅಭಿಪ್ರಾಯವಿದೆ. ಭಾಷಾವಿಜ್ಞಾನದ ಬೆಳಕಿನಲ್ಲಿ ನೋಡಿದಾಗಲೂ ಬಿಂದು ಧ್ವನಿಮಾ ಆಗಲಾರದು. ನಾಗವರ್ಮ ಇದರ ಬಗ್ಗೆ ಮೌನ ವಹಿಸಿದ್ದರಿಂದ, ಬಿಂದುವನ್ನು ವಿಸರ್ಗವನ್ನು ಬಿಡುವುದೇ ಲೇಸು.

**ಕನ್ನಡ ಶುದ್ಧಗೆ:** ನಾಗವರ್ಮನ ಭಾಷಾಭೂಷಣದ ಪ್ರಕಾರ ಸ್ವರಗಳು ೧೪; ವರ್ಗೀಯ ವ್ಯಂಜನಗಳು ೨೫, ಅವರ್ಗೀಯ ವ್ಯಂಜನಗಳು ೮; ಅನುಸ್ವಾರ ವಿಸರ್ಗಗಳು ೨; ಒಟ್ಟು ಸಂಸ್ಕೃತ ಅಕ್ಷರಗಳು ೪೯. ಅವುಗಳಿಗೆ ಕನ್ನಡದ ದೇಶೀಯಾಕ್ಷರಗಳಾದ ಎ,ಒ,ಱ, ೞ, ಳ ಗಳು ಸೇರಲಾಗಿ ಸಂಸ್ಕೃತ -ಕನ್ನಡ ಮಿಶ್ರಣ ವರ್ಣಮಾಲೆಯ ಸಂಖ್ಯೆ ೫೪. ಸಂಸ್ಕೃತದಲ್ಲಿ ಕನ್ನಡಕ್ಕೆ ಬೇಡವಾದ ೬ ಅಕ್ಷರಗಳನ್ನು (ಋ, ೠ, ಌ ೡ ಶ, ಷ) ೧೦ ಮಹಾಪ್ರಾಣಗಳನ್ನೂ ಮತ್ತು ಅನುಸ್ವಾರ ವಿಸರ್ಗಗಳನ್ನೂ ಕಳೆದರೆ ೩೬ ಕನ್ನಡ ಶುದ್ಧಗೆ ಆಗುವುವು. ಇದನ್ನು ಹೀಗೆ ಪಟ್ಟಿಮಾಡಿ ತೋರಿಸಬಹುದು-

**೧. ಸಂಸ್ಕೃತ ವರ್ಣಮಾಲೆ:**

| | |
|---|---|
| ಸ್ವರಗಳು | ೧೪ |
| ವರ್ಗೀಯ ವ್ಯಂಜನಗಳು | ೨೫ |
| ಅವರ್ಗೀಯ ವ್ಯಂಜನಗಳು | ೦೮ |
| ಬಿಂದು, ವಿಸರ್ಗಗಳು | ೦೨ |
| ಒಟ್ಟು | ೪೯ |

**೨. ಸಂಸ್ಕೃತ ಕನ್ನಡ ವರ್ಣಗಳು:**

| | |
|---|---|
| ಸಂಸ್ಕೃತ | ೪೯ |
| ಕನ್ನಡ ದೇಶೀಯಾಕ್ಷರಗಳು | ೦೫ |
| ಒಟ್ಟು | ೫೪ |

೩. **ಮಿಶ್ರಿತ ಸಂಸ್ಕೃತ - ಕನ್ನಡ ಅಕ್ಷರಗಳಲ್ಲಿ ಕನ್ನಡಕ್ಕೆ ಬೇಡವಾದವು:**




| | |
|---|---|
| ೧. ಸ್ವರಗಳು ಋ, ೠ, ಌ ೡ | ೪ |
| ೨. ಮಹಾಪ್ರಾಣಗಳು | ೧೦ |
| ೩. ಅವರ್ಗೀಯ ವ್ಯಂಜನಗಳು ಶ, ಷ | ೦೨ |
| ೪. ಬಿಂದು ಮತ್ತು ವಿಸರ್ಗಗಳು | ೦೨ |
| ಒಟ್ಟು | ೧೮ |

೪. **ಕನ್ನಡ ಶುದ್ಧಗೆ:**

| | |
|---|---|
| ಸಂಸ್ಕೃತ + ಕನ್ನಡ ಮಿಶ್ರಿತಾಕ್ಷರಗಳು | ೫೪ |
| ಕಳೆಯಬೇಕಾದ ಸಂಸ್ಕೃತಾಕ್ಷರಗಳು | ೧೮ |
| ಒಟ್ಟು | ೩೬ |

ಇದನ್ನು ತೌಲನಿಕವಾಗಿ ಪರಿಶೀಲಿಸಿದಾಗ ಕೆಳಗಿನ ವಿಷಯಗಳು ಗಮನ ಸೆಳೆಯುತ್ತವೆ.

೧. ಸ್ವರಗಳ ಬಗ್ಗೆ ಎಲ್ಲ ವೈಯಾಕರಣರ ನಿಲುವು ಒಂದೇ ಆಗಿದೆ. ಅಲ್ಲಿ ಯಾವ ವ್ಯಾತ್ಯಾಸವೂ ಇಲ್ಲ. ಎಲ್ಲರ ಪ್ರಕಾರ ಸಂಸ್ಕೃತದ ಸ್ವರಗಳು ೧೪, ಕನ್ನಡದ ಸ್ವರಗಳು ೧೦.

೨. ವರ್ಗೀಯ ವ್ಯಂಜನಗಳು ನಾಗವರ್ಮನಲ್ಲಿ ೨೫ ಎಂದು ಹೇಳಿದ್ದರೂ, ಅಲ್ಲಿಯ ಮಹಾಪ್ರಾಣಗಳ ಬಗ್ಗೆ ಸಂಶಯವಿದ್ದುದರಿಂದ, ಕೆಲವರು ಅಲ್ಲಿಯ ೧೦ ಅಕ್ಷರಗಳನ್ನು ಸ್ವೀಕರಿಸಲಿಲ್ಲ. "ಸಾಮಾನ್ಯವಾಗಿ ಕನ್ನಡದಲ್ಲಿ ಮಹಾಪ್ರಾಣಗಳಿಲ್ಲ-ವೆಂದೇ ಭೂಷಣದ ಅಭಿಮತ"[೧೩] ಇದೇ ಸರಿಯೆನಿಸುತ್ತದೆ. ಇದರಿಂದ ೨೫ ವ್ಯಂಜನಗಳು ೧೫ ಆಗುವುವು.

೩. ಅವರ್ಗೀಯ ವ್ಯಂಜನಾಕ್ಷರಗಳು ನಾಗವರ್ಮನ ಪ್ರಕಾರ ೮. ಕೇಶಿರಾಜನ ಪ್ರಕಾರ ೯. ಅಲ್ಲಿ ಬೇಡವಾದ ಅಕ್ಷರಗಳು ಶ.ಷ ಈ ವಿಷಯದಲ್ಲಿ ಎಲ್ಲರಲ್ಲೂ ಒಮ್ಮತವಿದೆ.

೪. ನಾಗವರ್ಮನು ಯೋಗವಾಹಗಳ ಹೆಸರನ್ನು ಎಲ್ಲೂ ಎತ್ತಿಲ್ಲ. ಆದರೆ ಅದಕ್ಕೆ ಸಂಬಂಧಿಸಿದ ಅನುಸ್ವಾರ, ವಿಸರ್ಗಗಳನ್ನು ಕುರಿತು ವಿವೇಚಿಸಿದ್ದಾನೆ.

ಆದರೂ ಅದು ಅಸ್ಪಷ್ಟ. ಅವುಗಳನ್ನು ವರ್ಣಮಾಲೆಗೆ ಸೇರಿಸಬೇಕೋ ಬೇಡವೋ ಎಂಬುದನ್ನು ನಮಗೇ ಬಿಟ್ಟಿದ್ದಾನೆ. ಕೇಶಿರಾಜನಲ್ಲಿ ಈ ಸಮಸ್ಯೆ ಇಲ್ಲ.

೫. ದೇಶೀಯಾಕ್ಷರಗಳ ಕಲ್ಪನೆ ಎಲ್ಲರಲ್ಲೂ ಇದೆ. ಶಬ್ದಸ್ಮೃತಿಯು ಱ, ೞ,ಳ ಕಾರಗಳನ್ನು ಕುರಿತು ವಿವರಿಸಿದೆ. ಭಾ.ಭೂ.ದಲ್ಲಿ ಇದರ ಸ್ಪಷ್ಟ ಚಿತ್ರವಿದೆ; ಕೇಶಿರಾಜನು ಇದನ್ನು ಹೇಳಿದ್ದಾನೆ.

೬. ಒಟ್ಟು ಕನ್ನಡ ವರ್ಣಮಾಲೆಯ ಸಂಖ್ಯೆಯ ಬಗೆಗೆ ಹಿಂದಿನ ವೈಯಾಕರಣರು ಹಾಗು ಇಂದಿನ ವಿದ್ವಾಂಸರಲ್ಲಿ ಭಿನ್ನತೆ ಇದೆ. ಶ್ರೀಕೃಷ್ಣಭಟ್ಟರು ಭೂಷಣದಲ್ಲಿ ೩೮ ಎಂದಿದ್ದಾರೆ.[೧೪] ಅವರು ಮಹಾಪ್ರಾಣಗಳನ್ನು ಸ್ವೀಕರಿಸಿಲ್ಲ. ವಿಸರ್ಗವನ್ನು ಸೇರಿಸಿದ್ದಾರೆ. ಆದರೆ ಅವರೇ ಬಿಂದುವಿಗೆ ಕನ್ನಡದಲ್ಲಿ ಸ್ಥಾನವಿಲ್ಲವೆಂದಿದ್ದಾರೆ. ಎಂ.ವಿ.ಸೀ. ೪೬ ಎಂದಿದ್ದಾರೆ.

೭. ಮೊದಲು ಸಂಸ್ಕೃತ ವರ್ಣಮಾಲೆಯನ್ನು ಹೇಳಿ ಅದಕ್ಕೆ ಕನ್ನಡದ ದೇಶಿಯಾಕ್ಷರಗಳನ್ನು ಸೇರಿಸಿ, ಅನಂತರ ಕೆಲವು ವರ್ಣಗಳು (ಸಂಸ್ಕೃತ) ಕನ್ನಡಕ್ಕೆ ಅನಗತ್ಯವೆಂದು ‘ಕೂಡಿ-ಕಳೆಯುವ’ ಕ್ರಮ ಕನ್ನಡ ವ್ಯಾಕರಣಗಳ ಮಟ್ಟಿಗೆ ಭೂಷಣದಲ್ಲಿ ಪ್ರಾರಂಭವಾದಂತೆ ತೋರುತ್ತದೆ. ಈ ವಿಧಾನವು ದರ್ಪಣದಲ್ಲಿ ಪೂರ್ಣ ಸ್ಥಿತಿಗೆ ಬಂದಂತಿದೆ.

ನಾಗವರ್ಮನ ಕ.ಭಾ.ಭೂ.ದ ‘ಸಂಜ್ಞಾವಿಧಾನಂ’ ವರ್ಣ ಸಮಾಮ್ನಾಯಕ್ಕೆ ಮೀಸಲು. ಅಲ್ಲಿಯ ೧೭ ಸೂತ್ರಗಳಲ್ಲಿ ಕೇವಲ ಮೂರು ಸೂತ್ರಗಳನ್ನುಳಿದು ಉಳಿದ ಸೂತ್ರಗಳೆಲ್ಲವೂ ವರ್ಣಮಾಲೆಗೆ ಸಂಬಂಧಿಸಿದವು. ಅಲ್ಲಿ ಸ್ವರ -ಹ್ರಸ್ವ-ದೀರ್ಘ-ಪ್ಲುತ- ಸಮಾನಾಕ್ಷರಗಳು ಸಂಧ್ಯಕ್ಷರಗಳು, ವ್ಯಂಜನಗಳು, ಅಲ್ಪ ಮಹಾಪ್ರಾಣಗಳು, ಅನುನಾಸಿಕ, ಅವರ್ಗೀಯ ವ್ಯಂಜನಗಳು, ದೇಶೀಯಾಕ್ಷರಗಳು- ಇವುಗಳ ಸ್ಪಷ್ಟ ಚಿತ್ರವಿದೆ. ಹಲವಾರು ವಿಷಯಗಳಲ್ಲಿ ಕೇಶಿರಾಜನು ನಾಗವರ್ಮನಿಗೆ ಋಣಿ. ಕೊನೆಯ ೨ ಸೂತ್ರಗಳು (ಸೂತ್ರ ೧೬, ೧೭) ಮಾತ್ರ ಪದ ಮತ್ತು ಸಂಹಿತೆಯನ್ನು ಕುರಿತು ತಿಳಿಸಿವೆ. ವರ್ಣ ಸಮಾಮ್ನಾಯಕ್ಕೂ ಇವಕ್ಕೂ ಸಂಬಂಧವಿಲ್ಲ. ಆದರೆ ‘ಸಂಜ್ಞಾ ವಿಧಾನಂ’ ಎಂಬಲ್ಲಿ ಮುಂದಿನ ಅಧ್ಯಾಯದ ಸಂಜ್ಞೆಗಳನ್ನು ಹೇಳಲು ಇವನ್ನು ಸೇರಿಸಿದ್ದಾನೆ. ಏನೇ ಆಗಲಿ ವ್ಯಾಕರಣಾಂಶಗಳನ್ನು ಸಂಕ್ಷೇಪಿಸುವಲ್ಲಿ ಅವನು ಕಡುಜಾಣ. ದೇಶೀಯಾಕ್ಷರಗಳಂತಹ ವಿಷಯ ಪ್ರಸ್ತಾವನೆಯಿಂದ ಅವನಲ್ಲಿ, ಕನ್ನಡದ ಅಭಿಮಾನ ಗೋಚರಿಸಿದೆ. ಹೀಗೆ ಒಟ್ಟು ೧೭ ಸೂತ್ರಗಳೊಂದಿಗೆ ಸಂಜ್ಞಾವಿಧಾನಂ ಮುಗಿಯುತ್ತದೆ.

## ತೆಲುಗು ವರ್ಣಮಾಲೆ

"ಸಂಸ್ಕೃತ, ಪ್ರಾಕೃತ ವ್ಯಾಕರಣ ಸಂಪ್ರದಾಯಗಳೆರಡನ್ನು ಅರಗಿಸಿಕೊಂಡಿರುವ ಆಂಧ್ರ ವೈಯಾಕರಣರು ವರ್ಣಮಾಲೆಯಲ್ಲಿರುವ ವರ್ಣಗಳ ಕ್ರಮವನ್ನು ಕುರಿತು ಅದಾವ ಸಂಪ್ರದಾಯವನ್ನು ಅನುಸರಿಸಿದ್ದಾರೋ ಖಚಿತವಾಗಿ ತೇಲಿಸಿ ಹೇಳುವುದು ಕಷ್ಟ"[೧೫] ಎಂಬ ಮಾತಿದೆ. ತೀರಾ ಸಂಕ್ಷಿಪ್ತವಾಗಿ ತೆಲುಗು ಭಾಷಾ ಸ್ವರೂಪವನ್ನು ನಿರೂಪಿಸಲು ಹೊರಟ ಕೇತನ ವರ್ಣಮಾಲೆಯನ್ನು ವಿವರಿಸಲಿಲ್ಲ; ಸೂಚಿಸಿದ್ದಾನಷ್ಟೆ.

ಆಂಧ್ರ ಭಾಷಾ ಭೂಷಣದಲ್ಲಿ ಒಂದೊಂದು ವ್ಯಾಕರಣ ವಿಭಾಗಕ್ಕೆ ಪ್ರತ್ಯೇಕ ಪ್ರಕರಣಗಳಿಲ್ಲ. ಆಂಧ್ರ ಶಬ್ದಚಿಂತಾಮಣಿಯಂತೆ ತೆಲುಗಿಗೆ ಪ್ರತ್ಯೇಕವಾದ ವ್ಯಾಕರಣ ಸಂಜ್ಞೆಗಳನ್ನಾಗಲಿ, ವರ್ಣ ಸಮುದಾಯಗಳನ್ನಾಗಲಿ ಹೇಳಲಿಲ್ಲ. ಅದರಲ್ಲೂ ತೆಲುಗು ಭಾಷೆಯಲ್ಲಿ ವರ್ಣಗಳೆಷ್ಟು, ಅವುಗಳಾವುವು- ಇತ್ಯಾದಿ ಪ್ರಶ್ನೆಗಳಿಗೆ ಕೇತನನ ಕೃತಿಯಲ್ಲಿ ಉತ್ತರ ದೊರೆಯುತ್ತಿಲ್ಲ. ಕೇವಲ ಎರಡೇ ಎರಡು ಪದ್ಯಗಳಲ್ಲಿ (೧೬ ಮತ್ತು ೧೭) ತೆಲುಗು ವರ್ಣ ಸಮಾಮ್ನಾಯವನ್ನು ಸಮೀಕರಿಸಿದ್ದಾನೆ; ಸಂಕ್ಷೇಪಿಸಿದ್ದಾನೆ. ಈ ವಿಷಯದಲ್ಲಿ ಅವನು ಸಂಸ್ಕೃತದ ಪಾಣಿನೀಯ ಮತ್ತು ಕಾತಂತ್ರ ವ್ಯಾಕರಣ ಸಂಜ್ಞೆಗಳನ್ನು ಅಳವಡಿಸಿ ಕೊಂಡಿದ್ದಾನೆ.

ಆದುಲು ಸ್ವರಮುಲು ನಚ್ಚುಲು
ಕಾದುಲೊಗಿ ವ್ಯಂಜನಮುಲು ಹಲ್ಲುಲು ನನಗಾ
ಮೇದಿನಿ ನೆಲ್ಲಿಡ ಜೆಲ್ಲುನು
ಕಾದುಲ ನೈದೈದು ಕೂರ್ಪನಗು ವರ್ಗಂಬುಲ್

(ಆದಿಗಳು ಸ್ವರ ಅಥವಾ ಅಚ್ ಸಂಜ್ಞೆಯುಳ್ಳವು. ಕಾದಿಗಳು ವ್ಯಂಜನ ಅಥವಾ ಹಲ್ ಸಂಜ್ಞೆಯುಳ್ಳವು. ಕಾದಿಗಳನ್ನು ಐದೈದು ವರ್ಗಗಳಲ್ಲಿ ಜೋಡಿಸತಕ್ಕದ್ದು).

'ಅದುಲು', 'ಕಾದುಲು' ಎಂಬಿವು ಕೇತನನ ವರ್ಣ ಸಮಾಮ್ನಾಯ ಪರಿಗಣನೆಯ ವಿಧಾನ ಸೂಚಿಗಳು. ಮೇಲಿನ ಪದ್ಯ ಸ್ವರ, ವ್ಯಂಜನಗಳ ಬಗ್ಗೆ ಹೇಳುತ್ತದೆ.

ಅಕಾರಾದಿ ವರ್ಣಗಳಿಗೆ ಕೇತನನು 'ಸ್ವರಗಳು', 'ಅಚ್ಚುಲು' ಎಂಬ ಎರಡು ಸಂಜ್ಞೆಗಳನ್ನು ವಿಧಿಸಿದ್ದಾನೆ; ಅಂತೆಯೇ ಕಕಾರಾದಿಗಳಿಗೆ 'ಹಲ್ಲುಲು', 'ವ್ಯಂಜನಗಳು' ಎಂಬ ಎರಡು ಸಂಜ್ಞೆಗಳನ್ನು ಹೇಳಿದ್ದಾನೆ. ತೆಲುಗು ಭಾಷೆಯ ಕೆಲವು ವ್ಯಾಕರಣಗಳಲ್ಲಿ ಬಳಕೆಯಾಗಿರುವ ಪ್ರಾಣ (ಸ್ವರ), ಪ್ರಾಣಿ (ವ್ಯಂಜನ) ಎಂಬ ಪರಿಭಾಷೆ ಕೇತನನಲ್ಲಿಲ್ಲ. ಸ್ವಯಂ ಪ್ರಕಾಶಿಸುವುವು ಸ್ವರಗಳು, ಅವನ್ನು ಅನುಸರಿಸುವಂತಹವೇ ವ್ಯಂಜನಗಳು. ಸ್ವರ ಸಾನ್ನಿಧ್ಯದಿಂದಲೇ ವ್ಯಂಜನ ನಿಲ್ಲುವುದು. ಆಗ ಮಾತ್ರ ಅದಕ್ಕೆ ನೆಲೆ, ಬೆಲೆ.

ತಮಿಳಿನ ಪ್ರಾಚೀನ ವ್ಯಾಕರಣ ಗ್ರಂಥವಾದ ತೊಲ್ಕಾಪ್ಪಿಯಂದಲ್ಲಿ ಸ್ವರಗಳಿಗೆ 'ಉಯಿರ್' (ಪ್ರಾಣ) ಎಂದೂ, ವ್ಯಂಜನಗಳಿಗೆ 'ಮಯ್' (ದೇಹ) ಎಂದೂ ಹೆಸರು.

ಕೇತನನು ನಿರೂಪಿಸಿದ ಅಚ್ ಮತ್ತು ಹಲ್ ಪಾಣಿನೀಯ ಸಂಜ್ಞೆಗಳು. ಸ್ವರ, ವ್ಯಂಜನ ಎಂಬಿವು ಕಾತಂತ್ರ ಸಂಜ್ಞೆಗಳು. "ಸಿದ್ಧೋವರ್ಣ ಸಮಾಮ್ನಾಯ:" (ಕಾತಂತ್ರ, ಸೂತ್ರ ೧) "ತತ್ರ ಚತುರ್ದ ಶಾದೌ ಸ್ವರಾಃ" (ಕಾತಂತ್ರ, ಸೂತ್ರ ೨); "ಕಾದೀನಿ ವ್ಯಂಜನಾನಿ" (ಕಾತಂತ್ರ, ಸೂತ್ರ ೯) ಎಂಬ ಸೂತ್ರಗಳಿಂದ ಕಾತಂತ್ರದ ಸ್ವರ ವ್ಯಂಜನ ಸಂಜ್ಞೆಗಳನ್ನು ವಿಧಿಸಲಾಗಿದೆ. 'ಕಾದೀನಿ' ಎಂಬ ಕಾತಂತ್ರದಲ್ಲಿರುವ ಮಾತೇ 'ಕಾದುಲು' ಎಂದು ಆಂಧ್ರ ಭಾಷಾ ಭೂಷಣದಲ್ಲಿ ಬಂದಿದೆ.

ಅದೇ ಸೂತ್ರ ೧೬ರ ಕೊನೆಯ ಚರಣದಲ್ಲಿ, "ಕಾದುಲ ನೈದೈದು ಕೂರ್ಪನಗುವರ್ಗಂಬುಲ್" ಎಂದು ವ್ಯಂಜನಗಳ ವಿಭಾಗ ಕ್ರಮವನ್ನು ಕೇತನ ಸೂಚಿಸಿದ್ದಾನೆ. ವರ್ಗೀಯ ವ್ಯಂಜನಗಳನ್ನು ಐದು ಐದು ಅಕ್ಷರಗಳಂತೆ ಐದು ಭಾಗಗಳನ್ನಾಗಿ ಮಾಡಿದ್ದಾನೆ. ಅದೇ ಕ,ಚ,ಟ,ತ,ಪ- ವರ್ಗಗಳು. ಇದೂ ಕೂಡ ಕಾತಂತ್ರದ ಪದ್ಧತಿಯೇ. ಕಾತಂತ್ರದಲ್ಲಿ 'ತೇ ವರ್ಗಾಃ ಪಂಚ, ಪಂಚ, ಪಂಚಃ' ಎಂದಿದೆ (ಕಾತಂತ್ರ, ಸೂತ್ರ ೧೨) ಈ ಸೂತ್ರವು ಕ. ಭಾ. ಭೂ.ದ ಸೂತ್ರ ೭ರ 'ವರ್ಗಾಸ್ತೇಮಾಂತಾಃ ಪಂಚಶಃ ಪಂಚ' ಎಂಬುದನ್ನು ನೆನಪಿಗೆ ತರುತ್ತದೆ. ಕೇತನನು ವರ್ಗೀಯ ವ್ಯಂಜನಾಕ್ಷರಗಳ ಸಂಖ್ಯೆಯನ್ನು ಹೇಳದೇ ಇದ್ದರೂ, ಅಲ್ಲಿ ಐದು ವರ್ಗಗಳಲ್ಲಿ ಐದು ಅಕ್ಷರಗಳಂತೆ ಒಟ್ಟು ೨೫ ವರ್ಗೀಯ ವ್ಯಂಜನಾಕ್ಷರಗಳು ತೆಲುಗು ಭಾಷೆಯಲ್ಲಿವೆ ಎಂಬುದು ನಿರ್ಧಾರವಾಗುತ್ತದೆ. ೧೭ನೆಯ ಪದ್ಯ ಅವರ್ಗೀಯ ವ್ಯಂಜನಾಕ್ಷರಗಳ  ಬಗ್ಗೆ ಮಾಹಿತಿ ನೀಡುತ್ತದೆ.

ಯರಲವಲುನು ಶಷಸಹಲುನು  
ನರಯುಗ ನಂತಸ್ಥಲೂಷ್ಮಲನಗಾ ಜೆಲ್ಲುನ್  
ಸರವಿ ನಿವೇ ವೇಳ್ಳು ವೆಟ್ಟುದು  
ದಿರಮುಗ ದಲ್ಲಕ್ಷಣಮುಲು ದೆಲಿಪೆದ ಜೋಟನ್.

ಮೇಲಿನ ಪದ್ಯದಿಂದ 'ಯರಲವ' ಗಳಿಗೆ ಅಂತಸ್ಥ ಎಂದೂ, 'ಶಷಸಹ' ಗಳಿಗೆ ಊಷ್ಮ ಎಂದೂ ಹೆಸರು. ಯ, ರ, ಲ, ವ, ಶ, ಷ, ಸ, ಹ ಗಳು ತೆಲುಗಿನ ಅವರ್ಗೀಯ ವ್ಯಂಜನಾಕ್ಷರಗಳೆಂದು ತಿಳಿದು ಬರುತ್ತದೆ. ಅವು ಒಟ್ಟು ೮. ವರ್ಗೀಯ ಮತ್ತು ಅವರ್ಗೀಯ ವ್ಯಂಜನಾಕ್ಷರಗಳು ತೆಲುಗು ಭಾಷೆಯಲ್ಲಿ ಒಟ್ಟು ೩೩ ಎಂದಾಯಿತು. ಇದು ನಾಗವರ್ಮನು ಹೇಳಿದ ಸಂಖ್ಯೆಗೆ ಸಮೀಪವಾಗಿದೆ. ನಾಗವರ್ಮನಂತೆ ಕೇತನನೂ ಸಂಸ್ಕೃತದ ವಿರಳ 'ಳ' ಕಾರದ ಬಗ್ಗೆ ಮೌನ ವಹಿಸಿದ್ದಾನೆ.

ಅಂತಸ್ಥ, ಊಷ್ಮ ಎಂಬ ಸಂಜ್ಞೆಗಳು ಸಂಸ್ಕೃತದ ಕಾತಂತ್ರ ಹಾಗೂ ಪ್ರಾತಿಶಾಖ್ಯ ಸಂಜ್ಞೆಗಳೇ ಆಗಿವೆ. ಹೋಲಿಸಿ ನೋಡಬಹುದು-

೧. ಅಂತಸ್ಥಾಯ ಯರಲವಾ: (ಕಾತಂತ್ರ, ಸೂತ್ರ ೧೬)

೨. ಊಷ್ಮಾಣ: ಶಷಸಹ: (ಕಾತಂತ್ರ, ಸೂತ್ರ ೧೭)

೧. ಯರಲವ ಏತೇ ಅಂತಸ್ಥಾ: (ಋಗ್ವೇದ ಪ್ರಾತಿಶಾಖ್ಯ ಪಟಲ ೧-೯)

೨. ಶಷಸಹ ಏತೇ ಊಷ್ಮಾಣ: (ಋಗ್ವೇದ ಪ್ರಾತಿಶಾಖ್ಯ ಪಟಲ ೧-೧೦)

ಕೇತನನ ಸಂಜ್ಞಾ ಪದ್ಧತಿ ವರ್ಣಸಮಾಮ್ನಾಯದ ವಿವರಣೆಯ ದೃಷ್ಟಿಯಿಂದ ತುಂಬ ಸಂಕ್ಷೇಪವಾಗಿದೆ. ಆಂಧ್ರಶಬ್ದ ಚಿಂತಾಮಣಿಯ ಕರ್ತೃವಾದರೂ ಸಂಸ್ಕೃತ ಪ್ರಾಕೃತಗಳು ಪ್ರಕೃತಿಗಳೆಂದೂ, ತೆಲುಗು ವಿಕೃತಿಯೆಂದೂ ವ್ಯಾಖ್ಯಾನಿಸಿ, ಸಂಸ್ಕೃತ, ಪ್ರಾಕೃತ ಆಂಧ್ರಭಾಷೆಗಳಿಗೆ ಪ್ರತ್ಯೇಕವಾದ ವರ್ಣ ಸಮಾಮ್ನಾಯವನ್ನು ಕಲ್ಪಿಸಿರುತ್ತಾನೆ. ತೆಲುಗು ಭಾಷೆಗೆ ಸಲ್ಲುವ ವರ್ಣಗಳನ್ನೂ ಶಾಸ್ತ್ರೀಯವಾಗಿ ಸುಸಂಬದ್ಧವಾಗಿ ನಿರೂಪಿಸಿದ್ದಾನೆ.

ಸಂಸ್ಕೃತ, ಪ್ರಾಕೃತ ಮತ್ತು ಅಚ್ಚ ತೆಲುಗು ವರ್ಣಮಾಲೆಗಳನ್ನು ನಿರೂಪಿಸಿರುವ ಕೆಲವು ತೆಲುಗು ವ್ಯಾಕರಣಗಳಿಗೆ ಹೋಲಿಸಿದರೆ ಕೇತನ ಏನೇನೂ ಹೇಳಿಲ್ಲವೆಂದು ಗೋತ್ತಾಗುತ್ತದೆ. ಚಿತ್ರಕವಿ ಪೆದ್ದನ (ಲಕ್ಷಣ ಸಾರ ಸಂಗ್ರಹ) ಮುಂತಾದವರು ಕೇತನನನ್ನೇ ಅನುಸರಿಸಿದ್ದಾರೆ. ಅಪ್ಪಕವಿ (ಅಪ್ಪಕವೀಯಮು) ಆಂಧ್ರಶಬ್ದ ಚಿಂತಾಮಣಿಯಂತೆ ವಿವರವಾಗಿ ನಿರೂಪಿಸಿದ್ದಾನೆ. ಅವನು ನಿರೂಪಿಸಿದ ತೆಲುಗು ಭಾಷೆಯ ವರ್ಣ ಸಂಜ್ಞೆ, ವರ್ಣೋತ್ಪತ್ತಿಸ್ಥಾನ, ಲೇಖನ ಚಿಹ್ನೆ, ವರ್ಗಾಕ್ಷರ ಭೇದ ಮುಂತಾದವು ನಿರ್ದಿಷ್ಟವಾದ ಮತ್ತು ವಿಸ್ತೃತವಾದ ಯೋಜನೆಗೆ ಒಳಪಟ್ಟಿವೆ.

ಸೂಕ್ಷ್ಮವಾಗಿ ಅವಲೋಕಿಸಿದರೆ, ಪ್ರಾಚೀನ ತೆಲುಗು ವ್ಯಾಕರಣದ ಯೋಜನೆ ಸಂಸ್ಕೃತ, ಪ್ರಾಕೃತ ಭಾಷೆಗಳ ಪ್ರಭಾವಕ್ಕೆ ಒಳಗಾಗಿರುವುದರಿಂದ ಒಂದು ರೀತಿಯಲ್ಲಿ ಅದು ಪರಾಧೀನವೆನ್ನುವಂತೆ ಕಂಡುಬರುತ್ತದೆ. ಕನ್ನಡ ವ್ಯಾಕರಣಗಳಿಗೂ ಈ ಮಾತು ಅನ್ವಯಿಸುವದಾದರೂ ಅವು ತೆಲುಗಿನಷ್ಟು ಪ್ರಭಾವಿತವಾಗಿಲ್ಲ ಎನ್ನಬೇಕು.

ಕೇತನನ ವರ್ಣ ಸಮಾಮ್ನಾಯವನ್ನು ಕುರಿತು ಹೇಳುತ್ತಾ "..... ಪ್ರಸಿದ್ಧವಾದ ವರ್ಣ ಸಮಾಮ್ನಾಯವನ್ನು ವಿವರಿಸುವುದೇಕೆ ಎಂದು ಬಿಟ್ಟು ಬಿಟ್ಟಿದ್ದಾನೆ. ಕನ್ನಡ ಲಾಕ್ಷಣಿಕರ ಪ್ರಭಾವದಿಂದಲೇ ಕೇತನ ಕೂಡ ವರ್ಣ ಸಮಾಮ್ನಾಯವನ್ನು ವಿವರಿಸಲಿಲ್ಲ"[೧೬] ಎಂದಿರುವುದು ಸರಿಯಲ್ಲ. ನಾಗವರ್ಮನ ಕರ್ಣಾಟಕ ಭಾಷಾ

ಭೂಷಣದ ವರ್ಣ ಸಮಾಮ್ನಾಯ ಇಷ್ಟು ಸಂಕ್ಷಿಪ್ತವಾಗಿಲ್ಲ ಎಂಬುದನ್ನು ನೆನಪಿಡಬೇಕು. ಕೇತನನ ವರ್ಣಮಾಲೆಯಿಂದ ತೆಲುಗು ವರ್ಣಗಳ ಬಗ್ಗೆ ಏನೂ ತಿಳಿಯುವುದಿಲ್ಲ. ಅವನು ನಿರೂಪಿಸಿದ ವರ್ಣಮಾಲೆ ಸಂಸ್ಕೃತಕ್ಕೆ ಮತ್ತು ಸಂಸ್ಕೃತ ಪದ ಮಿಶ್ರಿತ ಆಂಧ್ರಭಾಷೆಗೆ ಸರಿ ಹೋಗುವುದೇ ಹೊರತು ಅಚ್ಚ ತೆಲುಗು ಭಾಷೆಗಲ್ಲ. ಅವನಲ್ಲಿ ವರ್ಗೀಯ ಮತ್ತು ಅವರ್ಗೀಯ ವ್ಯಂಜನಾಕ್ಷರಗಳಲ್ಲಿ ಸ್ಪಷ್ಟತೆ ಇದೆ. ಆದರೆ ಸ್ವರಗಳಲ್ಲಿ ಅಸ್ಪಷ್ಟತೆ ಕಂಡುಬರುತ್ತದೆ. ಅವುಗಳ ಸಂಖ್ಯೆಯನ್ನು ನಿರ್ಧಾರ ಮಾಡುವುದು ಕಷ್ಟ. ಸಂಸ್ಕೃತದ ಪಾಣಿನೀಯ ಹಾಗೂ ಕಾತಂತ್ರದ ಪದ್ಧತಿಯನ್ನು ಸ್ವರ ವ್ಯಂಜನಗಳ ನಿರೂಪಣೆಯಲ್ಲಿ ಅನುಸರಿಸಿರುವುದು ಸ್ಪಷ್ಟ.

ತೆಲುಗಿನ ಅರ್ವಾಚೀನ ಕೃತಿಯಾದ (೧೯ನೆಯ ಶತಮಾನ) ಚಿನ್ನಯ ಸೂರಿಯ ಬಾಲ ವ್ಯಾಕರಣದಲ್ಲಿ "ತೆಲುಗು ನಕು ವರ್ಣಂಬುಲು ಮುಪ್ಪದಿಯಾರು" (ಬಾ.ವ್ಯಾ.ಸೂತ್ರ ೩) ಎಂದಿರುವುದರಿಂದ ತೆಲುಗು ಭಾಷೆಯಲ್ಲಿ ೩೬ ಅಕ್ಷರಗಳಿವೆ ಎಂದು ತಿಳಿದು ಬರುತ್ತದೆ.

ಅವುಗಳೆಂದರೆ- ಸ್ವರಗಳು : ಅ ಆ ಇ ಈ ಉ ಊ ಎ
ಏ ಐ ಒ ಓ ಔ ಅಂ ಅಃ ೧೪

ವರ್ಗೀಯ ವ್ಯಂಜನಗಳು: ಕ ಗ ಚೆ ಜ ಜೆ ಟ
ಡ ಣ ತ ದ ನ ಪ ಬ ಮ ೧೫

ಅವರ್ಗೀಯ ವ್ಯಂಜನಗಳು: ಯ ರ ಲ ವ ಸ ಹ ಳ ೦೭

ಒಟ್ಟು ೩೬

ಇವುಗಳಲ್ಲಿ 'c' (ಅರ್ಧಾನುಸ್ವಾರ) ತೆಲುಗಿನ ಎಲ್ಲ ಪ್ರಾಚೀನ ಕಾವ್ಯಗಳಲ್ಲೂ ಪ್ರಯೋಗಗೊಂಡಿವೆ. ಇದು ಇಂತಿಂತಹ ಪದಗಳಲ್ಲಿ ಇರುತ್ತದೆಂದು ಲಕ್ಷಣಕಾರರು ನಿರ್ದೇಶಿಸಿದ್ದಾರೆ. (ಉದಾ: ಇ c ಕ್, ಮೂ (ಡು). ಭಾಷಾ ವಿಜ್ಞಾನದ ಪ್ರಕಾರ ಹೇಳಬೇಕಾದರೆ ಮೂಲ ಪದಗಳಲ್ಲಿ 'ನ' ಕಾರ ಇರುವ ಕಡೆ ಅನಂತರ ಕಾಲದಲ್ಲಿ ಅನುನಾಸಿಕ ಉಚ್ಚಾರಣೆಯ ಸಂಕೇತವಾಗಿ ಅರ್ಧಾನುಸ್ವಾರ ಬಳಕೆಯಾಗಿರಬಹುದು (ಉದಾ : ಮೂನ್ಡು > ಮೂ (ಡು) ಆದರೆ ಈ ಅರ್ಧಾನುಸ್ವಾರಕ್ಕೆ ಪ್ರಾಚೀನ ಕಾವ್ಯಗಳಲ್ಲಿ ಉಚ್ಚಾರವಿಲ್ಲ; ಗುರುತ್ವವೂ ಇಲ್ಲ. ಪ್ರಾಸದಲ್ಲಿ ಮಾತ್ರ ಇದಕ್ಕೆ ಬೆಲೆ ಇದೆ. ಸಂಧಿಯಲ್ಲಿ 'ನ' ಕಾರಕ್ಕೆ ಆದೇಶವಾಗಿಯೂ ಈ ಅರ್ಧಾನುಸ್ವರಾ ಬರುತ್ತದೆ.

ತೆಲುಗಿನಲ್ಲಿ 'ಚೆ' (ಎರಡನೆಯ ಚ) ಮತ್ತು 'ಜೆ' (ಎರಡನೆಯ ಜ) ಇವೆ. ಇವುಗಳ ಉಚ್ಚಾರ 'ತ್ಸ' ಮತ್ತು 'ತ್ಜ' ಎಂಬಂತಿರುತ್ತದೆ. ('ಇವನ್ನು ದಂತ್ಯ ಚ ಮತ್ತು

ದಂತ್ಯ ಜ ಎನ್ನುವರು). ಸಂಸ್ಕೃತ ಪದಗಳಲ್ಲಿ ತಾಲವ್ಯ ಚ, ಜಗಳು ಬಳಕೆಯಾದರೆ ಅಚ್ಚ ತೆಲುಗು ಪದಗಳಲ್ಲಿ ದಂತ್ಯ ಚ ಜ ಗಳು ಬಳಕೆಯಾಗುತ್ತದೆ. ಅರ್ಧಾನು ಸ್ವಾರ ಜೆ ಮತ್ತು ಜೆ ಸೇರಿದ ಅಕ್ಷರಗಳು ಅಚ್ಚ ತೆಲುಗಿನಲ್ಲಿ ಬಳಕೆಯಾಗುತ್ತದೆ. ಆದರೂ ಬಾ. ವ್ಯಾ. ದ ಸೂತ್ರ ೪ರ ಪ್ರಕಾರ ಋ, ೠ, ಌ ೡ ವಿಸರ್ಗ, ಖ ಛ ಠ ಥ ಫ ಝ ಢ ಧ ಭ, ಙ, ಞ, ಶ ಷ -ಗಳು ಸಂಸ್ಕೃತ ಪದಗಳ ಜೊತೆ ಸೇರಿ ತೆಲುಗಿನಲ್ಲಿ ಬಳಕೆಯಾಗುತ್ತವೆ. ಹೀಗೆ ಆಂಧ್ರಭಾಷೆಯಲ್ಲಿ ಒಟ್ಟು ೫೫ (೩೬+೧೯) ವರ್ಣಗಳೆಂದು ವ್ಯಾಕರಣಗಳು ನಿರ್ದೇಶಿಸಿವೆ.

ಆದ್ಯ ಪ್ರಕೃತಿಯಾದ ಸಂಸ್ಕೃತದಲ್ಲಿ ವರ್ಣಗಳು ೫೦ ಎಂದೂ, ಪ್ರಾಕೃತದಲ್ಲಿ ೪೦ ಎಂದೂ ತೆಲುಗು ಭಾಷೆಯಲ್ಲಿ ೩೬ ಎಂದೂ ಆಂಧ್ರ ಶಬ್ದ ಚಿಂತಾಮಣಿ ಹೇಳಿದೆ (೧-೪). ಸಂಸ್ಕೃತ ಪ್ರಾಕೃತ ವರ್ಣಗಳನ್ನು ಚಿಂತಾಮಣಿಯ ಕರ್ತೃ ಇದಮಿತ್ಥಂ ಎಂದು ನಿರ್ಣಯಿಸದೆ ತೆಲುಗಿಗೆ ಇರುವ ೩೬ ವರ್ಣಗಳನ್ನು ಮಾತ್ರ ಪ್ರತ್ಯೇಕ ಕಾರಿಕೆಯಲ್ಲಿ ನಿರ್ದೇಶಿಸಿದ್ದಾನೆ. (ಆಂ. ಶ. ಚಿಂ. ೧-೫).

ಬಾಲ ಸರಸ್ವತಿಯು ತನ್ನ ಟೀಕುವಿನಲ್ಲಿ ವರ್ಣಗಳನ್ನು ನಿರ್ಣಯಿಸದೆ ಇದ್ದಾಗಲೂ ಋ ೠ ಌ ೡ ಐ ಔ ಞ ಙ ಶ ಷ- ಎಂಬ ಹತ್ತು ಅಕ್ಷರಗಳು ಪ್ರಾಕೃತದಲ್ಲಿ ಇಲ್ಲವೆಂದು ವಿವರಿಸಿದನು. (ಬಾಲ ಸರಸ್ವತೀಯಮು, ಪು. ೮) ವರರುಚಿ ಹೇಮಚಂದ್ರಾದಿಗಳ ವಚನಗಳೇ ಈ ಹೇಳಿಕೆಗೆ ಆಧಾರ.

ಆಂ. ಶ. ಚಿಂ. ಮೊದಲು ಬಾ. ವ್ಯ.ದ ವರೆಗೆ ಇರುವ ಸಾಂಪ್ರದಾಯಿಕ ವ್ಯಾಕರಣಗಳಲ್ಲಿ ಕೆಲವು ಸಂಸ್ಕೃತ, ಪ್ರಾಕೃತ ಮತ್ತು ಅಚ್ಚ ತೆಲುಗುಗಳಿಗೆ ಬೇರೆ ಬೇರೆ ವರ್ಣಮಾಲೆಯನ್ನು ಹೇಳಿವೆ. ಮತ್ತೆ ಕೆಲವು ತತ್ಸಮ, ತದ್ಭವ, ದೇಶ್ಯದ ಪದಗಳಿಂದ ಕೂಡಿದ ಆಂಧ್ರಭಾಷೆಗೆ ವರ್ಣ ಸಮಾಮ್ನಾಯವನ್ನು ನಿರ್ಣಯಿಸಿವೆ. ಅಂಥವರಲ್ಲಿ ಅನಂತನು ಒಬ್ಬನಾಗಿ ಕಾಣಬರುತ್ತಾನೆ. "ಸಂಸ್ಕೃತಕ್ಕೆ ಐವತ್ತು ವರ್ಣಗಳು" ಎಂದು ಹೇಳಿದ ಅನಂತನು ಎ-ಒ ಗಳ ಬಗೆಗೆ, ಅರ್ಧಾನುಸ್ವಾರ, ದಂತ್ಯ ಚಜಗಳ ಬಗೆಗ ಹೇಳಿಲ್ಲ. "ತೆಲುಗಿಗೆ ಱ-ಳ ಗಳೆರಡು ಅಧಿಕ" (ಅ.ಛಂ.IV ೧೨೭) ಎಂದು ತೆಲುಗು ಭಾಷೆಯಲ್ಲಿ ೫೨ ಅಕ್ಷರಗಳನ್ನು ಕಲ್ಪಿಸಿದ್ದಾನೆ. ರಾವಿಪಾಟಿ ಗುರುಮೂರ್ತಿಶಾಸ್ತ್ರಿಯವರು ತಮ್ಮ 'ತೆಲುಗು ವ್ಯಾಕರಣ' ಎಂಬಲ್ಲಿ (ವಾವಿಳ್ಳ ಪ್ರತಿ ೧೯೫೧) ಕ್ಷ ಕಾರವನ್ನು ಸೇರಿಸಿ, ೡ ಕಾರವನ್ನುಳಿದು ತೆಲುಗಿಗೆ ೫೬ ವರ್ಣಗಳೆಂದು ನಿರ್ದೇಶಿಸಿದ್ದಾರೆ. ಪ್ರೌಢ ವ್ಯಾಕರಣದಲ್ಲಿ ಸೀತಾರಾಮಾಚಾರ್ಯರು ೡ ಕಾರವನ್ನು ಸೇರಿಸಿ ಕ್ಷ ಕಾರವನ್ನುಳಿದು, ಶಕಟ ರೇಫೆಯನ್ನು ಕಳೆದು "ಆಂಧ್ರ ಭಾಷೆಗೆ ವರ್ಣಗಳು ೫೫" ಎಂದು ಸೂತ್ರೀಕರಿಸಿದ್ದಾರೆ. (ಪ್ರೌ. ವ್ಯಾ. ಸೂತ್ರ. ೧) ಶಕಟರೇಫೆಯನ್ನು ಅನೇಕರು ಸೇರಿಸದೆ

ಅದನ್ನು ಅಲ ಘುರಕಾರವೆಂದು ಹೇಳಿದ್ದು ಗಮನಾರ್ಹ. ಪ್ರಶ್ನೋತ್ತರಾಂಧ್ರ ವ್ಯಾಕರಣದ ಕರ್ತೃ ಪುದೂರಿ ಸೀತಾರಾಮಶಾಸ್ತ್ರಿಯವರು ೩೬ ವರ್ಣಗಳನ್ನು ಕುರಿತು ಹೇಳುತ್ತಾ ಶಕಟರೇಫೆಯನ್ನು ಬಿಟ್ಟುಬಿಟ್ಟರು. ನನ್ನಯ ಪೂರ್ವಯುಗದ ಶಾಸನಗಳಲ್ಲಿಯೇ ಈ ಎರಡು ವರ್ಣಗಳಲ್ಲಿ ವ್ಯತ್ಯಾಸ ಕಂಡು ಬರುತ್ತದೆ. ಹೀಗೆ ಅನಂತ, ಅಪ್ಪಕವಿ ಅಹೋಬಲ ಪಂಡಿತಾರಿ ವೈಯಾಕರಣರ ಪ್ರಕಾರ ತೆಲುಗು ಭಾಷೆಯಲ್ಲಿ ೩೬ ವರ್ಣಗಳೆಂದು ತಿಳಿದು ಬಂದಿದೆ. ಅವು ಅಚ್ಚ ತೆಲುಗು ಅಕ್ಷರಗಳು, ಕನ್ನಡದ ಶುದ್ಧಗೆ ಇದ್ದಂತೆ.

ಆಧುನಿಕ ವ್ಯಾಕರಣಗಳು ಕೆಲವು ವರ್ಣ ಸಂಖ್ಯೆಯನ್ನು ಬೆಳಸಿವೆ. 'ಆಂಧ್ರ ಭಾಷಾನುಶಾಸನ'ವೆಂಬ ವ್ಯಾಕರಣ ವರ್ಣಗಳು ೫೮ ಎಂದಿದೆ.

ಕನ್ನಡ ಮತ್ತು ತೆಲುಗು ವರ್ಣ ಸಮಾಮ್ನಾಯಗಳಲ್ಲಿ ಬಳಕೆಯಾಗಿರುವ ಕೆಲವು ಸಂಜ್ಞೆಗಳನ್ನು ಈ ಎರಡು ಭಾಷೆಗಳ ವ್ಯಾಕರಣ ಸಂಪ್ರದಾಯದ ಬೆಳಕಿನಲ್ಲಿ ತೌಲನಿಕವಾಗಿ ವಿವೇಚಿಸಿದಾಗ ಇನ್ನೂ ಅನೇಕ ವಿಷಯಗಳು ಗೋಚರವಾಗುತ್ತವೆ.

**ಸ್ವರಗಳು:**

ಪಾಣಿನಿಯ ಸೂತ್ರಗಳ ಪ್ರಕಾರ ಸ್ವರಗಳು ೯. ಕಾತಂತ್ರ ಸಂಪ್ರದಾಯದಲ್ಲಿ ಸ್ವರಗಳು ೧೪. ಕನ್ನಡ ಮತ್ತು ತೆಲುಗು ವ್ಯಾಕರಣಗಳು ಸಂಸ್ಕೃತ ಸ್ವರಗಳನ್ನು ನಿರೂಪಿಸುವಾಗ ಕಾತಂತ್ರವನ್ನೇ ಅನುಸರಿಸಿವೆ. ಆದರೆ ತೆಲುಗಿನಲ್ಲಿ ಪಾಣಿನೀಯ ಪ್ರತ್ಯಾಹಾರದಂತೆ 'ಅಚ್' ಮತ್ತು 'ಹಲ್' ಎಂಬ ಪರಿಭಾಷೆಯನ್ನು ಸ್ವೀಕರಿಸಿದ್ದಾರೆ. ಪಾಣಿನೀಯ ಪ್ರತ್ಯಾಹಾರದಲ್ಲಿ 'ಎ ಒ' ಗಳು ಸೇರದೇ ಇದ್ದರೂ ತೆಲುಗು ವರ್ಣ ಮಾಲೆಯನ್ನು ನಿರೂಪಿಸುವಾಗ 'ಅಚ್' ಎಂದೇ ವ್ಯವಹರಿಸಿದ್ದು ಗಮನಾರ್ಹ.

ಸಂಸ್ಕೃತದ ಸ್ವರಗಳಿಗೆ ತೆಲುಗು ವ್ಯಾಕರಣಕಾರರು ಕೆಲವು ಅಕ್ಷರಗಳನ್ನು ಸೇರಿಸಿದ್ದು ಕೆಲವನ್ನು ಕಳೆದಿದ್ದು ಸಹಜ. ಸ್ವರಗಳಲ್ಲಿ ಋ ೠ ಌ ೡ ಗಳನ್ನು ವಿಸರ್ಗವನ್ನು ಅಚ್ಚ ತೆಲುಗಿನಲ್ಲಿ ಕಳೆಯಬೇಕೆಂಬುದು ಚಿನ್ನಯ ಸೂರಿ ಮುಂತಾದವರ ಅಭಿಮತ.

ಹ್ರಸ್ವ 'ಎ' ಮತ್ತು 'ಒ' ದೇಶೀಯಾಕ್ಷರಗಳು. ತೆಲುಗಿನಲ್ಲಿ ಇಂತಹವನ್ನು ಅಪನಮುಲು ಎನ್ನುತ್ತಾರೆ. ಅನುಸ್ವಾರ ಮತ್ತು ಅರ್ಧಾನುಸ್ವಾರಗಳನ್ನು ಸ್ವೀಕರಿಸಿರುವುದು ಕಂಡು ಬಂದಿದೆ. ಆದರೆ ಆಧುನಿಕ ಭಾಷಾ ವಿಜ್ಞಾನದ ಪ್ರಕಾರ ಇವೆರಡು ವರ್ಣಗಳಿಲ್ಲ. ಆದುದರಿಂದ ತೆಲುಗು ವರ್ಣಮಾಲೆಯ ಸ್ವರಗಳಿಗೂ ಕನ್ನಡ ವರ್ಣಮಾಲೆಯ ಸ್ವರಗಳಿಗೂ ಏನೂ ವ್ಯತ್ಯಾಸವಿಲ್ಲ. ಸ್ವರಗಳಲ್ಲಿರುವ ಹ್ರಸ್ವ ದೀರ್ಘಗಳಿಗೆ ಸವರ್ಣಗಳೆಂದು ಹೆಸರು. ಈ ಪರಿಭಾಷೆ ಕನ್ನಡದಲ್ಲೂ ಪರಿಚಿತವೇ.

ತೆಲುಗು ಭಾಷೆಯಲ್ಲಿ ಸ್ವರಗಳನ್ನು ಉಚ್ಚಾರಣ ಪ್ರಯತ್ನದ ಹಿನ್ನೆಲೆಯಲ್ಲಿ ೧. ತಾಲವ್ಯಸ್ವರ ೨. ತಾಲವ್ಯೇತರ ಸ್ವರ ಎಂದು ಎರಡು ಭಾಗಗಳನ್ನಾಗಿ ಮಾಡಿರುವುದನ್ನು ಕಾಣಬಹುದು.

ತಾಲವ್ಯ ಸ್ವರಗಳಿಗೆ ಉದಾ: ಇ ಈ ಎ ಏ ಗಳು; ತಾಲವ್ಯೇತರ ಸ್ವರಗಳಿಗೆ ಉದಾ: ಅಆ ಉಊ ಒಓಔ. ಈ ತರಹದ ವಿಭಜನೆಯನ್ನು ಸಂಸ್ಕೃತದ ವರ್ಣಮಾಲೆಯಲ್ಲಿ ಮಾಡಿರುವುದುಂಟು. ಇನ್ನೂ ಬೇರೆ ರೀತಿಯ ವಿಭಜನೆಗಳಿವೆ. ಉದಾಗೆ: ೧. ಸಮಾನಾಕ್ಷರ, ೨. ಸಂಧ್ಯಕ್ಷರ. ಆದರೆ ಕನ್ನಡದಲ್ಲಿ ಇಂಥ ವಿಭಜನೆ ಕಾಣದಿದ್ದರೂ ಸಮಾನಾಕ್ಷರಗಳ ಸೂಚನೆಯಿದೆ. ಹ್ರಸ್ವ, ದೀರ್ಘಾಕ್ಷರ, ಸವರ್ಣ, ನಾಮಿ, ಸಂಧ್ಯಕ್ಷರ -ಮುಂತಾದ ಪರಿಭಾಷೆಗಳ ಬಳಕೆ ಇದೆ.

ಸಂಸ್ಕೃತದ ಸ್ವರಗಳಾದ ಋ ೠ ಌ ಗಳಿಗೆ ಕ್ಲೀಬಗಳೆಂದು ಹೆಸರು. ಈ ಮೂರು ಸ್ವರಗಳು ಕನ್ನಡ-ತೆಲುಗು ಭಾಷೆಗಳಲ್ಲಿಲ್ಲ. ಅವು ರು ರೂ ಲು ವ್ಯಂಜನಗಳಂತೆ ಉಚ್ಚರಿಸಲ್ಪಡುತ್ತವೆ. ಮೇಲಾಗಿ ಸಂಸ್ಕೃತದ ಈ ಅಕ್ಷರಗಳನ್ನೊಳಗೊಂಡ ಶಬ್ದಗಳಿಗೆ ತದ್ಭವಗಳಿವೆ. ಉದಾ: ಋಷಿ> ರಿಸಿ; ವೃಷಭ> ಬಸವಂ ಎಂದು. ಅವುಗಳನ್ನು ಕ್ಲೀಬಾಕ್ಷರವೆನ್ನಲು ಕಾರಣ ಅಲ್ಲಿಯ ಉಚ್ಚಾರಣೆಯಲ್ಲಿ ದೃಢತೆಯಿಲ್ಲವಾದುದರಿಂದ ಇವುಗಳನ್ನು ಆಂಗ್ಲಭಾಷೆಯಲ್ಲಿ Neutral Vowels ಎನ್ನುತ್ತಾರೆ. ಇದರ ಬಗ್ಗೆ ಕನ್ನಡ ವ್ಯಾಕರಣಗಳಲ್ಲಿ ಉಲ್ಲೇಖವಿಲ್ಲ.

**ಸಂಧ್ಯಕ್ಷರಗಳು:**

ಕನ್ನಡ ಮತ್ತು ತೆಲುಗು ಭಾಷೆಗಳೆರಡರಲ್ಲಿ ಏ ಐ ಓ ಔ -ಗಳು ಸಂಧ್ಯಕ್ಷರಗಳು. ಇವು ಎರಡು ಸ್ವರಗಳ ಸೇರುವಿಕೆಯಿಂದ ಏರ್ಪಟಿದ್ದರೂ ಒಂದೇ ಸ್ವರವಾಗಿ ಪರಿಗಣಿಸಿ ಉಚ್ಚರಿಸಲಾಗುತ್ತದೆ- ಎಂಬ ಕಾರಣದಿಂದ 'ಸಂಧ್ಯಕ್ಷರ' ಎಂಬ ಸಂಜ್ಞೆ ಏರ್ಪಟ್ಟಿದೆ. ಏ ಓಗಳು ಸಂಧ್ಯಕ್ಷರಗಳು ಹೌದೋ ಅಲ್ಲವೋ ಎಂಬ ವಿಷಯದ ಬಗ್ಗೆ ವಿದ್ವಾಂಸರಲ್ಲಿ ಜಿಜ್ಞಾಸೆ ಇದೆ. ಇದರ ಬಗ್ಗೆ ಚರ್ಚೆ ಸಾಕಷ್ಟು ನಡೆದಿದ್ದರೂ ವ್ಯಾಕರಣದ ಪರಿಭಾಷೆಯಲ್ಲಿ ಈ ನಾಲ್ಕು ಅಕ್ಷರಗಳನ್ನು ಸಂಧ್ಯಕ್ಷರಗಳೆಂದೇ ಪರಿಗಣಿಸಲಾಗಿದೆ.

ಭೂಷಣಕಾರ "ಸಂಧ್ಯಕ್ಷರಾಣಿ ದೀರ್ಘಾಣಿ" ಎಂದು ಮಾತ್ರ ಹೇಳಿದ್ದಾನೆ. ಅ +ಇ = ಏ; ಅ+ ಉ= ಓ; ಅ+ ಏ =ಐ; ಅ+ ಓ= ಔ ಎಂಬ ನಿರೂಪಣೆಯಿಂದಾಗಿ ಇವುಗಳನ್ನು ಸಾಧಿಸುವುದು ಪ್ರಾಚೀನ ಸಂಸ್ಕೃತದ ಪದ್ಧತಿ.

ಇವುಗಳನ್ನು ತೆಲುಗು ಭಾಷೆಯಲ್ಲಿ 'ವಕ್ರ ಮತ್ತು ವಕ್ರತಮ' ಎಂದು ಕರೆದಿರುವುದು ವಿಶೇಷ. "ಏಓಧೋ ವಕ್ರಃ ವಕ್ರತಮ ಐಜ್' ಎಂಬ ಸೂತ್ರದಿಂದ ( ಆಂ. ಶ. ಚಿಂ ಸಂಜ್ಞೆ ೨೭ ಮತ್ತು ೨೮) ಏ ಓಗಳಿಗೆ ವಕ್ರ ಸಂಜ್ಞೆಯನ್ನು, ಐಔಗಳಿಗೆ ವಕ್ರತಮ ಸಂಜ್ಞೆಯನ್ನು ವಿಧಿಸಲಾಗಿದೆ. ಪಾಣಿನೀಯ ಪ್ರತ್ಯಾಹಾರದಿಂದ ಎ ಓ ಎಂದರೆ ಏ ಓಗಳು ಐಚ್ ಎಂದರೆ ಐ ಔಗಳು. ಆದರೆ ಅಲ್ಲಿ ವಕ್ರ, ವಕ್ರತಮ, ಸಂಜ್ಞೆ ಇಲ್ಲ. ಅಲ್ಲದೆ ಅವು ಇತರ ಸಂಸ್ಕೃತ ವ್ಯಾಕರಣಗಳಲ್ಲಿ ಕೂಡ ಕಾಣುವುದಿಲ್ಲ. ವರರುಚಿ, ಹೇಮಚಂದ್ರ, ವಾಲ್ಮೀಕಿ - ಈ ಮೊದಲಾದವರು ರಚಿಸಿದ ಪ್ರಾಕೃತ ವ್ಯಾಕರಣಗಳಲ್ಲಾಗಲಿ, ಕರ್ನಾಟಕ ವ್ಯಾಕರಣ ಗ್ರಂಥಗಳಲ್ಲಾಗಲಿ ಈ ಸಂಜ್ಞೆಗಳಿಲ್ಲ.

ವಕ್ರಮು ಎಂದರೆ ವಕ್ರರಾಗಿರುವುದು ಎಂದು ಅರ್ಥ. ವಕ್ರತಮ ಎಂದರೆ ಹೆಚ್ಚಾಗಿ ವಕ್ರವಾಗಿರುವುದು. ಅದು ಲಿಪಿಯ ದೃಷ್ಟಿಯಿಂದ ('ಏಏ- ವಕ್ರ; ಐಔ- ವಕ್ರತಮ) ಕಲ್ಪಿಸಿದ ಪರಿಭಾಷೆ ಎಂದು ಕಾಣುತ್ತದೆ. ಸಂಧ್ಯಕ್ಷರಗಳ ಬಗ್ಗೆ ಕಾತಂತ್ರದಲ್ಲಿ ತಿಳಿಸಿದೆ. ಅಲ್ಲಿ "ಏಕಾರಾದೀನಿ ಸಂಧ್ಯಕ್ಷರಾಣಿ" ಎಂಬ ಸೂತ್ರವಿದೆ (೧-೧-೮). ಕನ್ನಡದ ಶಬ್ದಸ್ಮೃತಿಯಲ್ಲೂ "ಸಂಧ್ಯಕ್ಷರಮೆನೆ ಯಥಾರ್ಥಧಿಂ ವ್ಯವಹರಿಸುಗುಮಾ ಏಕಾರಮ್ ಆದಿಯಾಗಿ" (ಶ. ಸ್ಮೃ. ಸೂತ್ರ ೩) ಎಂದು ತಿಳಿಸಿದೆ. ನಾಗವರ್ಮನ ಭಾ.ಭೂ.ದ ಸೂತ್ರದಲ್ಲಿ ಇದರ ಬಗ್ಗೆ ಏನನ್ನೂ ಹೇಳಿಲ್ಲ. ಕಾತಂತ್ರ ಪರಿಭಾಷಾಸೂತ್ರ ವೃತ್ತಿಯಲ್ಲಿ "ನಿತ್ಯಂ ಸಂಧ್ಯಕ್ಷರಾಣಿ ದೀರ್ಘಾಣಿ" ಎಂದಿದೆ. ಕೇಶಿರಾಜನ ಶಬ್ದಮಣಿದರ್ಪಣದಲ್ಲಿ "ಪರ ಸಂಧ್ಯಕ್ಷರದಂತಿರೆ......... ಎಂಬುದರಲ್ಲಿ ನಾಲ್ಕರ ಖಚಿತ ನಿಲುವನ್ನು ತಾಳಿದೆ. (ಶ.ಮ.ದ ಸೂತ್ರ ೧೧). ತೆಲುಗಿನ ಕೇತನನಲ್ಲಿ ಇವುಗಳ ಮಾಹಿತಿ ಇಲ್ಲ.

ದೇಶೀಯಾಕ್ಷರಗಳು (ಅದನಮುಲು); ಚಿನ್ನಯ ಸೂರಿಯ ಬಾಲವ್ಯಾಕರಣದಲ್ಲಿ ಅಚ್ಚ ತೆಲುಗಿನ ವರ್ಣಮಾಲೆಯ ವಿವರಣೆಯಲ್ಲಿ ತೆಲುಗಿನ ದೇಶೀಯಾಕ್ಷರಗಳು ಐದು. ಅವುಗಳು ೧. ಎ; ೨. ಒ; ೩.C (ಅರ್ಧಬಿಂದು); ೪ ಚಿ ; ೫. ಜಿ. ಇವುಗಳಿಗೆ ಅದನಮುಲು (ಹೆಚ್ಚಾಗಿರುವುವು) ಎದು ಹೆಸರು. ಕನ್ನಡದಲ್ಲಿ ಱ, ೞ, ಳ, ಎ, ಒ ಗಳು ಇದ್ದಂತೆ. ತೆಲುಗಿನಲ್ಲಿ ಹ್ರಸ್ವ ಎ ಮತ್ತು ಒಗಳು ಮಾತ್ರ ಕನ್ನಡ ದೇಶೀಯಾಕ್ಷರಗಳಿಗೆ ಸಂವಾದಿಯಾಗಿವೆ. ಉಳಿದವುಗಳಲ್ಲಿ ವ್ಯತ್ಯಾಸವಿದೆ.

**ಪರುಷ-ಸರಳ-ಸ್ಥಿರಗಳು:**

ತೆಲುಗಿನಲ್ಲಿ ವರ್ಗ ಪ್ರಥಮಾಕ್ಷರಗಳಾದ ಕಚಟತಪಗಳನ್ನು ಪರುಷಗಳೆಂದೂ, ತೃತೀಯಾಕ್ಷರಗಳಾದ ಗಜಡದಬಗಳಿಗೆ ಸರಳಗಳೆಂದೂ ಕರೆಯುವುದು ವಾಡಿಕೆ. ಪರುಷ ಸರಳಾಕ್ಷರಗಳಲ್ಲದೆ ಉಳಿದ ವ್ಯಂಜನಗಳಿಗೆ ಸ್ಥಿರಮು ಎಂದು ಸಂಜ್ಞೆ, ಪರುಷವೆಂದರೆ

ಕಠಿಣವೆಂದು, ಸರಳವೆಂದರೆ ಸುಲಭ, ಸ್ಟೈಜ ಎಂದು ಅರ್ಥವಾಗುತ್ತದೆ. ಪರುಷಕ್ಕೆ ಶ್ವಾಸಾಕ್ಷರ (Surds) ಎಂದು ಸರಳ ಸಂಜ್ಞೆಗೆ ನಾದಾಕ್ಷರ (Soner) ಎಂದು ಭಾಷಾ ವಿಜ್ಞಾನದಲ್ಲಿ ಬಳಕೆಯಾಗಿದೆ. ಕೇತನ ಪರುಷ, ಸರಳ ಸಂಜ್ಞೆಗಳನ್ನು ಬಳಸದೆ ಕಚಟತಪ, ಗಜಡದಬ ಎಂದೇ ಬಳಸಿದ್ದಾನೆ. ಅಂ. ಶ. ಚಿಂ. "ಕಚಟತಪಾ: ಪರುಷಾಖ್ಯಾ ಗಜಡದಬಾಸ್ತು ಸರಳಾಃ, ಸ್ಥಿರಾ ಇತರೇ" (ಸಂಜ್ಞಾ ೩೭) ಎಂದಿದೆ. ಇದನ್ನೇ ಬಾಲವ್ಯಾಕರಣ ಅನುಸರಿಸಿದೆ.

**ಯ-ರ-ಲ-ವ ಗಳು:**

ಆಂಧ್ರ ವ್ಯಾಕರಣಗಳಲ್ಲಿ ಯರಲವಗಳು 'ಲಘು'; ಅಲಘು'ಗಳೆಂದು ಎರಡು ವಿಧ. ಕನ್ನಡದಲ್ಲಿ ಅನುನಾಸಿಕ, ಅನನುನಾಸಿಕಗಳು ಇದ್ದಂತೆ. ಹರಿ + ಅತಡು ಹರಿಯತಡು ಎಂಬಲ್ಲಿಯ 'ಯ' ಕಾರವು ಲಘು. ಪದ ಮಧ್ಯದಲ್ಲಿ ಬರುವ 'ಯ' ಕಾರವು ಲಘು: ಉದಾ: ಕಾಯ, ಮಾಯ, ಪೋಯ ಇತ್ಯಾದಿ. ಅಂತೆಯೇ 'ರ' ಕರ ಲಘು. ಉದಾ: ಪೆರುಗು, ಕರಗು- ಇತ್ಯಾದಿ. ಆದರೆ ಶಕಟ ರೇಫುಯ 'ಱ' ಕಾರವು ಅಲಘು. 'ಲ' ಕಾರ ಲಘು. ಉದಾ: ತಲ, ನೆಲ, ಪಲ- ಇತ್ಯಾದಿ. ಇನ್ನು ಬಹುವಚನದ ರ; ಡ ಕಾರಗಳಿಗೆ ಆದೇಶವಾಗಿ ಬರುವ 'ಳ' ಕಾರವು ಅಲಘು. ಉದಾ: ಏಳುಲು, ನೀಳುಲು, ತಾಳ್ಲು ಇತ್ಯಾದಿ. ಪಕಾರಕ್ಕೆ ಆದೇಶವಾಗಿ ಬರುವ 'ವ' ಕಾರವು ಕೂಡ ಲಘು ಆಗಿರುತ್ತದೆ. ಉದಾ: ನಿದ್ರ ಪೋಯ ನಿದ್ರಪೋಯೆ. ಪದಗತವಾದುವು ಅಲಘು. ಉದಾ: ವಾಡು, ವಂಕಾಯ ರೇಖೆ 'ಱ' ಕಾರದಲ್ಲಿ ಒಂದು ಲಘು ಮತ್ತು ಅಲಘು.

ಕನ್ನಡ ಮತ್ತು ತಮಿಳು ವೈಯಾಕರಣರು ಹೇಳದ ಈ ಕೆಲವು ಪರಿಭಾಷೆಗಳನ್ನು ತೆಲುಗರು ಸಂಸ್ಕೃತ ಪ್ರಾಕೃತ ವ್ಯಾಕರಣ ಪ್ರಭಾವದಿಂದ ಬಳಸಿದ್ದಾರೆ. ಯ ಲ ವ ಗಳು ಅನುನಾಸಿಕ ಹಾಗೂ ಅನನುನಾಸಿಕಗಳೆಂದು ಕನ್ನಡ ವೈಯಾಕರಣರಾದ ನಾಗವರ್ಮ ಮತ್ತು ಕೇಶಿರಾಜರು ಹೇಳಿರುತ್ತಾರೆ. ಇದು ತೆಲುಗಿನಲ್ಲಿಲ್ಲ.

**ಶಬ್ದಸ್ಮೃತಿ:** ಯ ವ ಲ ಮ ನನುನಾಸಿಕಮುಂ ಮತ್ತನುನಾಸಿಕಮುಂ (ಸೂತ್ರ ೫೫)

**ಭಾಷಾಭೂಷಣಂ: ವಿಭಾಷಯಾಯವಲಾ: (ಸೂತ್ರ ೯)**

ಯವಲಾ ಇತ್ಯೇತೇ ವರ್ಣಾಃ ವಿಕಲ್ಪೇನ ಅನುನಾಸಿಕ ಸಂಜ್ಞಾ ಭವಂತಿ

**ಶಬ್ದಮಣಿದರ್ಪಣ:** ಅನುನಾಸಿಕಮುಂ ಯವಲಂ

ಅನನುನಾಸಿಕಮುಂ ದಲ್ ಎಂಬರ್ (ಸೂತ್ರ ೨೬)

"ಕನ್ನಡದಲ್ಲಿ ಈ ಅನುನಾಸಿಕ ಮತ್ತು ಅನನುನಾಸಿಕ ಯವಲಗಳನ್ನು ಸೂಚಿಸಲು ಬೇರೆ ಬೇರೆಯಾದ ಲಿಪಿ ರೂಪಗಳು ಹುಟ್ಟಿಕೊಂಡಿಲ್ಲ. ಉಚ್ಚಾರ ರೀತಿಯಲ್ಲಿ

ವ್ಯತ್ಯಾಸವನ್ನು ಕಂಡುಕೊಂಡರೂ ಅದಕ್ಕೆ ಪ್ರತ್ಯೇಕವಾದ ವರ್ಣತ್ವವನ್ನು ಕಲ್ಪಿಸಿಕೊಳ್ಳದುದೆ ಇದಕ್ಕೆ ಕಾರಣ"[೧೭] ಆದರೆ "................. ಮಾರ್ಗ ಕಾವ್ಯಗಳನ್ನು ನಕಲು ಮಾಡಿದ (ಓಲೆಯ) ಪ್ರತಿಗಳಲ್ಲಿ ಅನುನಾಸಿಕ ಯ-ವ-ಲ ಗಳನ್ನು ಸೂಚಿಸಲು ಯಾವುದಾದರೊಂದು ವಿಶೇಷ ಚಿಹ್ನೆಯನ್ನು ಬಳಸುತ್ತಿದ್ದರೆನ್ನಬಹುದು"[೧೮]

**ಅನುಸ್ವಾರ, ಬಿಂದು: "ಬಿಂದುರನುಸ್ವಾರ:" (ಆಂ.ಶ.ಚಿಂ. ಸಂಜ್ಞೆ ೩.೨)**

ಈ ಸೂತ್ರವು ಅನುಸ್ವಾರಕ್ಕೆ ಒಂದು ಸಂಜ್ಞೆಯನ್ನು ವಿಧಿಸಿದೆ. ಸಂಸ್ಕೃತದ ಪಾಣಿನೀಯದಲ್ಲಿ ಅನುಸ್ವಾರಕ್ಕೆ ಬಿಂದುವೆಂಬ ವ್ಯವಹಾರವಿಲ್ಲ. ಕಾತಂತ್ರದಲ್ಲಿ ಅನುಸ್ವಾರವೆಂದೇ ವ್ಯವಹಾರವಿದೆ. ಹೇಮಶಬ್ದಾನು ಶಾಸನದಲ್ಲಿ ಅನುಸ್ವಾರವನ್ನು ಬಳಸಿದೆ. ಅಲ್ಲಿ "ಮೋನುಸ್ವಾರ:" ಎಂಬ ಸೂತ್ರವಿದೆ. ಆದರೆ ವಾಲ್ಮೀಕಿ ಪ್ರಾಕೃತ ವ್ಯಾಕರಣದಲ್ಲಿ ಅನುಸ್ವಾರಕ್ಕೆ ಬಿಂದು ಪದ ವ್ಯವಹಾರವಿದೆ. 'ಬಿಂದುಲ್' ಎಂಬುದು ಅಲ್ಲಿಯ ಸೂತ್ರ (ವಾಲ್ಮೀಕಿ ೧-೧-೪೦).

ತೆಲುಗು ವ್ಯಾಕರಣದಲ್ಲಿ ಮೊದಲಿನಿಂದಲೂ ಈ ಬಿಂದು ಪದ ವ್ಯವಹಾರವಲ್ಲಿದೆ. ಕೇತನ ರಚಿಸಿದ ಆಂ. ಭಾ.ಭೂ.ದಲ್ಲಿ ಬಿಂದು (ಪದ್ಯ ೫೬), ಅರಬಿಂದು (ಪದ್ಯ ೫೮), ನೆಱ ಬಿಂದು (ಪದ್ಯ ೫೮) ಎಂಬ ಮೂರು ಪದಗಳನ್ನು ಬಳಸಿದೆ. ಇದಲ್ಲದೆ 'ಸುನ್ನ' (ಸೊನ್ನೆ) ಎಂಬ ವ್ಯವಹಾರವಿದೆ. ಅಲ್ಲದೆ ಪೆದ್ದನನ ಕಾವ್ಯಾಲಂಕಾರದಲ್ಲಿಯೂ ಬಿಂದು ಪದವಿದೆ. ಅಥರ್ವಣ ಕೃತಿಯಾದ ತ್ರಿಲಿಂಗ ಶಬ್ದಾನುಶಾಸನದಲ್ಲಿ ಕೂಡ "ವಾಹಲೋ ಬಿಂದು ರಿಷ್ಯತೇ" ಎಂದು ಬಳಸಿದೆ.

ಕರ್ನಾಟಕ ವ್ಯಾಕರಣ ಕೃತಿಗಳಲ್ಲಿ ಬಿಂದು ಪ್ರಸ್ತಾವನೆ ಇದೆ. ಭೂಷಣದಲ್ಲಿ 'ಅನುಸ್ವಾರೋ ಬಿಂದುಃ" (ಸೂತ್ರ ೧೪) ಎಂದು, ಶ.ಮ.ದ ಸೂತ್ರ ೧೫ರಲ್ಲಿ "ಬಿಂದುಮನುಸ್ವಾರಂ ತಾನೆಂದಕ್ಕುಂ ಸೊನ್ನೆ ಮುತ್ತುಮೋಲ್ ವೃತ್ತತೆಯಿಂ ಸಂದಿರ್ಪುದು" ಎಂದು ಹೇಳಿದೆ.

## ಅಡಿಟಿಪ್ಪಣಿ

೧. ಬಿ. ಪುರುಷೋತ್ತಂ : ತೆಲುಗು ವ್ಯಾಕರಣ ವಿಕಾಸಮು, ಭಾಗ ೧, ಪು. ೭.

೨. "These are pure grammatical abstractions devised in order to round off the alphabet to greater symmetry" - William Dwight Whitney, A Sanskrit Grammar, P. 22.

೩. "Some of the Hindu grammarians add to the alphabet along ೄ but this is only for the sake of symmetry, since the sound aoes not occur in a single genuine word in the language", Ibid. P. 10.

೪. ಡಾ. ಪಿ. ಶ್ರೀಕೃಷ್ಣಭಟ್ : ಕನ್ನಡ ವ್ಯಾಕರಣ ಪರಂಪರೆಯ ಮೇಲೆ ಸಂಸ್ಕೃತದ ಪ್ರಭಾವ, ಪು. ೧೧೬.

೫. ಎಂ.ವಿ. ಸೀತಾರಾಮಯ್ಯ : ಪ್ರಾಚೀನ ಕನ್ನಡ ವ್ಯಾಕರಣಗಳು, ಪು. ೧೧೬.

೬. ಎಂ.ವಿ. ಸೀತಾರಾಮಯ್ಯ : ಪ್ರಾಚೀನ ಕನ್ನಡ ವ್ಯಾಕರಣಗಳು, ಪು. ೧೧೬.

೭. ಅದೇ, ಪು. ೧೧೭.

೮. ಡಾ. ಎಲ್. ಬಸವರಾಜು : ಶಬ್ದಮಣಿದರ್ಪಣಂ, ಪು. ೧೩

೯. ಎಂ.ವಿ. ಸೀತಾರಾಮಯ್ಯ : ಪ್ರಾಚೀನ ಕನ್ನಡ ವ್ಯಾಕರಣಗಳು, ಪು. ೧೧೮.

೯(ಎ). ಕನ್ನಡ ಭಾಷೆ ಮತ್ತು ವ್ಯಕರಣಗಳ ಒಂದು ಅಧ್ಯಯನ, ಪು. ೫೩-೫೫.

೯(ಬಿ). ಡಾ. ಪಿ. ಶ್ರೀ ಕೃಷ್ಣಭಟ್ : ಲೋಚನ, ೪ ಡಿಸೆಂಬರ್, ೧೯೮೭.

೧೦. ಪ್ರಾಚೀನ ಕನ್ನಡ ವ್ಯಾಕರಣಗಳು, ಪು. ೧೧೬ರ ಅಡಿಟಿಪ್ಪಣಿಗಳು.

೧೧. ಅದೇ, ಪು. ೧೧೭ರ ಅಡಿಟಿಪ್ಪಣಿಗಳು.

೧೨. ಡಾ. ಪಿ. ಶ್ರೀ ಕೃಷ್ಣಭಟ್ : ಕನ್ನಡ ವ್ಯಾಕರಣ ಪರಂಪರೆಯ ಮೇಲೆ ಸಂಸ್ಕೃತದ ಪ್ರಭಾವ, ಪು. ೧೪೭.

೧೩. ಡಾ. ಪಿ. ಶ್ರೀ ಕೃಷ್ಣಭಟ್ : ಪೂರ್ವೋಕ್ತ, ಪು. ೧೪೦.

೧೪. ಅದೇ, ಪು. ೧೪೦.

೧೫. ಡಾ. ಬೇತವೋಲು ರಾಮಬ್ರಹ್ಮಂ : ತೆಲುಗು ವ್ಯಾಕರಣಾಲಪೈ ಸಂಸ್ಕೃತ ಪ್ರಾಕೃತ ವ್ಯಾಕರಣಾಲ ಪ್ರಭಾವಂ, ಪು. ೧೩-೧೪.

೧೬. ಡಾ. ಹರಿಶಿವಕುಮಾರ್ : ಕೇತನ, ಪು. ೯೫.

೧೭. ಡಾ. ಪಿ. ಶ್ರೀ ಕೃಷ್ಣಭಟ್ : ಕನ್ನಡ ವ್ಯಾಕರಣಗಳ ಮೇಲೆ ಸಂಸ್ಕೃತದ ಪ್ರಭಾವ, ಪು. ೧೨೯-೩೦.

೧೮. ಡಾ. ಎಲ್. ಬಸವರಾಜು, ಶಬ್ದಮಣಿದರ್ಪಣಂ, ಪು. ೧೮.

# ಸಂಧಿ

ಸಂಧಿಯೆಂದರೆ ಸಾಮಾನ್ಯವಾಗಿ 'ಕೂಡುವಿಕೆ' ಅಥವಾ 'ಜೊತೆಯಾಗುವಿಗೆ' ಎಂದರ್ಥ. ಎರಡು ವರ್ಣಗಳನ್ನು ಒಂದಾದಮೇಲೊಂದು ಉಚ್ಚರಿಸುವುದು ಸಂಧಿ. ಇದಕ್ಕೆ ಸಂಹಿತೆ ಎಂಬ ಹೆಸರೂ ಉಂಟು. ಪ್ರಾಚೀನ ಸಂಸ್ಕೃತ ವ್ಯಾಕರಣಗಳಲ್ಲಿ ಸಂಧಿ ಮತ್ತು ಸಂಹಿತೆಗಳು ಸಮಾನಾರ್ಥದಲ್ಲಿ ಬಳಕೆಯಾಗಿವೆ. "ವರ್ಣಗಳ ನಡುವೆ ಅವುಗಳ ಉಚ್ಚಾರಣೆಗೆ ಅವಶ್ಯಕವಾಗಿರುವ ಕಾಲಕ್ಕಿಂತ ಹೆಚ್ಚು ಕಾಲ ತೆಗೆದುಕೊಳ್ಳದೆ ಉಚ್ಚರಿಸಿದಾಗ ಅವುಗಳು ಕೂಡುವುದಕ್ಕೆ ಸಂಧಿ"[೧] ಎಂದು ಹೆಸರು. ಸಂಧಿಯ ಈ ಲಕ್ಷಣ ನಿರ್ದೇಶದಿಂದ ಒಂದು ಶಬ್ದದಲ್ಲಾಗಲಿ ಇಲ್ಲವೆ ಶಬ್ದಗಳಲ್ಲಾಗಲಿ ಸಂಧಿ ಇದ್ದೇ ಇರುತ್ತದೆ. ಧಾತು, ಲಿಂಗ ಮುಂತಾದವುಗಳ ಅಂತ್ಯ ವರ್ಣವು ಪ್ರತ್ಯಯಗಳ ಆದಿ ವರ್ಣವು ಕೂಡುವಾಗ ಸಂಧಿ ಏರ್ಪಡುತ್ತದೆ. ಅಲ್ಲದೆ ಸಮಾಸ ಪದದಲ್ಲಿ ಪೂರ್ವ ಪದದ ಕೊನೆಯ ವರ್ಣವು, ಉತ್ತರ ಪದದ ಆದಿ ವರ್ಣವು ಕೂಡುವಾಗಲೂ ಸಂಧಿ ಕಂಡು ಬರುತ್ತದೆ. ಈ ದೃಷ್ಟಿಯಿಂದ ಒಂದು ಪದದಲ್ಲಾಗಲಿ ಇಲ್ಲವೆ ಎರಡು ಪದಗಳ ನಡುವೆಯಾಗಲಿ ಸಂಧಿ ಇರುವುದು ಖಚಿತ. ಒಂದು ಪದದಲ್ಲಾದರೆ ಪ್ರಕೃತಿ ಮತ್ತು ಪ್ರತ್ಯಯಗಳಲ್ಲಿ ಸಂಧಿ ತಲೆದೋರುತ್ತದೆ. ಪದಗಳಲ್ಲಾದರೆ ಪೂರ್ವ ಪದದ ಕೊನೆಯ ವರ್ಣ ಹಾಗೂ ಉತ್ತರ ಪದದ ಆದಿ ವರ್ಣಗಳ ನಡುವೆ ಸಂಧಿ ಏರ್ಪಡುತ್ತದೆ.

"ಹೀಗೆ ಸಂಧಿ ಎಂಬುದಕ್ಕೆ ವಿಶಾಲವಾದ ಹಾಗೂ ಸಂಕುಚಿತವಾದ ಅರ್ಥಗಳುಂಟು. ಸಂಕುಚಿತವಾದ ಅರ್ಥವೇ ಇಲ್ಲಿ ಪ್ರಸ್ತುತವಾದುದು. ವ್ಯಾಕರಣ ಘಟಕಗಳ (Grammatical units) ಅಂತರಾಳದಲ್ಲಿ ಕಂಡುಬರುವ ಸಂಧಿಯಲ್ಲ ಇಲ್ಲಿ ಪ್ರಕೃತವಾಗಿರುವುದು. ವ್ಯಾಕರಣ ಘಟಕಗಳು ಒಂದಕ್ಕೊಂದು ಸೇರುವಾಗ ಅವುಗಳ ಅವಯವಗಳಾಗಿರುವ ಅಂತ್ಯಾದಿ ವರ್ಣಗಳಲ್ಲಿ ಕಂಡುಬರುವ ಸಂಧಿಯೇ ಇಲ್ಲಿ ಪ್ರಕೃತವಾದುದು.[೨] ಎಂಬ ಮಾತಿನಲ್ಲಿ ಸತ್ಯವಿದೆ.

ಸಂಧಿಯನ್ನು ಕುರಿತ ಕೆಲವು ವ್ಯಾಖ್ಯೆಗಳು ಹೀಗಿವೆ:

೧. ಒಂದು ಪದದ ಅಂತರಾಳದಲ್ಲಾಗಲಿ ಎರಡು ಪದಗಳ ನಡುವೆಯಾಗಲಿ ಸಂಧಿ ಏರ್ಪಡಬೇಕಾದರೆ- ಅಲ್ಲಿ ಒಂದಕ್ಕೊಂದು ಇದಿರಾದ ಎರಡು ವರ್ಣಗಳು -ಒಂದನ್ನುಚ್ಚರಿಸಿದ ಮೇಲೆ ಇನ್ನೊಂದನ್ನು ಉಚ್ಚರಿಸುವಲ್ಲಿ ಅರ್ಧ ಮಾತ್ರೆಗಿಂತಲೂ ಹೆಚ್ಚು ಕಾಲ ವಿಳಂಬವಾಗದಷ್ಟು ಒತ್ತೊತ್ತಾಗಿ ಸನ್ನಿಕರ್ಷವಾಗಿ ಉಚ್ಚಾರಣೆಯಾಗಿರಬೇಕು. ಇಂಥ ವರ್ಣಗಳೆರಡರ ಉಚ್ಚಾರಣೆಯ ನಡುವೆ ಇರುವ ಅನ್ಯೋನ್ಯ ನಿಕಟ ಸಂಬಂಧವನ್ನು ಸಂಹಿತೆ ಎನ್ನುವರು. ಈ ವಿಧವಾದ ಸಂಹಿತೆಯು ಪ್ರಕೃತಿ ಪ್ರತ್ಯಯಗಳ ಮತ್ತು ಸಮಸ್ತ ಪದಗಳ ನಡುವೆ ನಿತ್ಯವಾಗಿರುವುದು.[೩]

೨. ಕೇಶಿರಾಜ 'ಎರಡುಂ ಪಲವುಂ ವರ್ಣಂ

ಪರಸ್ಪರ ಕೂಡುವ ಅಂದಮದು ಸಂಧಿವಲಂ" (ಸೂತ್ರ ೫೯) ಎಂದಿದ್ದಾನೆ. ಅವನ ಪ್ರಕಾರ ಸಂಧಿಯಾಗಬೇಕಾದರೆ ಎರಡು ಇಲ್ಲವೆ ಹಲವು ವರ್ಣಗಳು ಇರಬೇಕು.

೩. ರೆ. ಫ. ಕಿಟ್ಟೆಲ್‌ರವರು ತಮ್ಮ ಕೋಶದಲ್ಲಿ ಸಂಧಿ ಎಂಬುದಕ್ಕೆ-

"Euphonic junction of final, middle and initial letters in Grammar" ಎಂದೂ "ಯಾವೊಂದು ಪದದ ಆದಿ, ಮಧ್ಯ, ಅಂತ್ಯಗಳಲ್ಲಿ ವರ್ಣಗಳು ಬಂದು ಕೂಡುವುದಕ್ಕೆ ಸಂಧಿಯೆನ್ನುತ್ತಾರೆ" ಎಂದಿದ್ದಾರೆ.

೪. ಒಂದು ವಾಕ್ಯದಲ್ಲಿ ಪದಗಳಾಗಲಿ ಇಲ್ಲವೆ ಪದಗಳ ಅಕ್ಷರಗಳಲ್ಲಾಗಲಿ ಸ್ವಭಾವ ಸಿದ್ಧವಾದ ಅರ್ಧಮಾತ್ರಾ ಕಾಲ ವ್ಯವಧಾನದೊಂದಿಗೆ ಸನ್ನಿಹಿತವಾಗಿ ಉಚ್ಚರಿಸುವುದಕ್ಕೆ ಸಂಹಿತಾ ಎಂದು ಹೆಸರು.[೪]

೫. ಸಂಧಿಯೆಂದರೆ ಎರಡಕ್ಷರಗಳನ್ನು ಸೇರಿಸಿ ಉಚ್ಚರಿಸುವುದು.[೫]

೬. ಪೂರ್ವಪದಾಂತ ವರ್ಣಗಳಿಗೆ ಪರ ಪದಾದಿ ವರ್ಣಗಳು ಪರವಾಗಿರಲು ಪೂರ್ವ ವರ್ಣ ಸ್ಥಾನದಲ್ಲಿ ಪರಸ್ಪರ ವರ್ಣ ನಿಲ್ಲುವುದನ್ನೇ ಆಂಧ್ರ ಭಾಷೆಯಲ್ಲಿ ಅನೇಕ ವ್ಯಾಕರಣಕಾರರು ಸಂಧಿ ಎಂದಿದ್ದಾರೆ.[೬] "ಒಟ್ಟಿನಲ್ಲಿ ಒಂದು ಪದದಲ್ಲಿ ವಿಭಕ್ತ್ಯಾದಿ ಕಡೆಗಳಲ್ಲಿ ಅರ್ಥ ವ್ಯತ್ಯಾಸವಾಗದಂತೆ ನಡೆಯುವ ಬಹು ಸೂಕ್ಷ್ಮ ಹಾಗೂ ನಿಯತ ಕಾಲಿಕವಾದ ಧ್ವನಿಮಾ ವ್ಯತ್ಯಾಸವೇ ಸಂಧಿ ತತ್ವವಾಗಿದೆ."[೭]

ಒಂದು ಪದದ ವಿಭಜನೆ ಹಾಗೂ ಅದರ ಕಾರ್ಯವನ್ನು ತಿಳಿಯಪಡಿಸುವುದೇ ಸಂಧಿ ಶಾಸ್ತ್ರವೆನಿಸುವುದು. ಇದನ್ನೇ ಭಾಷಾಶಾಸ್ತ್ರಜ್ಞರು 'ಆಕೃತಿ ಧ್ವನಿಮಾ ಶಾಸ್ತ್ರ' ವೆಂದು ಕರೆದಿದ್ದಾರೆ. ಇಂಗ್ಲಿಷ್‌ನಲ್ಲಿ ಇದಕ್ಕೆ "Marpho-Phonemics" ಎಂದು ಹೆಸರು.

ಚಿನ್ನಯ ಸೂರಿಯಂಥ ಆಂಧ್ರ ಲಾಕ್ಷಣಿಕರು "ಪೂರ್ವಪದ ಸ್ವರಗಳಿಗೆ ಪರಸ್ಪರವ ಆದೇಶವಾಗುವುದೇ ಸಂಧಿ" ಎಂದು ಅಭಿಪ್ರಾಯಪಟ್ಟಿದ್ದಾರೆ. (ಬಾ. ವ್ಯಾ. ಸಂಧಿ ೧) ಇದರಿಂದ ಲೋಪಸಂಧಿಯೇ ಸಂಧಿ ಎಂದು ನಿರ್ದೇಶಿಸಿದಂತಾಯಿತು.

ಒಂದು ವಿಶೇಷವೆಂದರೆ ಸಂಸ್ಕೃತದ ಪಾಣಿನಿ 'ಸಂಹಿತಾ' ಎಂಬ ಶಬ್ದವನ್ನು ಸಂಧಿಯ ಅರ್ಥದಲ್ಲಿ ಸ್ವೀಕರಿಸಿದರೆ (ಅಷ್ಟಾಧ್ಯಾಯಿ ೧-೪-೧೦೮) ಕೇತನಾದಿ ತೆಲುಗು ಲಾಕ್ಷಣಿಕರು ಯಾರೂ ಈ ಸಂಹಿತಾ ಎಂಬ ಶಬ್ದವನ್ನು ಗ್ರಹಿಸಲೇ ಇಲ್ಲ. ಎಲ್ಲರೂ ಸಂಧಿ ಎಂದೇ ಕರೆದಿದ್ದಾರೆ. ಆದರೆ ಕನ್ನಡ ಲಾಕ್ಷಣಿಕರು 'ಸಂಧಿ' ಹಾಗೂ 'ಸಂಹಿತಾ' ಎಂಬ ಎರಡನ್ನೂ ಸ್ವೀಕರಿಸಿದ್ದಾರೆ. ಸಂಧಿ ಪದಕ್ಕಿಂತ ಸಂಹಿತಾ ಪದವು ಪ್ರಾಚೀನವಾದುದು. ಋಗ್ವೇದದಲ್ಲಿಯೇ ಅದು ಕಂಡು ಬರುತ್ತದೆ. ಅಲ್ಲಿ ಅದಕ್ಕೆ 'ಕೂಡು' ಎಂಬ ಅರ್ಥವಿದೆ.

ತೆಲುಗು ವ್ಯಾಕರಣಕಾರರ ವಿವರಣೆಯಲ್ಲಿ ಸಂಧಿಯ ಬಗ್ಗೆ ಪ್ರಾಚೀನ-ಅರ್ವಾಚೀನ ಎಂಬ ಎರಡು ಮತಗಳಿದ್ದಂತೆ ತೋರುತ್ತದೆ. "ವರ್ಣ ಸಂಯೋಗವೇ ಸಂಧಿ" ಎಂದಿರುವ ಪ್ರಾಚೀನ ಲಾಕ್ಷಣಿಕರ ಮಾರ್ಗಕ್ಕೆ "ಸ್ವರ ಸಂಯೋಗವೇ ಸಂಧಿ" ಎಂದಿರುವ ಅರ್ವಾಚೀನ ಲಾಕ್ಷಣಿಕರ ಮಾರ್ಗ ಭಿನ್ನವಾಗಿದೆ. ಆದರೂ ಈ ಎರಡೂ ಮಾರ್ಗಗಳನ್ನು ಕೆಲವರು ಸಮರ್ಥಿಸಿದ್ದಾರೆ.[೮]

**ಕನ್ನಡ ಸಂಧಿಗಳು:**

ನಾಗವರ್ಮನು ಕ. ಭಾ.ಭೂ ದ 'ಸಂಧಿ ವಿಧಾನಂ' ಎಂಬ ಎರಡನೆಯ ಪರಿಚ್ಛೇದದಲ್ಲಿ ಕನ್ನಡ ಸಂಧಿಗಳಾದ ಲೋಪ, ಆಗಮ, ಆದೇಶಗಳನ್ನು ವಿವರಿಸಿದ್ದಾನೆ. ಈ ವಿವರಣೆಗೆ ಅವನು ಬಳಸಿಕೊಂಡ ಒಟ್ಟು ಸೂತ್ರಗಳು ೧೯ ಮಾತ್ರ. ಸೂತ್ರ ೧೬ರಿಂದ ೩೬ರ ವರೆಗೆ ವಿಸ್ತರಿಸಿರುವ ಸಂಧಿ ವಿಧಾನದಲ್ಲಿ ಸಂಸ್ಕೃತ ಸಂಧಿಗಳ ಪ್ರಸ್ತಾಪವಿಲ್ಲ. ಸಂಹಿತೆಯ ಲಕ್ಷಣ ನಿರ್ದೇಶನವನ್ನು ಸಂಜ್ಞಾ ಪ್ರಕರಣದಲ್ಲಿಯೇ ಮಾಡಿರುವುದು ಗಮನಾರ್ಹ. ಸಂಹಿತೆ ಎಂಬ ಸಂಜ್ಞೆಯನ್ನು ಸಂಜ್ಞಾ ಪ್ರಕರಣದಲ್ಲಿ ಹೇಳಬೇಕೆಂಬುದು ಅವನ ಉದ್ದೇಶವಾಗಿರಬೇಕು. ಕನ್ನಡ ಸಂಧಿಯೆಂದರೆ ಕನ್ನಡ ಶಬ್ದಗಳು ಪರಸ್ಪರ ಕೂಡುವಾಗ ಆಗುವ ಸಂಧಿ ಎಂದರ್ಥ. ಸಂಜ್ಞಾ ವಿಧಾನದ ೧೭ನೆಯ ಸೂತ್ರದಲ್ಲಿ ನಾಗವರ್ಮ "ಪರಸ್ಪರ ಸನ್ನಿಕರ್ಷ: ಸಂಹಿತಾ" ಎಂದಿದ್ದಾನೆ.

ವೃತ್ತಿಯಲ್ಲಿ "ಶ್ಲಿಷ್ಟಾನಾಂ ವರ್ಣಾನಾಂ ಪರಸ್ಪರ ಮನ್ಯೋನ್ಯಂ ಸನ್ನಿಕರ್ಷ ಸಂಶ್ಲೇಷ: ಸಂಹಿತಾ ಸಂಧಿರುಚ್ಯತೇ" ಎಂದು ಹೇಳಿ ಸಂಹಿತೆ ಮತ್ತು ಸಂಧಿ ಪರ್ಯಾಯ ಪದಗಳೆಂಬುದನ್ನು ಸೂಚಿಸಿದ್ದಾನೆ. ವರ್ಣಗಳು ಒಂದಕ್ಕೊಂದು ಕೂಡುವುದರಿಂದ ಸಂಧಿ ಏರ್ಪಡುತ್ತದೆಂಬುದನ್ನೂ ತಿಳಿಸಿದ್ದಾನೆ. ಸಂಧೌ (ಸೂ. ೧೮) ಎಂಬ ಅಧಿಕಾರ ಸೂತ್ರದಲ್ಲಿ ಮುಂದೆ ಹೇಳುವುದೆನಲ್ಲ ಸಂಧಿ ಲಕ್ಷಣ ಎಂಬುದನ್ನು ಸ್ಪಷ್ಟಪಡಿಸಿದ್ದಾನೆ. 'ಸ್ವರೋ ಸ್ವರಸ್ಯ ಲೋಪ: (ಸೂ. ೧೯) ಎಂಬ ಸೂತ್ರ ಲೋಪಸಂಧಿಯ ಸ್ವರೂಪವನ್ನು ತಿಳಿಸುತ್ತದೆ. ಸಂಸ್ಕೃತ ಭಾಷೆಯಲ್ಲಿ ಸಾಮಾನ್ಯವಾಗಿ ಸ್ವರ ಇರುವ ಪದಗಳಲ್ಲಿ ವಿಭಕ್ತಿ ಸ್ವರ ಅಥವಾ ಪ್ರಕೃತಿ ಸ್ವರಕ್ಕೆ ಲೋಪ ಬರುತ್ತದೆ. ಆದರೆ ಅಲ್ಲಿ 'ಲೋಪ ಸಂಧಿ' ಎಂಬ ಸಂಧಿಯೊಂದರ ಹೆಸರು ಬಳಕೆಯಾಗಿಲ್ಲ. ಪ್ರಾತಿಶಾಖ್ಯೆಯಲ್ಲಿ ಕೆಲವು ವ್ಯಂಜನಗಳು ಮತ್ತು ಸ್ವರಗಳು 'ಸಂಹಿತೆ'ಯಲ್ಲಿ ಲೋಪಗೊಳ್ಳುವ ವಿಚಾರ ಕಂಡುಬರುತ್ತದೆ (ತೈತ್ತಿರೀಯ ಪ್ರಾತಿಶಾಖ್ಯೆ ೫:೧೧-೯). ಕಾತಂತ್ರ ವ್ಯಾಕರಣ ಸಂಪ್ರದಾಯದಲ್ಲಿ ಕೂಡ ಸ್ವರಲೋಪದ ವಿಷಯ ಕಂಡು ಬರುತ್ತದೆ. ಆದರೆ ಎಲ್ಲಿಯೂ 'ಲೋಪ ಸಂಧಿ' ಎಂಬ ಹೆಸರು ಮಾತ್ರ ಬಳಕೆಯಾಗಿಲ್ಲ. ಆದರೆ ಕನ್ನಡದಲ್ಲಿ ಲೋಪಸಂಧಿ ಎಂಬ ಹೆಸರು ಪ್ರಖ್ಯಾತವಾದುದು. ಶ.ಸ್ಮ.; ಕ.ಭಾ ಭೂ; ಶ.ಮ.ದ -ಗಳಲ್ಲಿ ಲೋಪ ಸಂಧಿಯ ವಿಷಯ ಹೆಚ್ಚು ಕಡಿಮೆ ಸಮಾನವಾಗಿದೆ. ಶ.ಮ.ದ.ದಲ್ಲಿ ಮಾತ್ರ ಹೆಚ್ಚು ವಿಸ್ತೃತವಾಗಿದೆ. ನಾಗವರ್ಮನ 'ಸ್ವರೇಸ್ವರಸ್ಯ ಲೋಪ:' ಎಂಬ ೧೯ನೆಯ ಸೂತ್ರದ ವೃತ್ತಿಯಲ್ಲಿ "ಸ್ವರಕ್ಕೆ ಸ್ವರ ಪರವಾಗಲು ಪೂರ್ವ ಸ್ವರಕ್ಕೆ ಲೋಪ" (ಸ್ವರೇ ಪರತ್ರಾವನಿಧಿತೇ ಪೂರ್ವ ಸ್ವರಸ್ಯ ಲೋಪ ಭವತಿ) ಎನ್ನಲಾಗಿದೆ. ಇದಕ್ಕೆ ಕೆಲವು ಉದಾಹರಣೆಗಳನ್ನು ಕೊಟ್ಟಿದ್ದಾನೆ. ಅವನು ಕೊಡುವ ಉದಾಹರಣೆಗಳು:

೧. ಎನ್ನ + ಅರಸಂ = ಎನ್ನರಸಂ (ಅಕಾರ ಲೋಪ)

೨. ತನ್ನ + ಆಳಿಂ = ತನ್ನಾಳಿಂ (ಆಕಾರ ಲೋಪ)

೩. ಮುನ್ನ + ಇಜೀವಂ =ಮುನಿಜೀವಂ (ಅ ಕಾರ ಲೋಪ)

೪. ಕೂರ್ತು + ಈವಂ = ಕೂರ್ತೀವಂ (ಉಕಾರ ಲೋಪ)

ಅಂತೆ ಬಿಟ್ಟುಟೀವಂ, ಕಟ್ಟೊಳಂ, ತಳ್ತೆಸೆವಂ, ಬಿಚ್ಚೊಳ್ಪಂ -ಈ ಮೊದಲಾದುವು. ಕೇಶಿರಾಜನು ಕೂಡ "ಸ್ವರಮಿದಿರೊಳಿರೆ ವಿಭಕ್ತಿ ಸ್ವರಕಂ ಪ್ರಕೃತಿ ಸ್ವರಕಂ ಅಕ್ಕುಂ ಲೋಪಂ" ಎಂದಿದ್ದಾನೆ. ಸೂತ್ರ ೨೦ರಲ್ಲಿ ನಾಗವರ್ಮನು ಲೋಪಸಂಧಿಯ ಬಗ್ಗೆ ಮುಂದುವರಿಸುತ್ತಾ "ಉಕಾರ, ಎಕಾರಗಳಿಗೆ ಮುಂದೆ ಸ್ವರ ಪರವಾದರೆ ಮೊದಲ ಸ್ವರಕ್ಕೆ ಲೋಪ" ಎಂದಿದ್ದಾನೆ. ಅದಕ್ಕೆ ಅವನು ಕೊಡುವ ಉದಾಹರಣೆಗಳು:

೧. ಮಾತು + ಎಲ್ಲಂ = ಮಾತೆಲ್ಲಂ (ಉಕಾರ ಲೋಪ)

೨. ಲೇಸು + ಎಲ್ಲಂ = ಲೇಸೆಲ್ಲಂ (ಉಕಾರ ಲೋಪ)

೩. ನಾಲಗೆ + ಉಳ್ಳನೆ = ನಾಲಗುಳ್ಳನೆ (ಎಕಾರ ಲೋಪ)

೪. ಸೇಸೆ + ಇಕ್ಕಿದಂ = ಸೇಸಿಕ್ಕದಂ (ಎಕಾರ ಲೋಪ)

ಮೇಲಿನ ಉದಾಹರಣೆಗಳು 'ಉ' ಹಾಗೂ 'ಎ' ಕಾರ ಲೋಪ ಸಂಧಿಗೆ ಸಂಬಂಧಿಸಿದವು. ಸೂತ್ರ ೨೧ರಲ್ಲಿ ನಾಗವರ್ಮನು ಸಂಧಿಯಲ್ಲಿ 'ನಾಮಭಾಗ' (ಅರ್ಥ ಪ್ರತೀತಿ) ಅಳಿಯುತ್ತಿದ್ದರೆ ಪ್ರಕೃತಿಯ ಉಕಾರ ಮತ್ತು ಎಕಾರಗಳಿಗೆ ಲೋಪವಿಲ್ಲವೆಂದು ಲೋಪ ಸಂಧಿಗೆ ಅಪವಾದವನ್ನು ಹೇಳಿದ್ದಾನೆ.

'ನ ನಾಮ ಭಾಗ ಪ್ರಧ್ವಂಸೇ' (ಸೂತ್ರ ೨೧)

ಅದಕ್ಕೆ ಉದಾಹರಣೆಗಳು:

೧. ಪಟು + ಈತಂ = ಪಟುವೀತಂ

೨. ಗಾಳು + ಇವಳ್ = ಗಾಳುವಿವಳ್

೩. ಮಡು + ಇದು = ಮಡುವಿದು

೪. ಆನೆ + ಒಡ್ಡು = ಆನೆಯೊಡ್ಡು

೫. ಕುದುರೆ + ಎಕ್ಕತುಳಂ = ಕುದುರೆಯೆಕ್ಕತುಳಂ

೬. ಪಡೆ + ಇದು = ಪಡೆಯಿದು

ಮೇಲಿನ ಪೂರ್ವಪದಗಳ 'ಉ' ಮತ್ತು 'ಎ' ಗಳಿಗೆ ಸ್ವರಪರವಾಗಲು ಅಲ್ಲಿ ಸಂಧಿಯಿಲ್ಲ. ಕಾರಣ ಸಂಧಿ ಮಾಡಿದರೆ ಅರ್ಥಕ್ಕೆ ಭಂಗಬರುತ್ತದೆ; ನಾಮರೂಢಿ ಅಳಿಯುತ್ತದೆ. ಹೀಗೆ ನಾಗವರ್ಮ ಲೋಪಸಂಧಿಗೆ ಬಳಸಿಕೊಂಡ, ಒಟ್ಟು ಸೂತ್ರಗಳು ಕೇವಲ ಮೂರು. ಅವು ಸೂತ್ರ ೧೯, ೨೦, ೨೧. ಪಟು + ಏಕವಾಕ್ಯ ಎಂಬಲ್ಲಿ ಪಟೇಕವಾಕ್ಯಂ, ಎಂದಾಗಲಿ ಮಡು + ಇದು ಎಂಬಲ್ಲಿ ಮಡಿದು ಎಂದಾಗಲಿ, ಮಾಲೆ + ಇಕ್ಕಿದಳ್ ಎಂಬಲ್ಲಿ ಮಾಲಿಕ್ಕಿದಳ್ ಎಂದಾಗಲಿ ಸಂಧಿ ಕೂಡದು. ಕಾರಣವೇನೆಂದರೆ ಅಲ್ಲಿ ಸಂಧಿ ಮಾಡಿದರೆ ಅರ್ಥ ಕೆಡುವುದು. ನಾಗವರ್ಮನು ಉಲ್ಲೇಖಿಸಿದ "ನಾಮ ಭಾಗ ಪ್ರಧ್ವಂಸೇ' ಎಂಬುದಕ್ಕೆ ಸಂವಾದಿಯಾಗಿ ಕೇಶಿರಾಜನು "ನಾಮರೂಢಿ ಅಳಿಯದ ಪಕ್ಷಂ "ಎಂದು ಉಪಯೋಗಿಸಿದ್ದಾನೆ. ಶಬ್ದ ಸ್ಮೃತಿಯಲ್ಲಿ

"ನಾಮ ಭಾಗದ ನಾಶ" ಎಂದಿದೆ. "ನಾಮ ಭಾಗದ ನಾಶ" (ಶ. ಸ್ಮೃ) 'ನಾಮ ಪ್ರಧ್ವಂಸೇ' - (ಭಾ.ಭೂ); 'ನಾಮರೂಢಿ ಅಳಿವು' (ಶ.ಮ.ದ)- ಎಂಬ ಈ ಮಾತುಗಳಿಂದ ಸಂಧಿ ಪ್ರಕ್ರಿಯೆ ನಾಮ ರೂಢಿಯನ್ನು ಅವಲಂಬಿಸಿ ನಡೆಯುತ್ತದೆ ಎನ್ನಬಹುದು. ಇದೇ ಪ್ರಾಚೀನ ವೈಯಾಕರಣರ ಒಟ್ಟು ಅಭಿಪ್ರಾಯ.

**ಆಗಮ:**

ನಾಗವರ್ಮನು ಆಗಮ ಸಂಧಿಗೆ ಬಳಸಿಕೊಂಡಿರುವ ಸೂತ್ರಗಳು ಒಟ್ಟು ಆರು. ಅವುಗಳಲ್ಲಿ ಸೂತ್ರ ೨೨, ೨೩, ೨೪ ಯಕಾರಾಗಮ ಹಾಗೂ ವಕಾರಾಗಮ ಸಂಧಿಯ ಲಕ್ಷಣ ಮತ್ತು ಉದಾಹರಣೆಗಳಾಗಿದ್ದರೆ, ಸೂತ್ರ ೨೫, ೨೬, ೨೭ ಆಗಮ ನಿಷೇಧದ ಬಗ್ಗೆ ಹೇಳುತ್ತವೆ.

ಆಗಮ ಸಂಧಿಯಲ್ಲಿ ಯಕಾರಾಗಮ ಮತ್ತು ವಕಾರಾಗಮ ಎಂಬ ಎರಡು ಪ್ರಭೇದಗಳುಂಟು. ಸೂತ್ರ ೨೨ ಮತ್ತು ೨೩ಗಳು ಯಕಾರಾಗಮವನ್ನು ಕುರಿತು ತಿಳಿಸುತ್ತವೆ.

'ಆದಿ ವರ್ಣೈೕಕಾರೇಭ್ಯೋಯ:' (ಸೂ. ೨೨)

'ಅಕಾರಾಂತಾಚ್ಚಾವಧಾರಣಾರ್ಥೇ ಏ' (ಸೂ. ೨೩)

**ನಾಗವರ್ಮನು ಹೇಳುವ ಯಕಾರಾಗಮದ ನಿಯಮಗಳು ಇಂತಿವೆ:**

೧. ಆ,ಇ,ಈ,ಎ ಕಾರಗಳಿಗೆ ಪೂರ್ವದಲ್ಲಿದ್ದು ಅವುಗಳಿಗೆ ಯಾವುದಾದರೂ ಸ್ವರವು ಪರವಾಗಲು ಯಕಾರಾಗಮವಾಗುತ್ತದೆ.

**ಉದಾಹರಣೆಗೆ:**

೧. ಆ + ಎಡೆಯೊಳ್ = ಆಯೆಡೆಯೊಳ್

೨. ಸಂಗತಿ + ಇಂ = ಸಂಗತಿಯಿಂ

೩. ಶ್ರೀ + ಒಡೆಯರ್ = ಶ್ರೀಯೊಡೆಯರ್

೪. ಸತಿ + ಇರ್ಪರ್ = ಸತಿಯಿರ್ಪರ್

ಮೇಲಿನ ಪೂರ್ವಪದಗಳಲ್ಲಿ ಆ,ಇ,ಈ ಎ ಗಳಿಗೆ ಉತ್ತರ ಪದದ ಎ,ಇ,ಒಗಳು ಪರವಾಗಲು ಯಕಾರಾಗಮವಾಗಿದೆ. ಕೇಶಿರಾಜನು ಪೂರ್ವ ಪದಾಂತ್ಯದಲ್ಲಿ ಆ,ಇ,ಈ, ಓ, ಐ, ಎ, ಏ ಎಂಬ ಸ್ವರಗಳಿರುವ ಉದಾಹರಣೆಗಳನ್ನು ಕೊಟ್ಟಿದ್ದಾನೆ.

೧. ಆ + ಇರ್ದ = ಆಯಿರ್ದ

೨. ಕವಿ + ಆರ್ = ಕವಿಯಾರ್

೩. ಈ + ಅಲ್ = ಈಯಲ್ 'ಈಯಲ್ ಬಂದಿತ್ತು' ಪ್ರಯೋಗ

೪. ಜೋ + ಎಂದು = ಜೋಯೆಂದು (ಪಾಡಿದರು)

೫. ದೈ + ಎಂದು = ದೈಯೆಂದು

೬. ನೆಡೆ ನಡೆ + ಎಂದು = ನಡೆನಡೆಯೆಂದು

೭. ಉಘೇ ಉಘೇ + ಎಂದು = ಉಘೇಯೆಂದು

ಸೂತ್ರ ೨೩೮ರಲ್ಲಿ 'ಅಕಾರಾಂತಾಚ್ಚಾವಧಾರಣಾರ್ಥೇ ಏ' ಎಂದಿದೆ. "ಅಕಾರಾಂತ ಶಬ್ದದ ಮುಂದೆ ಅವಧಾರಣಾರ್ಥದ 'ಏ'ಕಾರ ಬಂದಾಗ ಯಕಾರಾಗಮ"

ಉದಾ: ಆತನ +ಏ =ಆತನಯೆ
ಅವಳ +ಏ = ಅವಳಯೆ

'ಆತನಯೆ' ಎಂಬುದನ್ನು ಸ್ಮೃತಿ ಗುರುತಿಸಿದೆ. (ಪದ್ಯ ೪೩.) ಷಷ್ಠೀ ವಿಭಕ್ತಿಯ ಅಕಾರದ ಮುಂದೆ 'ಏ' ವರ್ಣ ಬಂದರೆ ಯತ್ವ ಬರುವುದೆಂದು ದರ್ಪಣದಲ್ಲಿ ಹೇಳಿದೆ (ಪದ್ಯ ೬೩). ಮೂರು ಗ್ರಂಥಗಳು 'ಆತನಯೆ' ಎಂಬ ಉದಾಹರಣೆಯನ್ನೇ ಕೊಟ್ಟಿವೆ.

ನಾಗವರ್ಮನು ಯಕಾರಾಗಮವನ್ನು ಕುರಿತು ಹೇಳುವಲ್ಲಿ ಆಕಾರ, ಇಕಾರ, ಏಕಾರಗಳಿಗೆ ಸ್ವರಗಳು ಪರವಾದರೆ 'ಯ' ಕಾರಾಗಮವಾಗುತ್ತದೆ ಎಂದಿಷ್ಟೇ ಹೇಳಿದರೆ, ಕೇಶಿರಾಜನು ಅದಕ್ಕೂ ಒಂದು ಹೆಜ್ಜೆ ಮುಂದೆ ಹೋಗಿ ತನ್ನ ಸೂತ್ರವೊಂದರಲ್ಲಿ "ಸಂಸ್ಕೃತ ಕನ್ನಡ ಆದಂತ ಪ್ರಕೃತಿಗಳಿಗೆ ಇಸು ಪ್ರತ್ಯಯ ಪರವಾದರೆ ಯಕಾರಾಗಮವಾಗುತ್ತದೆ" (ಸೂತ್ರ ೬೪) ಎಂದಿದ್ದಾನೆ. ಅದಕ್ಕೆ ಅವನು ಕೊಡುವ ಉದಾಹರಣೆಗಳು:

ಶುದ್ಧ + ಇಸು = ಶುದ್ಧಯಿಸು

ಬರೆ + ಇಸು = ಬರೆಯಿಸು

ಈ ವಿಷಯದಲ್ಲಿ ಸ್ಮೃತಿ ಹೇಳಿದ್ದನ್ನು ಭೂಷಣ ಸ್ವಲ್ಪ ವಿಸ್ತರಿಸಿದರೆ ದರ್ಪಣ ಮತ್ತಷ್ಟು ವಿಸ್ತರಿಸಿದೆ ಎನ್ನಬಹುದು.

**ವಕಾರಾಗಮ:** ಸೂತ್ರ ೨೪ರಲ್ಲಿ ವಕಾರಾಗಮದ ಸ್ವರೂಪವನ್ನು ನಿರ್ದೇಶಿಸಲಾಗಿದೆ.

ಸೂತ್ರ: "ವೋ ವ್ವೈ ವರ್ಣಾಭ್ಯಾಂ"

ವೃತ್ತಿ ॥ ಉವರ್ಣಾಂತಾತ್ ಋವರ್ಣಾಂ ತಾದಪಿ ಸ್ವರೇ ಪರೇ ವಕಾರೋ ವ್ಯವಧಾಯಕೋ ಭವತಿ ॥

ಮೇಲಿನ ಸೂತ್ರದ ಪ್ರಕಾರ 'ಉ' ಮತ್ತು 'ಋ' ವರ್ಣಗಳಿಗೆ ಯಾವುದಾದರು ಸ್ವರ ಪರವಾದರೆ ವಕಾರಾಗಮವಾಗುತ್ತದೆ. ಉದಾ:

ವಿಧು + ಇಲ್ಲದ = ವಿಧುವಿಲ್ಲದ

ಪೂ + ಇಲ್ಲದ = ಪೂವಿಲ್ಲದ

ಪಿತೃ + ಇವಂ = ಪಿತೃವಿವಂ

ಮಾತೃ + ಇವಳ್ = ಮಾತೃವಿವಳ್

ಋೂ + ಇತ್ತಂ = ಋೂವಿತ್ತಂ

ವಕಾರಾಗಮದ ವಿಷಯದಲ್ಲಿ ಸ್ಮೃತಿ, ಭೂಷಣ ಮತ್ತು ದರ್ಪಣ ಬಹುಪಾಲು ಒಂದೇ ಆಗಿದೆ. ಶ.ಮು.ದ ಓತ್ವ ಔತ್ವಗಳ ಮುಂದೆ ಸ್ವರ ಬಂದಾಗ ವಕಾರಾಗಮವಾಗುವ ವಿಷಯವನ್ನು ಹೆಚ್ಚಿಗೆ ಸೇರಿಸಿದೆ. ಯಕಾರ ಮತ್ತು ವಕಾರಗಳು ಬರುವ ಸಂದರ್ಭವನ್ನು ಸ್ಮೃತಿ ಮತ್ತು ಕ. ಭಾ.ಭೂ ಆಗಮ ಸಂಧಿ ಎಂದು ಹೇಳಿಲ್ಲ. ಆದರೆ 'ವ್ಯವಧಾಯಕ' ಎಂಬ ಪದವನ್ನು ಬಳಸಿರುವುದು ಗಮನಾರ್ಹ. ಶ.ಮು.ದ ಇವನ್ನು ಸಂಧಿ ಎಂದು ವ್ಯವಹರಿಸಿದೆ. ಈ ವಿಷಯದಲ್ಲಿ ಸ್ಮೃತಿ ಭೂಷಣಗಳಲ್ಲಿ ಏಕರೂಪತೆ ಗಮನಿಸತಕ್ಕದ್ದು.

**ಸಂಧಿ ನಿಷೇಧ:**

'ಏದೋದಂತಾ ನಿಪಾತ: ಸ್ವರೇ ಪರೇ ಪ್ರಕೃತ್ಯಾ' ಎಂಬ ಸೂತ್ರ ೨೫ರ ಪ್ರಕಾರ ಏಕಾರಾಂತ, ಓಕಾರಾಂತ ನಿಪಾತ ಶಬ್ದಗಳಿಗೆ ಯಾವುದೇ ಸ್ವರ ಪರವಾಗಲಿ ಸಂಧಿಯಾಗುವುದಿಲ್ಲ. ಎಲೆ, ಅಂತುಟೆ, ಅರಮೆ, ಅರೆ, ಅಯ್ಯೋ, ಅಕ್ಕಟ ಓಹೋ-ಎಂಬುವು ನಿಪಾತ ಶಬ್ದಗಳು. ಉದಾ:

೧. ಎಲೆ ಇದಾವುದೊ

೨. ಅಂತುಟೆ ಅಲ್ತೆ

೩. ಅರಮೆ ಅರಲ್ದ

೪. ಅರೆ ಎಡೆಯೊಳ್

೫. ಅಯ್ಯೋ ಅಕ್ಕಟ

೬. ಓಹೋ ಇರಲಿಂ-

ಇವುಗಳಲ್ಲಿ ಸಂಧಿ ನಿಷೇಧ. ಇದಕ್ಕೆ 'ಪ್ರಕೃತಿ ಭಾವ' ಎನ್ನುತ್ತಾರೆ. 'ಅನ್ಯಥಾ ಪ್ರಯೋಗೇ ಪ್ರಾಪ್ತೇ, ಅನ್ಯಾಥಾ ಪ್ರಯೋಗ ಕರಣಂ ನಿಪಾತ:' ಸಾಮಾನ್ಯ ಪ್ರಕ್ರಿಯೆಗೆ ಒಳಪಡದಿರುವಾಗ ಕೆಲವೇ ಕೆಲವು ಉದಾಹರಣೆಗಳಿಗಾಗಿ ಲಕ್ಷಣ ಹೇಳದೆ ಸಿದ್ಧರೂಪವನ್ನೇ ನಿರೂಪಿಸಿದರೆ ಅದು ನಿಪಾತ. ೧೯ನೆಯ ಸೂತ್ರದಿಂದ ಎಲ್ಲ ಸ್ವರಗಳಿಗೂ ಸಂಧಿಯಾಗಬೇಕು. ೨೦ನೆಯ ಸೂತ್ರದಿಂದ 'ಏ' ಕಾರಕ್ಕೆ ಸಂಧಿಯಾಗಬೇಕು. ೨೨ನೆಯ ಸೂತ್ರದ ಪ್ರಕಾರ ಯಕಾರಾಗಮವಾಗಬೇಕು. ಇವು ಯಾವುವೂ ಆಗದೆ ಸಂಧಿ ಇಲ್ಲದ ಪರಿಸ್ಥಿತಿಯನ್ನು ಇಲ್ಲಿ ಹೇಳಲಾಗಿದೆ. ಸೂತ್ರ ೨೬ರಲ್ಲಿ "ವಿಶಂಕೆ, ಅವಧಾರಣೆಗಳಲ್ಲಿ ಕೂಡ ಯಾವುದೇ ಸ್ವರವು ಪರವಾದರೂ ಸಂಧಿಯಿಲ್ಲ" ಎಂದು ಸಂಧಿ ನಿಷೇಧ ಮಾಡಲಾಗಿದೆ. ಉದಾಹರಣೆಗೆ

೧. ಆನೆಯೋ ಅದ್ರಿಯೋ (ವಿಶಂಕೆ)

೨. ರಜ್ಜುವೋ ಅಹಿಯೋ (ವಿಶಂಕೆ)

೩. ಈವನೋ ಈಯನೋ (ವಿಶಂಕೆ)

೪. ಅಕ್ಕುಮೋ ಆಗದೋ (ವಿಶಂಕೆ)

೫. ಪುರವನೆ ಆಳ್ದಂ (ಅವಧಾರಣೆ)

೬. ಕೂರ್ತನೆ ಆಪ್ತಂ (ಅವಧಾರಣೆ)

ಸೂತ್ರ ೨೭ರಲ್ಲಿ 'ಪ್ಲುತಾಶ್ಚ' ಎಂದು, "ಪ್ಲುತಗಳಿಗೂ ಸ್ವರ ಪರವಾಗಲು ಸಂಧಿಯಿಲ್ಲ" ಎಂದಿದ್ದಾನೆ. ಅದಕ್ಕೆ ನಾಗವರ್ಮನು ಕೊಡುವ ಉದಾಹರಣೆ

೧. ಎಲೆ ಅಣ್ಣಾ ಇತ್ತ ಬಾ

೨. ಕೂಕ್ಕೂ ಕ್ಕೋ- ಎಂದು ಕೋಟಿ ಕೂಗಿತ್ತಾಗಳ್ (ಪ್ಲುತ)

ಕೇಶಿರಾಜನೂ ಕೂಡ "ಅವಿಕೃತಗಳಾದ ಎ, ಏ, ಒ, ಓ ಸ್ವರಾಂತವಾದ ನಿಪಾತ ಅವಧಾರಣೆ ಮತ್ತು ವಿಶಂಕೆಗಳ ಮುಂದೆ ಸ್ವರ ಪರವಾದರೆ ಸಂಧಿಯಾಗುವುದಿಲ್ಲ. ಅಂತೆಯೇ ಪ್ಲುತಕ್ಕೆ ಸ್ವರ ಪರವಾದಾಗಲು ಸಂಧಿಯಾಗದು"

ಎಂದಿದ್ದಾನೆ. ನಿಪಾತ, ಅವಧಾರಣೆ ವಿಶಂಕೆ- ಇವುಗಳನ್ನು ಕೇಶಿರಾಜನು 'ಅವಿಕೃತಗಳು' ಎಂದು ಕರೆದಿದ್ದಾನೆ. ಅವಿಕೃತ ಎಂದರೆ ಅವ್ಯಯ. ಈ ಸೂತ್ರಕ್ಕೆ ಕೇಶಿರಾಜನು ಕೊಡುವ ಉದಾಹರಣೆಗಳು:

**ನಿಪಾತ:**

ಅರಮೆ + ಆರಲ್ದ

ಅರಮೆ + ಎಳದಳಿರ

ಎಲೇ + ಇದರ್ಲ್ತೇ

ಅರೆ + ಎಡೆ

ಓಹೋ + ಇರಲಿಂ

**ಅವಧಾರಣೆ :**

ಕಾವುದನೇ + ಎರ್ದೆಗಿಡದಿರು

ಆತನೆ + ಇಂದ್ರಂ

**ವಿಶಂಕೆ:**

ಆನೆಯೋ + ಅದ್ರಿಯೋ

ಎನ್ನಿರೆ + ಎನ್ನಿನಿಯಂ

**ಪ್ಲುತ:**

ಕುಕ್ಕೂಕ್ಕೋ + ಎಂದು

ಹಾರಾಮಾ + ಎಂದು

ಕೇಶಿರಾಜನು ನಿಪಾತ, ಅವಧಾರಣೆ, ವಿಶಂಕೆಗಳ ಜೊತೆಗೆ ಮೆಚ್ಚುಗೆ, ಆಕ್ಷೇಪ, ಬೆಚ್ಚ, ಓ, ಅಭ್ಯುಪಗಮಾರ್ಥದ 'ಎಮ' ಶಬ್ದ, ಕಟ್ಟಚ್ಚರಿಯ ಗಡಾರ್ಥ, ಭೇದದಲ್ಲಿಯೂ ಸ್ವರ ಪರವಾದರೆ ಸಂಧಿಯಿಲ್ಲ ಎಂದಿದ್ದಾನೆ. ಈ ಅಭಿಪ್ರಾಯ ನಾಗವರ್ಮನಲ್ಲಿ ಇಲ್ಲ.

**ಶಬ್ದಸ್ಮೃತಿಯಲ್ಲಿ-**

ಅರಮೆ ಎಲೇ ಏ ಓಹೋ
ಅರೆ ಎಂಬ ನಿಪಾತಮುಂ ವಿಶಂಕಾಪರಮುಂ
ದೊರೆವೆತ್ತವಧಾರಣಮುಂ
ಸ್ವರೂಪದಿಂ ನಿಲ್ಕುಮವಿಕೃತಂಗಳವೆಂದುಂ -ಎಂದಿದೆ (ಸಂಧಿ ೪೬)

ಇವರಲ್ಲಿ ಅರಮೆ, ಎಲೇ, ಏ, ಓಹೋ, ಅರೆ ಎಂಬ ಐದನ್ನು ನಿಪಾತ ಎನ್ನಲಾಗಿದೆ. ಇದಲ್ಲದೆ ವಿಶಂಕೆ, ಅವಧಾರಣೆ ಸೇರಿಸಿ ಇವು ಅವಿಕೃತಂಗಳೆಂದಿದ್ದಾನೆ. ಇಲ್ಲಿ ಕೆಲವು ವಿಶೇಷಗಳನ್ನು ಗಮನಿಸಬಹುದು.

೧. ಏ ಓ ಅಂತ್ಯದಲ್ಲಿರುವ ನಿಪಾತಗಳೆಂದು ಭೂಷಣದಲ್ಲಿದೆ. ಆದರೆ ಉದಾಹರಣೆಗಳಲ್ಲಿ ಹ್ರಸ್ವ ಎ ಮತ್ತು ಧೀರ್ಘ ಓ ಮಾತ್ರ ಇವೆ. ಆದುದರಿಂದ ಟೀಕು ಹೇಳುವ 'ಏಕಾರಾಂತಮುಂ ಓಕಾರಾಂತಮುಮಪ್ಪ' ಎಂಬುದು ಅರ್ಥಹೀನವಾಗುತ್ತದೆ.

೨. ಕೇಶಿರಾಜ 'ಏವರ್ಣ, ಒವರ್ಣ' ಎಂದಿದ್ದಾನೆ. ಆದರೆ ಅವನ ಉದಾಹರಣೆಗಳಲ್ಲಿ ಏ ಓ ಗಳಿವೆಯೇ ಹೊರತು ಹ್ರಸ್ವ 'ಒ' ಇಲ್ಲ.

೩. ಸ್ಮೃತಿ ಇವೆರಡಕ್ಕಿಂತ ಖಚಿತತೆಯನ್ನು ಪಾಲಿಸಿದೆ. 'ಅರಮೆ, ಎಲೇ, ಏ, ಓಹೋ, ಅರೆ' ಎಂಬ ಶಬ್ದಗಳನ್ನು ನಿಪಾತ ಎಂದಿರುವುದರಿಂದ ಈ ಶಬ್ದಗಳಲ್ಲಿ ಮಾತ್ರ ಎಂದು ನಿಷ್ಕರ್ಷಿಸಿದ್ದು ಗಮನಾರ್ಹ. 'ನಿಪಾತ' ಎನ್ನುವುದು ಅಂತಹ ಶಬ್ದಗಳಿಗೇ.

೪. 'ಎಲೆ' ಭೂಷಣದಲ್ಲಿ ಹ್ರಸ್ವವಾಗಿದೆ. ಸ್ಮೃತಿ, ದರ್ಪಣ ಅದನ್ನು ದೀರ್ಘವಾಗಿ ಕೊಟ್ಟಿವೆ. ಸ್ಮೃತಿ ಪ್ಲುತವನ್ನು ತೆಗೆದುಕೊಂಡಿಲ್ಲ. 'ಅವಿಕೃತಿ' ಎಂಬುದನ್ನು ಕೇಶಿರಾಜ ಸ್ಮೃತಿಯಿಂದಲೇ ಸ್ವೀಕರಿಸಿದಂತಿದೆ.

೫. ಈ ಮೂರು ಕೃತಿಗಳಲ್ಲಿ ಬಂದಿರುವ ಉದಾಹರಣೆಗಳಲ್ಲಿ ಬಹಳಷ್ಟು ಹೋಲಿಕೆ ಇದೆ.

**ಆದೇಶ ಸಂಧಿ:**

ಸೂತ್ರ "ವರ್ಗ ಪ್ರಥಮಾನಾಂ ತೃತೀಯಾ: ಸಮಾನೋತ್ತರ ಪದಾದಾ" (ಸೂತ್ರ ೨೮) ಸಮಾಸದ ಉತ್ತರ ಪದದ ಆದಿಯಲ್ಲಿರುವ ವರ್ಗ ಪ್ರಥಮಾಕ್ಷರಗಳಿಗೆ ತೃತೀಯಾಕ್ಷರಗಳು ಬರುತ್ತವೆ).

**ಉದಾ:**

ಪೞ + ಕನ್ನಡ = ಪೞಗನ್ನಡ

ಅೞ್ + ಕಬ್ಬ = ಅೞ್ಗಬ್ಬ

ಕೆಂ + ತಳಿರ್ = ಕೆಂದಳಿರ್

ಬಾನ್ + ತೊರೆ = ಬಾಂದೊರೆ

ನುಣ್ + ಪರಲ್ =ನುಣ್ಬರಲ್

ತಣ್ + ಪುಟಿಲ್ = ತಣ್ಬುಟಿಲ್.

ಸೂತ್ರ ೨೯ರಲ್ಲಿ "ನೌದಿಷ್ಟ ರೇಫಾತ್" ಎಂದಿದ್ದಾನೆ. ಎಂದರೆ ವರ್ಗ ಪ್ರಥಮಾಕ್ಷರಗಳು ಆದೇಶವಾಗಿ ರೇಫೆಗೆ ಪರವಾಗಲು ಅಲ್ಲಿ ಆದೇಶಸಂಧಿ ಇಲ್ಲ. ಇದು ಆದೇಶ ನಿಷೇಧ.

ಉದಾ :

ಮಾರ್ + ಕೊರಲ್ = ಮಾರ್ಕೊರಲ್

ಮಾರ್ + ತಲೆ = ಮಾರ್ತಲೆ

ಮಾರ್ + ಪಡೆ = ಮಾರ್ಪಡೆ

ಒರ್ + ಕೈ = ಒರ್ಕೈ

ಒರ್ + ತಲೆ = ಒರ್ತಲೆ

ಒರ್ + ಪಿಡಿ = ಒರ್ಪಿಡಿ

ಉತ್ತರ ಪದಗಳಲ್ಲಿ ವರ್ಗ ಪ್ರಥಮಾಕ್ಷರಗಳಾದ ಕ,ತ,ಪ ಗಳಿದ್ದರೂ, ಅಲ್ಲಿ ಆದೇಶ ಸಂಧಿಯಿಲ್ಲ. ಕಾರಣ ಅವು ಆದೇಶದಿಂದ ರೇಫೇ 'ರ' ಕಾರಕ್ಕೆ ಪರವಾಗಿವೆ.

ಸೂತ್ರ ೩೦ರಲ್ಲಿ "ಚಟ ವರ್ಗಯೋಶ್ಚ" ಎಂದಿದೆ. ಇದರಿಂದ ಚ,ಟಗಳ ಪರವಾದರೂ ಸಂಧಿಯಿಲ್ಲ. ಕೇವಲ ಕತಪಗಳಿಗೆ ಮಾತ್ರ ಸಂಧಿಯನ್ನು ವಿಧಿಸಲಾಗಿದೆ. ಉದಾ: ಅಳಿಚೆನ್ನಂ, ಕಡುಬಾಗಿ, ಉರಚೆಲ್ಲಿ, ಮಾತುಟಿಪ್ಪರಂ, ಪೊಸಟಂತಂ, ಮಾಣಿಕ ಟಿಕ್ಕೆ

ಮೇಲಿನ ನಿಯಮದಂತೆ ನಾಗವರ್ಮನನ್ನೇ ಅನುಸರಿಸಿದ ಕೇಶಿರಾಜನು ತನ್ನ ಶ.ಮ.ದ.ದ ಸೂತ್ರ ೭೫ರಲ್ಲಿ "ಇರೆ ವರ್ಗ ಪ್ರಥಮಂಗಳ್ ಪರದೊಳ್ ಚಟವರ್ಗಮುಟಿಯೆ ತಮ್ಮ ತೃತೀಯಾಕ್ಷರಮಕ್ಕುಂ ಪದವಿಧಿಯೊಳ್" ಎಂದಿದ್ದಾನೆ. 'ಪದ ವಿಧಿಯೊಳ್' ಎಂದರೆ ಸಮಾಸದಲ್ಲಿ ಎಂದರ್ಥ. ಇದರಲ್ಲೇ ಅವನು "ಪರಿಹರಿಸಲ್ಬಾರದಲ್ಲಿ ಬಹುಳಸ್ಥಿತಿಯಂ" ಎಂದು ಒಂದೇಮಾತಿನಲ್ಲಿ ಹೇಳಿ ಕೈ ತೊಳೆದುಕೊಂಡಿದ್ದಾನೆ. ಏಕೆಂದರೆ ಆದೇಶ ಸಂಧಿಯ ಅಪವಾದಗಳು ಬಹಳಷ್ಟಿವೆ.

ಇದನ್ನೇ ಮುಂದಿನ ಸೂತ್ರದಲ್ಲಿ ನಾಗವರ್ಮನು ಹೇಳಿದ್ದಾನೆ. "ಸ್ವರ ಯರಲೇಭ್ಯೋ ಬಹುಳಂ ವ: ಪ ವರ್ಗಸ್ಯ" (ಸೂ.೩೧). ಸ್ವರ ಮತ್ತು ಯ ರ ಲ ಕಾರಗಳಿಗೆ ಪರವಾದ ಪ ವರ್ಗಾಕ್ಷರಗಳು ವಕಾರಾದೇಶವನ್ನು ಪಡೆಯುತ್ತವೆ. ಆದರೆ ಬಹುಳತೆಯಿಂದ ಕೆಲವೆಡೆ ಆದೇಶವಾಗದು. ಉದಾಹರಣೆಗೆ ಪೊಸವೆಸರ್, ಎಳವಿದಿರ್, ಮರವಣ್ಣೆ, ಕೆಯ್ವುಜುು, ಮೆಯ್ವೆಸಂ, ತಾಯ್ವೆಸೆ, ಬಲ್ವಡೆ, ಕಲ್ವಾಱು, ಪುಲ್ವಸೆ, ನೀರ್ವಾವು, ನೀರ್ವೆಳಸು, ನೀರ್ವಾನಸಂ- ಈ ಮೊದಲಾದವುಗಳನ್ನು ನೋಡಬಹುದು. ಆದರೆ ಬಹುಳತೆ ಎಂದಿರುವುದರಿಂದ ನಿಡುಬೆಸ್, ಉಡುಮಾಗಂ, ಕೆಯ್ಮಾಡಿದಂ ಕೆಯ್ಮುಱಿಯಂ, ಪೆರ್ಬಾಗಿಲ್, ಕಾರ್ಮುಗಿಲ್, ಬಲ್ಮುಗುಳ್, ಪುಲ್ಮಱುಳ್ ಇವುಗಳಲ್ಲಿ ಸಂಧಿಯಿಲ್ಲ. ವಕಾರಾದೇಶ ಸಮಾಸಗಳಲ್ಲಿ ಮಾತ್ರವಲ್ಲದೆ ಕೆಲವು ವಾಕ್ಯಗಳಲ್ಲೂ ಆಗುತ್ತದೆ. ಉದಾ: ಊರ್ಗೆವೋದಂ. ಲಕಾರ, ಯಕಾರಗಳನ್ನು ಬಿಟ್ಟು ಉಳಿದ ವ್ಯಂಜನಾಂತಗಳಿಗೆ ಸ ಕಾರ ಪರವಾದರೆ ಅದಕ್ಕೆ ಆದೇಶವಾಗಿ ಚ ಕಾರ ಪ್ರಾಪ್ತಿಸುವುದು. ಉದಾ: ನುಣ್ + ಸರಂ = ನುಣ್ಚರಂ; ಇನ್ + ಸರಂ = ಇಂಚರಂ, ಒರ್ + ಸವಡಿ = ಒರ್ಚವಡಿ. 'ಬಹುಳತೆ' ಎಂದಿರುವುದರಿಂದ ಕಣ್ಸೋಲಂ, ಕೀಳ್ಸಿರಿ ಎಂಬಿವುಗಳಲ್ಲಿ ಚಕಾರಾದೇಶವಿಲ್ಲ. ಇನ್ನು ಕೆಲವೊಮ್ಮೆ ಸ ಕಾರಕ್ಕೆ ಜ ಕಾರಾದೇಶವಾಗುವುದು. ವಾಸ್ತವವಾಗಿ ಸಕಾರಕ್ಕೆ ನೇರವಾಗಿ ಜ ಕಾರಾದೇಶ ನೇರವಾಗಿ ಜಕಾರಾದೇಶವಾಗದು. ಅದು ಮೊದಲು ಚ ಕಾರವಾಗಿ ಅನಂತರ ಜ ಕಾರಾದೇಶವಾಗುವುದು. ಸ > ಚ > ಜ ದಂತೆ.

ಉದಾ: ಪೊನ್ ಸುರಿಗೆ = ಪೊಂಚುರಿಗೆ, ಪೊಂಜುರಿಗೆ

ಮುನ್ ಸೂರ್ = ಮುಂಚೂರ್, ಮುಂಜೂರ್

ಸೂತ್ರ ೩೩ರಲ್ಲಿ "ಸಂಖ್ಯಾಯಾಂ ಥತಂ" ಎಂದಿದೆ. ಲ ಕಾರ, ಯ ಕಾರಗಳನ್ನುಳಿದು ಉಳಿದ ವ್ಯಂಜನಗಳಿಗೆ ಸ ಕಾರಕ್ಕೆ ಪರವಾದ ಥ ಕಾರವು ಪ್ರಾಪ್ತಿಸುವುದು.

ಉದಾ: ಇರ್ + ಸಾಸಿರಂ = ಇರ್ಥಾಸಿರಂ

ಎಣ್ + ಸಾಸಿರಂ =ಎಣ್ಥಾಸಿರಂ

ಲ ಕಾರ, ಯ ಕಾರಗಳಿಗೆ ಪರವಾದ ಸ ಕಾರಕ್ಕೆ ಥ ಕಾರಮಾಗದು. ಊದಾ: ನಾಲ್ಸಾಸಿರಂ

**ದ್ವಿತ್ವ ಸಂಧಿ:** ಪೂರ್ವ ಪದಾದಿಯಲ್ಲಿ ಹ್ರಸ್ವ ಸ್ವರವಿರುವ ನ-ಣ-ಲ-ಯ-ಳ ಗಳಿಗೆ ಸ್ವರ ಪರವಾದರೆ ದ್ವಿತ್ವವಾಗುವುದು. ಇದನ್ನೇ ನಾಗವರ್ಮನು ಸೂತ್ರ ೩೪ರಲ್ಲಿ "ನಣಲಯಳಾ ದ್ವಿ: ಸ್ವರೇ ಹ್ರಸ್ವ ಪೂರ್ವಾ:" ಎಂದು ತಿಳಿಸಿದ್ದಾನೆ.

ಅವನು ಕೊಡುವ ಉದಾಹರಣೆ-

೧. ಪೊನ್ + ಉಳ್ಳವನೆ = ಪೊನ್ನುಳ್ಳವನೆ

೨. ಮಣ್ + ಎಲ್ಲಂ = ಮಣ್ಣೆಲ್ಲಂ

೩. ಪುಲ್ + ಇಲ್ಲಂ = ಪುಲ್ಲಿಲ್ಲಂ

೪. ಕೆಯ್ + ಆದುದು = ಕೆಯ್ಯಾದುದು

೫. ಮುಳ್ + ಉಳ್ಳ = ಮುಳ್ಳುಳ್ಳ

ನಣಯಲಳಾಂತ ಪದಗಳ ಆರಂಭದಲ್ಲಿ ದೀರ್ಘವಿದ್ದರೆ, ಅನೇಕ ವರ್ಣಗಳಿದ್ದರೆ, ಅವ್ಯಯದ ಕೊನೆಯಲ್ಲಿ ಉಕ್ತ ವ್ಯಂಜನವಿದ್ದರೆ ಅಲ್ಲಿ ದ್ವಿತ್ವ ಸಂಧಿಯಿಲ್ಲ. ಉದಾ: ತಾನೆಂದುಂ, ಜಾಣಿಂದಂ, ಮೇಲಾಳ್ಗಳ್, ಬಾಯಾಜಲ್; ಕೀಳೀತಂ. ಮೇಲಿನ ಉದಾಹರಣೆಗಳಲ್ಲಿ ತಾನ್, ಜಾಣ್, ಮೇಣ್, ಬಾಯ್, ಕೀಳ್' -ಇವುಗಳ ಆದಿಯಲ್ಲಿ ದೀರ್ಘವಿರುವುದರಿಂದ ದ್ವಿತ್ವ ಸಂಧಿಯಾಗಿಲ್ಲ. ನ,ಣ,ಲ,ಯ,ಳ ಗಳು ಅಂತ್ಯದಲ್ಲಿದ್ದರೂ ಪೂರ್ವದಲ್ಲಿರುವುದು ಅನೇಕಾಕ್ಷರ ಪದವಾದರೆ ಅಂತಹ ಪದಕ್ಕೆ ಸ್ವರ ಪರವಾದಾಗ ದ್ವಿತ್ವ ಬರುವುದಿಲ್ಲ.

ಉದಾ:

ಕಡನ್ + ಇಲ್ಲಂ = ಕಡನಿಲ್ಲಂ

ಸವಣ್ + ಆರುಂ = ಸವಣಾರುಂ

ಪವಣ್ + ಉಂಟು = ಪವಣುಂಟು

ಕವಲ್ + ಇಲ್ಲಂ = ಕವಲಿಲ್ಲಂ

ತೊದಳ್ + ಇಲ್ಲದ = ತೊದಳಿಲ್ಲದ

೩೪ನೆಯ ಸೂತ್ರದ ಪೊನ್, ಮಣ್, ಪುಲ್, ಕೆಯ್, ಮುಳ್ ಇತ್ಯಾದಿಗಳಲ್ಲಿ ನಣಲಯಳಗಳ ಹಿಂದೆ ಒಂದೇ ಹ್ರಸ್ವಾಕ್ಷರವಿದೆ. ಕವಲ್, ಸವಣ್, ಕದನ್- ಇತ್ಯಾದಿಗಳು ಅನೇಕಾಕ್ಷರ ಪದಗಳು. ಅಂತಹುವುಗಳಲ್ಲಿ ದ್ವಿತ್ವ ಬರುವುದಿಲ್ಲ.

ಅವ್ಯಯ ಪದಗಳು ಪೂರ್ವದಲ್ಲಿದ್ದು ಅವುಗಳಿಗೆ ಸ್ವರ ಪರವಾಗಲು ಅಲ್ಲಿಯೂ ನಣಲಯಳಗಳಿಗೆ ದ್ವಿತ್ವ ಸಂಧಿ ಪ್ರಾಪ್ತಿಸದು. ಇದನ್ನೇ ನಾಗವರ್ಮನು ಸೂತ್ರ ೩೬ರಲ್ಲಿ "ಅವ್ಯಯೇಪಿ" ಎಂದು ತಿಳಿಸಿದ್ದಾನೆ. ಆದಕ್ಕೆ ಅವನು ಕೊಡುವ ಉದಾಹರಣೆಗಳು:

ಇದುದಲ್ + ಅಪೂರ್ವಂ = ಇದುದಲಪೂರ್ವಂ

ಸ್ಮರನಪೋಲ್ + ಈತಂ = ಸ್ಮರನಪೋಲೀತಂ

ನಾಗವರ್ಮನು ಹೇಳಿದ ಕನ್ನಡ ಸಂಧಿಗಳಲ್ಲಿ ಎರಡು ವಿಧ. ಒಂದು ಸ್ವರ ಸಂಧಿ. ಮತ್ತೊಂದು ವ್ಯಂಜನಸಂಧಿ. ಈ ಸಂಧಿಗಳಲ್ಲಿ ನಡೆಯುವ ಲೋಪ, ಆಗಮ, ಆದೇಶ ಕ್ರಿಯೆಗಳನ್ನು ಅನುಸರಿಸಿ, ಒಟ್ಟು ನಾಲ್ಕು ಬಗೆಯ ಸಂಧಿಗಳನ್ನು ನಾವು ಕಾಣಬಹುದು..

ಯಾವುದೇ ಭಾಷೆಯಲ್ಲಾಗಲಿ ನಾಲ್ಕು ಸನ್ನಿವೇಶಗಳಲ್ಲಿ ಸಂಧಿ ಏರ್ಪಡುತ್ತದೆ. ಇದು ಸರ್ವೇ ಸಾಮಾನ್ಯ. ಅವು-

೧. ಸ್ವರಕ್ಕೆ ಸ್ವರ ಪರವಾದಾಗ -(v+v) ಉದಾ: ಮಾತು+ಇನ ಮಾತಿನ (ಲೋಪ)

೨. ಸ್ವರಕ್ಕೆ ವ್ಯಂಜನ ಪರವಾದಾಗ (v+c) ಉದಾ: ಪಳ + ಕನ್ನಡ ಪಳಗನ್ನಡ (ಆದೇಶ)

೩. ವ್ಯಂಜನಕ್ಕೆ ಸ್ವರ ಪರವಾದಾಗ - (c+v) ಉದಾ: ಪೊನ್ + ಉಳ್ಳವನೆ ಪೊನ್ನುಳ್ಳವನೆ (ದ್ವಿತ್ವ)

೪. ವ್ಯಂಜನಕ್ಕೆ ವ್ಯಂಜನ ಪರವಾದಾಗ (c+c) ಉದಾ: ಪದಿವೆಣ್ + ಸಾಸಿರ ಪದಿವೆಣ್ಬಾಸಿರಂ

ಹೀಗೆ ನಾಗವರ್ಮನ ಕ.ಭಾ.ಭೂ.ದ ದ್ವಿತಿಯ ಪರಿಚ್ಛೇದವಾದ 'ಸಂಧಿ ವಿಧಾನಂ' ಎಂಬಲ್ಲಿ ಕೇವಲ ೧೯ ಸೂತ್ರಗಳಲ್ಲಿ ಕನ್ನಡ ಸಂಧಿಗಳನ್ನು ಕಾಣಬಹುದು. ಅವನ ಈ 'ಸಂಧಿ ವಿಧಾನಂ' ಸೂಕ್ಷ್ಮವಾಗಿಯೂ ಸಂಕ್ಷೇಪವಾಗಿಯೂ ಇದ್ದು, ಪ್ರಯೋಗಗಳು ಕಡಿಮೆ ಇದ್ದರೂ, ಮುಂದಿನ ವೈಯಾಕರಣಿಗೆ ಮಾರ್ಗದರ್ಶನ ನೀಡುವಂತಿದೆ.

**ತೆಲುಗು ಭಾಷೆಯ ಸಂಧಿಗಳು:**

ತೆಲುಗು ಭಾಷೆಯ ಸಂಧಿಗಳು ಕನ್ನಡ ಭಾಷೆಯ ಸಂಧಿಗಳಂತೆ ವಿಸ್ತೃತವಾದಂಥವು. ತೆಲುಗು ಭಾಷೆ ಹೆಚ್ಚಾಗಿ ಸಂಸ್ಕೃತವನ್ನು ಅನುಕರಿಸಿದರೂ ಸಂಧಿಯ ವಿಷಯದಲ್ಲಿ ತನ್ನದೇ ಆದ ವೈಶಿಷ್ಟ್ಯವನ್ನು ಕಾಪಾಡಿಕೊಂಡು ಬಂದಿದೆ. ಸಂಧಿಯ ಬಗ್ಗೆ ಪ್ರಾಚೀನ, ಅರ್ವಾಚೀನ ವೈಯಾಕರಣರ ನಿಲುವು ಭಿನ್ನವಾಗಿದೆ. ಪ್ರಾಚೀನ ವೈಯಾಕರಣನಾದ ಕೇತನನಿಂದ ಅರ್ವಾಚೀನ ವೈಯಾಕರಣನಾದ ಚಿನ್ನಯ ಸೂರಿಯವರೆಗೂ ತೆಲುಗು ಭಾಷೆಯ ಜಾಯಮಾನವನ್ನು ಉಳಿಸಿಕೊಂಡಿರುವುದು

ಸಂಧಿ ಪ್ರಕರಣದಲ್ಲೂ ಮನಗಾಣಬಹುದು. ತೆಲುಗು ವೈಯಾಕರಣರು ತೆಲುಗು ಸಂಧಿಗಳ ವಿಷಯದಲ್ಲಿ ಕನ್ನಡಕ್ಕಿಂತ ಹೆಚ್ಚು ವೈವಿಧ್ಯವನ್ನು ತೋರಿಸಿದ್ದಾರೆ.

ಸಂಸ್ಕೃತ ವ್ಯಾಕರಣದಲ್ಲಿ ಸ್ವರಕ್ಕೆ ಸ್ವರ ಪರವಾದಾಗ ದೀರ್ಘವೋ, ವೃದ್ಧಿಯೋ, ಗುಣವೋ ಸಂಭವಿಸುವುದುಂಟು. ತೆಲುಗು ಭಾಷೆಯಲ್ಲಿ ಹಾಗಲ್ಲದೆ ಪೂರ್ವಸ್ವರವು ಲೋಪಿಸಿ ಪರಸ್ವರವು ನಿಲ್ಲುವುದು. ಸಂಸ್ಕೃತದಲ್ಲಿ ಇಂಥ ಸಂಧಿಗೆ 'ಪರರೂಪ ಸಂಧಿ' ಎಂದು ಕರೆದಿದ್ದಾರೆ. ಆದರೆ ತೆಲುಗಿನಲ್ಲಿ ಇದನ್ನೇ 'ಸಂಧಿ' ಎಂದು ನಿಷ್ಕರಿಸಲಾಗಿದೆ.

ಚಿನ್ನಯ ಸೂರಿಯಂಥ ಲಾಕ್ಷಣಿಕನು ಸಂಧಿಯ ಬಗ್ಗೆ ಈರೀತಿ ತಿಳಿಸಿದ್ದಾನೆ: "ಪೂರ್ವ ಪರಸ್ವರಗಳಿಗೆ ಪರಸ್ವರವು ಆದೇಶವಾಗುವುದು ಸಂಧಿ" (ಬಾ.ವ್ಯಾ. ಸಂಧಿ ೧).

ತೆಲುಗು ಭಾಷೆಯಲ್ಲಿ ಈರೀತಿ ಪರರೂಪ ಸಂಧಿಯನ್ನೇ ಪಾರಿಭಾಷಿಕವಾಗಿ 'ಸಂದಿ' ಎಂದು ಹೇಳಿದ್ದರಿಂದ ಇತರ ವ್ಯಾಕರಣ ಕಾರ್ಯಗಳನ್ನು ಆಗಮ, ಆದೇಶ ಮುಂತಾದ ಹೆಸರುಗಳಿಂದ ಕರೆಯಲಾಗಿದೆ.

ಆಂಧ್ರ ಭಾಷಾ ಭೂಷಣದಲ್ಲಿ ಸಂಧಿಯ ಉಲ್ಲೇಖ ೧೮ನೆಯ ಪದ್ಯದಲ್ಲಿ ಬಂದಿದೆ.

> "ಆಱು ಸಮಾಸಮುಲಿರುವದಿ
> ಯಾಱಂತಮು ಲಾಱು ಸಂಧುಲವ್ಯಯಮುಲು ಪೆ
> ಕ್ಕಾಱಿಂಟಿ ಸಗಮು ರೀತುಲು
> ನಾಱಿಂಟಿಕಿ ನೊಕ್ಕಡೆಕ್ಕುಡೌನು ವಿಭಕ್ತುಲ್ (ಪದ್ಯ ೧೮)

ತನ್ನ ಕೃತಿಯಲ್ಲಿ ೬ ಸಮಾಸಗಳು, ೨೬ ಅಂತಗಳು, ೬ ಸಂಧಿಗಳು, ಹಲವು ಅವ್ಯಯಗಳು, ೩ ರೀತಿಗಳು, ೭ ವಿಭಕ್ತಿಗಳು - ಇವುಗಳನ್ನು ತಾನು ವಿವರಿಸುವುದಾಗಿ ತಿಳಿಸಿದ್ದಾನೆ. ಆದರೆ ಅವುಗಳನ್ನು ವಿವರಿಸುವಲ್ಲಿ ಒಂದು ಕ್ರಮವಿಲ್ಲ. ಎಲ್ಲವೂ ಬದಲಾಗಿವೆ. ಸಮಾಸಗಳಲ್ಲಿ ಆರು ಎಂದು ಹೆಸರಿಸಿದ್ದರೂ ಕೇವಲ ನಾಲ್ಕನ್ನು ಮಾತ್ರ ಪದ್ಯ ೧೧೦ರಲ್ಲಿ ಉಲ್ಲೇಖಿಸಿದ್ದಾನೆ. ಇನ್ನುಳಿದ ಎರಡನ್ನು ಕೈಬಿಟ್ಟಿದ್ದಾನೆ.

ಹಾಗೆಯೇ ಅವನು ಉಲ್ಲೇಖಿಸಿದ ಆರು ಸಂಧಿಗಳಾವುವು ಎಂದು ವಿವರಿಸಿಲ್ಲವಾದರೂ ತೆಲುಗು ಭಾಷೆಯ ಜಾಯಮಾನಕ್ಕನುಗುಣವಾಗಿ ಹಲವಾರು ಸಂಧಿ ಕಾರ್ಯಗಳನ್ನು ಹೇಳಿದ್ದಾನೆ.

ಕೇತನನ ಆಂ. ಭಾ.ಭೂ. ದಲ್ಲಿಯ ಪದ್ಯ ೪೪ರಿಂದ ಪದ್ಯ ೬೭ರವರೆಗೆ ಸಂಧಿಯನ್ನು ಕುರಿತು ವಿವರಿಸಲಾಗಿದೆ. ಸಂಧಿಯ ವ್ಯಾಖ್ಯೆ ಪದ್ಯ ೪೪ರಲ್ಲಿದೆ. ಆದರಿಂದ ಸಂಧಿಯ ಬಗ್ಗೆ ಕೇತನನ ಅಭಿಪ್ರಾಯವೇನೆಂಬುದು ತಿಳಿಯುತ್ತದೆ.

ಮೊದಲಿ ಪದಮು ತುದಿ ವರ್ಣಮು
ಪದಲಕ ಪೈ ಪದಮು ಮೊದಲಿ ವರ್ಣಮು ತೋಡಂ
ಗದಿಯಗ ಸಂಧುಲು ನಾದಗು
ವಿದಿತಪುದತ್ಸಂಧು ಲೆಲ್ಲ ವಿವರಿಂತು ದಗನ್

ಅವನ ಪ್ರಕಾರ "ಪೂರ್ವ ಪದದ ಕೊನೆಯ ವರ್ಣವು ಪರ ಪದದ ಮೊದಲ ವರ್ಣದೊಂದಿಗೆ ಕೂಡುವುದು ಸಂಧಿ". ಸಂಧಿಯಾಗಬೇಕಾದರೆ ಎರಡು ಪದಗಳಿರಬೇಕು. ಒಂದೇ ಪದದಲ್ಲಿ ಎರಡು ವರ್ಣಗಳ ನಡುವೆ ಆಗುವುದನ್ನು ಸಂಧಿ ಎಂದು ಕೇತನನಂತಹ ವ್ಯಾಕರಣಕಾರರು ಕರೆದಿಲ್ಲ ಎಂಬುದನ್ನು ಗಮನಿಸಬೇಕು.

ಕೇತನನು ಹೇಳಿದ ಸಂಧಿಯ ಲಕ್ಷಣ ಸ್ವರ ಮತ್ತು ವ್ಯಂಜನಗಳೆರಡನ್ನೂ ಒಳಗೊಳ್ಳುತ್ತವೆ. ಆದುದರಿಂದ ಅವನು 'ಸಂಧಿ' ಶಬ್ದಕ್ಕೆ ಕೊಟ್ಟಿರುವ ಅರ್ಥ ವ್ಯಾಪ್ತಿ ದೊಡ್ಡದು.

ನನ್ನಯ ಕಾಲದ (೧೧ನೇ ಶ.ಮಾ) ಮತ್ತು ನನ್ನಯ ಪೂರ್ವದ ಗದ್ಯ ಶಾಸನಗಳಲ್ಲಿ ಸಂಧಿ ಮಾಡಿರುವ ಸ್ಥಳಗಳು, ವಿಸಂಧಿಯ ಸ್ಥಳಗಳು, ಯಕಾರಾಗಮ ಆಗಿರುವ ಸ್ಥಳಗಳು - ಈ ಎಲ್ಲವೂ ಕಂಡು ಬರುತ್ತಿವೆ. ಇವುಗಳಲ್ಲಿ ವಿಸಂಧಿಯಾಗಿ ಬರೆದಿರುವ ಸ್ಥಳಗಳೇ ಹೆಚ್ಚು. ಸಂಧಿ ಪಾಲಿಸಿದ ಸ್ಥಳಗಳಲ್ಲೂ ನಿಶ್ಚಿತವಾದ ನಿಯಮವೇನೂಕಾಣದು. ಪದ್ಯ ಶಾಸನಗಳಲ್ಲಿ ಸಂಧಿ ಮಾಡಿರುವುದನ್ನು ನೋಡುತ್ತೇವೆ. ಹೀಗೆ ಅವ್ಯವಸ್ಥಿತ ರೂಪದಲ್ಲಿದ್ದ ಸಂಧಿಗಳನ್ನು ಒಂದು ರೂಪಕ್ಕೆ ತಂದು ನನ್ನಯ ಮಹಾಕವಿ ತನ್ನ ಭಾರತದಲ್ಲಿ ಬಳಸಿದ್ದಾನೆ. ಹೀಗೆ ನನ್ನಯನು ಪರಿಷ್ಕರಿಸಿ ಬಳಸಿದ ಸಂಧಿ ಕಾರ್ಯಗಳನ್ನು ಸೂತ್ರ ಬದ್ಧವಾಗಿ ಮಾಡಿರುವ ಕೀರ್ತಿ ಕೇತನನಿಗೆ ಸಲ್ಲುತ್ತದೆ. ಅವನು ಹೇಳಿರುವ ಸಂಧಿಯ ಎಲ್ಲ ಲಕ್ಷಣಗಳು ನನ್ನಯನ ಭಾರತದಲ್ಲಿವೆ. ಇದರಿಂದ ಕೇತನನು ನನ್ನಯನ ಭಾರತವನ್ನು ಎಷ್ಟು ಜಾಗರೂಕತೆಯಿಂದ ಪರಿಶೀಲಿಸಿರಬಹುದೆಂದು ಸಹೃದಯರು ತಿಳಿಯಬಹುದು. ವ್ಯಾಕರಣದ ರಚನೆಗೆ ಆ ಲಕ್ಷ್ಯಗ್ರಂಥ ಸ್ಫೂರ್ತಿ ನೀಡಿದೆ ಎನ್ನಬಹುದು.

ಕೇತನನ ಸಂಧಿಯ ನಿರೂಪಣೆ ಹೀಗಿದೆ:[೮]

೧. ಉತ್ವ ಸಂಧಿ; ೨. ಮಧ್ಯಮ ಪುರುಷದ ಇಕಾರ ಸಂಧಿ; ೩. ಕಿ ಷಷ್ಠಿ ಸಂಧಿ (ಷಷ್ಠಿಯಲ್ಲಿ ಬರುವ 'ಕಿ'ಗೆ ಸ್ವರ ಪರವಾದಾಗ ಆಗುವ ಸಂಧಿ); ೪. ಅದಿ- ಇದಿಗಳ ಸಂಧಿ; ೫. ಯಡಾಗಮ ಸಂಧಿ; ೬. ನುಗಾಗಮ ಸಂಧಿ; ೭. ದ್ರುತ ಸಂಧಿ; ೮.ಶತ್ರರ್ಥಕ ಚು ವರ್ಣದ ಮೇಲಿರುವ ದ್ರುತಕ್ಕೆ ಲೋಪ; ೯. ಸರಳಾದೇಶ ಸಂಧಿ; ೧೦.ಗಸಡವಾದೇಶ ಸಂಧಿ; ೧೧. ಪುಂಪ್ವಾದೇಶ ಸಂಧಿ; ೧೨. ರುಗಾಗಮ ಸಂಧಿ; ೧೩. ತ್ರಿಕ ಸಂಧಿ; ೧೪. ಮು-ನಲು ಎಂಬುವು ಸೇರುವ ಸಂಧಿ; ೧೫. ಪೇರು, ಆಲು ಎಂಬ ಶಬ್ದಗಳಿಗೆ ಸಂಬಂಧಿಸಿದ ಸಂಧಿ.

ತೆಲುಗಿನಲ್ಲಿ ಮುಖ್ಯವಾಗಿ ಆರು ಸಂಧಿಗಳಿವೆ ಎಂಬುದು ಕೇತನನ ಅಭಿಪ್ರಾಯವಾದರೂ ತೆಲುಗಿನಲ್ಲಿ ಎಲ್ಲ ತರಹದ ಆಗಮಾದಶಗಳನ್ನು ವಿವರಿಸುವ ಉದ್ದೇಶ ಅವನದು.

**ಉತ್ವ ಸಂಧಿ:**

ಈ ಸಂಧಿಯ ಉಲ್ಲೇಖ ಕೇತನನ ಸೂತ್ರ ೪೫ರಲ್ಲಿದೆ. ಉತ್ವಸಂಧಿ ನನ್ನಯನ ಪೂರ್ವಕಾಲದ ಶಾಸನಗಳಲ್ಲಿ ಕೆಲವು ಕಡೆ ನಿತ್ಯವಾಗಿಯೂ ಮತ್ತೆ ಕೆಲವು ಕಡೆ ವಿಸಂಧಿಯಾಗಿಯೂ ಕಾಣಿಸಿಕೊಂಡಿದೆ. ಆಂಧ್ರ ಶಬ್ದ ಚಿಂತಾಮಣಿಯಲ್ಲಿ ಈ ಸಂಧಿಯನ್ನು ನಿತ್ಯವೆಂದೇ ಹೇಳಲಾಗಿದೆ. ಕೇತನನು ಕೂಡ ನನ್ನಯನಂತೆ ಇದನ್ನು ನಿತ್ಯ ಸಂಧಿಯಾಗಿಯೇ ಸ್ವೀಕರಿಸಿದ್ದಾನೆ. ಅವನಿಂದ ಚಿನ್ನಯ ಸೂರಿಯವರೆಗೂ ಈ ಸಂಧಿಯನ್ನು ಲಾಕ್ಷಣಿಕರೆಲ್ಲರೂ ನಿತ್ಯವೆಂದೇ ಗ್ರಹಿಸಿದ್ದಾರೆ. ಕೇತನ ಸೂತ್ರ ೪೫ರಲ್ಲಿ ಉತ್ವ ಮತ್ತು ಕ್ರಿಯಾ ಪದಗಳ ಕಿ,ನಿ ಎಂಬುವುಗಳ ಇತ್ವಗಳನ್ನು ಒಂದೆಡೆ ಸೇರಿಸಿ ಬರೆದಿದ್ದಾನೆ.

"ಉತ್ವಮು ಕ್ರಿಯಲಕಿನುಲ ಪೈ
ನಿತ್ಯಮು ಪೆಱರೂಪುದಾಲ್ಚು"- ಎಂದಿದ್ದಾನೆ.

ಉತ್ವ ಮತ್ತು ಕ್ರಿಯಾ ಪದಗಳಲ್ಲಿ ಕಿ,ನಿ ಎಂಬಿವು ನಿತ್ಯವಾಗಿ ಪರರೂಪ ಪಡೆಯುತ್ತವೆ. ಪದ್ಯದ ಪ್ರಕಾರ ಉತ್ವಕ್ಕೆ ಕ್ರಿಯೆಗಳಲ್ಲಿ ಕಿ,ನಿ ಯನ್ನುವಲ್ಲಿಯ ಇತ್ವಕ್ಕೆ ಪರರೂಪ ಸಂಧಿಯೆನಿಸಿವೆ. ಕೇತನನು ತಿಳಿಸಿರುವ "ಪೆಱರೂಪುದಾಲ್ಚು" ಎನ್ನುವುದನ್ನು ಗಮನಿಸಬೇಕು. ಅವನು ಇದನ್ನು ಪರರೂಪ ಸಂಧಿಯೆಂದು ಸೂಚಿಸಿದ್ದಾನೆಯೇ ಹೊರತು ಅದು ಮಾತ್ರ ಸಂಧಿ ಎಂದು ಎಲ್ಲೂ ಹೇಳಿಲ್ಲ. ಆಂ. ಭಾ.ಭೂ. ಆಗಲಿ, ಆಂ.ಶ.ಚಿಂ ಆಗಲಿ ಪರರೂಪ ಸಂಧಿಯ ಸ್ವರೂಪ ಮತ್ತು ಲಕ್ಷಣಗಳನ್ನು ಪ್ರತ್ಯೇಕವಾಗಿ ತಿಳಿಸಿಲ್ಲ. ತ್ರಿಲಿಂಗ ಶಬ್ದಾನುಶಾಸನದಲ್ಲಿ ಮಾತ್ರ ಪರರೂಪದ ಮಾತು ಕಾಣ ಬರುತ್ತದೆಯೇ ಹೊರತು ಅದರ ಲಕ್ಷಣವನ್ನು ಅಲ್ಲಿಯೂ ತಿಳಿಸಿಲ್ಲ. ವಿಕೃತಿ ವಿವೇಕವು ಮಾತ್ರ ಪರ ರೂಪ ಸಂಧಿಯ ನಿರ್ವಚನವನ್ನು ಹೇಳಿದೆ. ಆದರೆ ಅಲ್ಲಿಯೂ ಸ್ಪಷ್ಟತೆ ಇಲ್ಲ. ಪೂರ್ವ ಪದಗಳೆರಡಕ್ಕೂ ಬದಲಾಗಿ ಪರ ರೂಪವು ಬರಬೇಕು. ಆದ್ದರಿಂದ ಚಿನ್ನಯಸೂರಿ "ಪೂರ್ವ ಪರ ಸ್ವರಗಳಿಗೆ ಪರ ಸ್ವರ ಏಕಾದೇಶವಾಗುವುದೇ ಸಂಧಿ" ಎಂದು ಪರರೂಪ ಸಂಧಿಯ ಲಕ್ಷಣವನ್ನು ನಿರ್ದೇಶಿಸಿದ್ದಾನೆ.

ಹಿಂದೆ ಹೇಳಿದಂತೆ ಸಂಸ್ಕೃತ ಭಾಷೆಯಲ್ಲಿ ಸ್ವರಕ್ಕೆ ಸ್ವರ ಪರವಾದಾಗ ದೀರ್ಘವೋ, ವೃದ್ಧಿಯೋ, ಗುಣ ಸಂಧಿಯೋ ಬರುವುದು ಸಹಜ. ಆದರೆ ತೆಲುಗು ಭಾಷೆಯಲ್ಲಿ

ಹಾಗಲ್ಲದೆ ಪೂರ್ವ ಸ್ವರವು ಲೋಪಿಸಿ, ಪರಸ್ವರವು ನಿಲ್ಲುವುದು (ಸ್ವರಕ್ಕೆ ಸ್ವರ ಪರವಾದಾಗ). ಸಂಸ್ಕೃತದಲ್ಲಿ ಇಂಥ ಸಂಧಿಗೆ 'ಪರರೂಪ ಸಂಧಿ' ಎನ್ನುತ್ತಾರಷ್ಟೆ. ಪರರೂಪ ಸಂಧಿಯೆಂದರೆ ಬಹುತೇಕ ಲೋಪ ಸಂಧಿಯೇ. ವಿಕೃತಿ ವಿವೇಕಮು ಗ್ರಂಥ ಕರ್ತೃ ಅಥರ್ವಣನು ಅದನ್ನೇ ಸ್ಪಷ್ಟಪಡಿಸಿದ್ದಾನೆ.

ಒಟ್ಟಾರೆ ಹ್ರಸ್ವ ಉಕಾರಕ್ಕೆ[೧೦] ಸ್ವರವು ಪರವಾದರೆ ಸಂಧಿಯಾಗುವುದೇ ಉತ್ವ ಸಂಧಿ ಯೆನಿಸಿಕೊಳ್ಳುವುದು. ಈ ಸಂಧಿಯಲ್ಲಿ ಪೂರ್ವ ಪದದ ಕೊನೆಯಲ್ಲಿ ಉತ್ವವಿರಬೇಕು. ಪರ ಪದಾದಿಯಲ್ಲಿ ಅ,ಇ,ಉ,ಎ, ಒ ಸ್ವರಗಳಿರಬೇಕು. ಈ ಸಂಧಿಯ ಪ್ರಯೋಗಗಳಲ್ಲಿ ಎಲ್ಲಿಯೂ ಪರಪದದಲ್ಲಿ 'ಋ' ವರ್ಣವಾಗಲಿ, ಐ, ಔ, ಗಳಾಗಲಿ ಕಾಣಿಸಿಲ್ಲ. ಐ ಮತ್ತು ಔಕಾರಗಳು ಸಂಧ್ಯಕ್ಷರಗಳಾದುದರಿಂದ ಇವನ್ನು ಪರಿಹರಿಸಿರಬೇಕು. ಈ ಸಂದರ್ಭದಲ್ಲಿ 'ಋ' ಕಾರವನ್ನು ಕೂಡ ಬಿಡಲಾಗಿದೆ. ಏಕೆಂದರೆ ಪದಾದಿಯ 'ಋ' 'ರ' ಕಾರಕ್ಕೆ ಸಮಾನವೆಂದು ಚಿನ್ನಯಸೂರಿ ಪ್ರಕೀರ್ಣಕ ಪರಿಚ್ಛೇದದಲ್ಲಿ ಬರೆದಿದ್ದಾನೆ (ಸೂ.೧). ಅವನೇ ಪ್ರಥಮೇತರ ವಿಭಕ್ತಿಗಳಲ್ಲಿರುವ ಉತ್ವಕ್ಕೆ ಮತ್ತು ಶತ್ರರ್ಥಕ, ಚು ವರ್ಣಗಳಲ್ಲಿರುವ ಉಕಾರಕ್ಕೆ ಸಂಧಿ ವೈಕಲ್ಪಿಕವೆಂದು ತಿಳಿಸಿದ್ದಾನೆ.

ಉದಾ: ನನ್ನುನ್ + ಅಡಿಗೆ = ನನ್ನಡಿಗೆ, ನನ್ನು ನಡಿಗೆ (ನನ್ನನ್ನು ಕೇಳಿದ)

ನಾ ಕೊರಕುನ್ + ಇಚ್ಚೆ = ನಾಕೊರಕಿಚ್ಚೆ, ನಾ ಕೊರಕುನಿಚ್ಚೆ (ನನಗಾಗಿ ಕೊಟ್ಟ) ಆದರೆ ಕೇತನ ಈ ಎಲ್ಲ ವಿವರಗಳಿಗೆ ಹೋಗದೆ ಉತ್ವಕ್ಕೆ ಸಂಧಿ ನಿತ್ಯವೆಂಬುದನ್ನು ಸೂಚಿಸಿ ನೀವು + ಏನು = ನೀವೇನು (ನೀನು ನಾನು) ಎಂಬ ಒಂದು ಉದಾಹರಣೆಯನ್ನು ಕೊಟ್ಟಿದ್ದಾನೆ. ಶತ್ರರ್ಥಕಕ್ಕೆ ಸಂಬಂಧಿಸಿದ ಈ ಕಾರ್ಯವನ್ನು ಕೇತನ ಬೇರೆ ಸಂದರ್ಭದಲ್ಲಿ ಹೇಳಿದ್ದಾನೆ.

**ಇತ್ವ ಸಂಧಿ:**

ಕೇತನನು ಮಧ್ಯಮ ಪುರುಷೇಕಾರಕ್ಕೆ ಸಂಧಿ ನಿತ್ಯವೆಂದು ಹೇಳಿ, ಇದನ್ನು ಉತ್ವ ಸಂಧಿಯೊಂದಿಗೆ ಸೇರಿಸಿದ್ದಾನೆ. ಚಿನ್ನಯಸೂರಿ ಇದನ್ನು ನಿತ್ಯವೆಂದೇ ಸ್ವೀಕರಿಸಿದ್ದಾನೆ. ನನ್ನಯನ ಪ್ರಯೋಗಗಳ ಆಧಾರದಿಂದ ಕೇತನನು ಇದನ್ನು ನಿತ್ಯವೆಂದೇ ಕರೆದಿದ್ದಾನೆ. ತೆಲುಗು ಸಂಧಿಗಳಲ್ಲಿ ಬರುವ ನಿತ್ಯ, ವಿಕಲ್ಪ, ಬಹುಳ ಎಂಬುದರ ಸ್ಪಷ್ಟ ತಿಳುವಳಿಕೆಗಾಗಿ ಕೇತನ ಈ ಸಂಧಿಯನ್ನು ಉತ್ವ ಸಂಧಿಯೊಂದಿಗೆ ಸೇರಿಸಿರಬೇಕು.

ಉದಾ: ಸತ್ವಮು ಜೆಂದಿತಿರಿ + ಊರಿಕಿ=ಸತ್ವಮುಜೆಂದಿತಿರೂರಿಕಿ (ಪ. ೪೫).[೧೧]
ಕೇತನ ಅದಿ - ಇದಿ ಸಂಧಿಯನ್ನು ಕುರಿತು ಬರೆದ ಪದ್ಯ:

అదియిదియంతము మీదన్
గదిసిన నాద్యచ్చుడుగు వికల్పము తోఁ గా
లిది కాలియది యనగ జేఁ
తిది చేఁతియది యని పలుకదెల్లం బగుచున్ (ప. ౫౧)

**(ಅದಿ, ಇದಿ ಎಂಬುವುಗಳ ಹ್ರಸ್ವ ಇಕಾರಕ್ಕೆ ಸ್ವರ ಪರವಾದಾಗ ಸಂಧಿ ವಿಕಲ್ಪ)** ಕೇತನ ಹಾಗೂ ನನ್ನಯ ಈ ಸಂಧಿಯನ್ನು ವಿಕಲ್ಪವೆಂದೇ ಭಾವಿಸಿದ್ದಾರೆ.

ಉದಾ: కాలి + అది = కాలిది (ಲೋಪ)

కాలి + అది = కాలియది (ಸಂಧಿ ಆಗಿಲ್ಲ, ಯಕಾರಾಗಮ ಆಗಿದೆ)

ಅಂತೆ చేఁతి + అది = చేఁతిది; చేఁతియది. ఏమి + అంటివి
= ఏమంటివి, ఏమియంటివి

ಚಿನ್ನಯ ಸೂರಿಯು "ఏమ్యాదుల యిత్తునకు సంధి వైకల్పికముగానగు" ಎಂದಿದ್ದಾನೆ (ಬಾಲ. ವ್ಯಾ. ಸೂ. ೨೬) ఏమి, మఱి, కి (ಷಷ್ಠಿ) అది, ఇది, అవి, ఇవి, ఏది, ఏవి- ಎಂಬ ಪದಗಳಲ್ಲಿರುವ ಇತ್ವಕ್ಕೆ ಸಂಧಿ ವಿಕಲ್ಪವೆಂದು ಅರ್ಥ.

ಉದಾ: ఏమి + అంటివి = ఏమంటివి, ఏమియంటివి

మఱి + ఏమి = మఱేమి, మఱియేమి

ಕಿ (ಷಷ್ಠಿ) ಸಂಧಿ: ಕೇತನ ಇದನ್ನು ವಿಕಲ್ಪವೆಂದು ಭಾವಿಸಿದ್ದಾನೆ. ಷಷ್ಠಿ ವಿಭಕ್ತಿ ಪ್ರತ್ಯಯವಾದ 'ಕಿ' ಅಥವಾ 'ಕಿನ್' ಗಳಿಗೆ ಯಾವುದಾದರೂ ಸ್ವರ ಪರವಾದರೆ ಅಲ್ಲಿ ಸಂಧಿ ವಿಕಲ್ಪ. ಲೋಪವಾಗಬಹುದು, ಇಲ್ಲವೆಕಿ ಷಷ್ಠಿಯ ನಕಾರ ಹಾಗೆ ಉಳಿಯ ಬಹುದು. ಉದಾ: ಹರಿಕಿ (ನ್) + ಇಚ್ಚೆ ಹರಿಕಿಚ್ಚೆ, ಹರಿಕಿನಿಚ್ಚೆ ಇಲ್ಲಿ ಒಂದು ವಿಶೇಷವನ್ನು ಗಮನಿಸಬೇಕು. ಕೇತನ ನಿತ್ಯ ಸಂಧಿಯನ್ನು ಹೇಳುವಾಗ 'ಉತ್ವ', 'ಕಿ'ಮತ್ತು 'ನಿ' ಎಂಬುವನ್ನು ತೆಗೆದುಕೊಂಡಿದ್ದಾನೆ. 'ಕಿ' ಮತ್ತು 'ನಿ' ಗಳಿಗೆ ಉದಾಹರಣೆಯನ್ನು ಕೊಟ್ಟಿದ್ದಾನೆ.

ಸತ್ವಮುಗಲಗೆಡಿನಿ + ಊರಿಕಿ = ಸತ್ವಮುಗಲಿಗೆಡಿನೂರಿಕಿ

ಊರಿಕಿ + ಅತಿತ್ವರಿತಮು =ಊರಿಕತಿತ್ವರಿತಮು

ಆದರೆ ಕಿ ಷಷ್ಠಿಯಲ್ಲಿ ಊರಿಕತಿತ್ವರಿತಮು, ಊರಿಕಿನತಿತ್ವರಿತಮು ಎಂಬ ಎರಡು ರೂಪಗಳನ್ನು ಹೇಳಬಹುದೆಂದು ಚಿನ್ನಯ ಸೂರಿ ಮುಂತಾದವರ

ಅಭಿಪ್ರಾಯವಾಗಿದೆ. ಉದಾ: ಹರಿಕಿಚ್ಚಿ, ಹರಿಕಿನಿಚ್ಚಿ ೫೦ ನೆಯ ಪದ್ಯದಲ್ಲಿ ಷಷ್ಠಿಯನ್ನು ಕೇತನ ಹೇಳಿದ್ದಾನಾದರೂ ಅದು ಉಕಾರಾಂತವೆಂದಿದ್ದಾನೆ. ಕೊಡುಕುನ್ + ಅಲು = ಕೊಡುಕುನಾಲು ಎನ್ನಬೇಕೇ ಹೊರತು 'ಕೊಡುಕಾಲು' ಎನ್ನಬಾರದೆಂದಿದ್ದಾನೆ. (ಇವರ ವಿವರಣೆಯನ್ನು ನಕಾರಾಗಮದಲ್ಲಿ ಕೊಡಲಾಗಿದೆ).

**ಅತ್ವ ಸಂಧಿ:**

ನನ್ನಯನಿಗಿಂತ ಪೂರ್ವದಲ್ಲಿಯೇ ಪ್ರಾಚೀನ ಶಾಸನಗಳಲ್ಲಿ ಈ ಸಂಧಿಯನ್ನು ಬಹುಳವಾಗಿ ಬಳಸಲಾಗಿದೆ. ಕೇತನನು ಕೂಡ ಈ ಸಂಧಿಯನ್ನು ಬಹುಳವಾಗಿಯೇ ಸ್ವೀಕರಿಸಿದ್ದಾನೆ. ೪೭ನೆಯ ಪದ್ಯದಲ್ಲಿ ಅತ್ತು, ಇತ್ತು, ಉತ್ತು ಒಮ್ಮೊಮ್ಮೆ ವಿಕಲ್ಪವಾಗಿ ಬರುತ್ತವೆಂಬುದನ್ನು ಹೇಳಿ, ೪೮ನೆಯ ಪದ್ಯದಲ್ಲಿ ಉದಾಹರಣೆಗಳನ್ನು ಕೊಟ್ಟಿದ್ದಾನೆ.

ದಯಜೂಡಕ + ಅನಿಪಿನಾಡು = ದಯಜೂಡಕನಿಪಿನಾಡು

ದಯಲೇಕ + ಉನ್ನಾಡು = ದಯಲೇಕಯುನ್ನಾಡು

ಅಚ್ಚುಗ ಬೆಜಿಯಚ್ಚುಲ ವೈ
ನಚ್ಚು ಯಕಾರಂಬು ರಾಲ್ಚು ನಟಲಾಯೇತೀ
ಯಿಚ್ಚ ಯಪೂರ್ವ ಮೊ ಕೋಯಿದಿ
ಯಚ್ಚೆರುವೈ ಯುನಿಕಿ ನಾ ಯುದಾಹರಣಂಬುಲ್ (ಪದ್ಯ ೪೯)

ಈ ಪದ್ಯದಲ್ಲಿ ಅತ್ವಕ್ಕೆ ಯಕಾರಾಗಮ ಬರುವ ಉದಾಹರಣೆ ಇದೆ.

**ನನ್ನಯನ ಉದಾ:**

೧. ಓಪಕ + ಅರಚುಚು = ಓಪಕರಚುಚು (ಆದಿ ೨-೧೩)

೨. ಮೇನ + ಅತ್ತ = ಮೇನಯತ್ತ (ಅದಿ ೫-೧೭)

ಕೇತನನಿಂದ ಚಿನ್ನಯ ಸೂರಿಯವರೆಗೂ ಎಲ್ಲರೂ ಇದನ್ನು ಬಹುಳವಾಗಿಯೇ ಸ್ವೀಕರಿಸಿದ್ದಾರೆ. ಮೇಲಿನ ನನ್ನಯನ ಪ್ರಯೋಗಗಳಲ್ಲಿ ಒಂದು ಅಕಾರ ಲೋಪ ಸಂಧಿಯಾದರೆ, ಮತ್ತೊಂದು ಯಕಾರಾಗಮ ಸಂಧಿಯಾಗಿರುವುದು ಗಮನಾರ್ಹ.

ಚಿನ್ನಯ ಸೂರಿಯು ಈ ಸಂಧಿಯ ಬಗ್ಗೆ - "ಅತ್ತು ನಕು ಸಂಧಿ ಬಹುಳ-ಮುಗಾನಗು" ಎಂದಿದ್ದಾನೆ (ಅತ್ವಕ್ಕೆ ಸಂಧಿ ಬಹುಳವಾಗಿ ಆಗುವುದು ಬಾ. ವ್ಯಾ. ಸೂತ್ರ ೨೭). "ಹ್ರಸ್ವವಾದ ಅಕಾರಕ್ಕೆ ಸ್ವರ ಪರವಾದರೆ ಸಂಧಿ ಕೆಲವು ಕಡೆ ನಿತ್ಯ, ಮತ್ತೆ ಹಲವು ಕಡೆ ವಿಕಲ್ಪ, ಇನ್ನು ಕೆಲವು ಕಡೆ ಸಂಧಿಯಾಗುವುದು". ಸಂಸ್ಕೃತದಲ್ಲಿ 'ವಾ ಅತಃ ' ಎಂದಿದೆ. (ಆಂ.ಶ.ಚಿ) ಎಂದರೆ ಹ್ರಸ್ವ ಅಕಾರಕ್ಕೆ ವಿಕಲ್ಪವಾಗಿ ಸಂಧಿ

ಬರುವುದು. ಹೀಗೆ ವಿಕಲ್ಪವಾಗಿ ಹೇಳಿರುವ ಅತ್ವ ಸಂಧಿಯನ್ನು ಚಿನ್ನಯ ಸೂರಿ ಬಹುಳವಾಗಿ ನಿರೂಪಿಸಿದ್ದಾನೆ. ಬಹುಳ ಸಂಖ್ಯೆಯಲ್ಲಿ ನಾಲ್ಕು ವಿಧಗಳು :

ಕ್ವಚಿತ್ಪ್ರವೃತ್ತಿಃ ಕ್ವಚಿದಪ್ರವೃತ್ತಿಃ
ಕ್ವಚಿದ್ವಿಭಾಷಾ ಕ್ವಚಿದನ್ಯದೇವ
ವಿಧೇರ್ವಿಧಾನಂ ಬಹುಧಾ ಸಮೀಕ್ಷ್ಯ
ಚಾತುರ್ವಿಧಂ ಬಾಹುಳಕಂ ವದನ್ತಿ (ಕಾಶಿಕಾ ವೃತ್ತಿ)

**ಪ್ರವೃತ್ತಿ:** ಕೆಲವುಕಡೆ ಸಂಧಿ ನಿತ್ಯ. ಮನುಷ್ಯರ ಹೆಸರುಗಳಲ್ಲಿ ಅತ್ವಕ್ಕೆ ಸಂಧಿ ನಿತ್ಯವೆಂದು ತಿಳಿಯಬಹುದು.

**ಉದಾ:** ರಾಮ + ಅಯ್ಯ = ರಾಮಯ್ಯ

ಸೀತ + ಅಮ್ಮ = ಸೀತಮ್ಮ

**ಅಪ್ರವೃತ್ತಿ:**

ಸಂಧಿಯಾಗದೆ ಇರುವ ಸಂದರ್ಭಗಳು. ಉದಾ: ವೆಲ + ಆಲು = ವೆಲಯಾಲು (ಇಲ್ಲಿ ಯಕಾರಾಗಮ ಆಗಿದೆ. ತೆಲುಗಿನಲ್ಲಿ ಸಂಧಿ ಆಗದಿದ್ದಾಗ ಯಕಾರಾಗಮವಾಗಿ ಬರುತ್ತದೆಂದು ಹೇಳಲಾಗಿದೆ). ಉದಾ: ಮೇನ + ಅಲ್ಲುಡು = ಮೇನಲ್ಲುಡು (ಸಂಧಿಯಾಗಿದೆ). ಮೇನ + ಅಲ್ಲುಡು = ಮೇನಯಲ್ಲುಡು (ಯಕಾರಾಗಮ). ಇಲ್ಲಿಯ ಪ್ರಯೋಗಗಳಲ್ಲಿ ಒಂದು ಪರರೂಪ ಸಂಧಿಯ ರೂಪ ಮತ್ತೊಂದು ಯಕಾರಾಗಮದ ರೂಪ ಕಾಣುತ್ತವೆ.

**ಯಕಾರಾಗಮ:**

ಯಕಾರಾಗಮ ನಿತ್ಯವಾಗಿ ಬರುವ ಸಂದರ್ಭವನ್ನು ಕೇತನ ೪೯ನೆಯ ಪದ್ಯದಲ್ಲಿ ಹೇಳಿದ್ದಾನೆ:

ಅಚ್ಚುಗ ಬೆಱಯಚ್ಚುಲ ವೈ
ನಚ್ಚು ಯಕಾರಂಬು ದಾಲ್ಚು ನಬಲಾ ಯೇತೇ
ಯಿಚ್ಚಯಪೂರ್ವ ಮೊಕೋ ಯಿದಿ
ಯಚ್ಚೆರುವ್ವೈ ಯುನಿಕಿ ನಾನುದಾಹರಣಂಬುಲ್

ಇಲ್ಲಿ ಸ್ವರಕ್ಕೆ ಸ್ವರ ಪರವಾದಾಗ ಯಕಾರಾಗಮವಾಗುವುದೆಂದು ಹೇಳಿದ್ದಾನಾದರೂ ನಿತ್ಯ ಸಂಧಿಗಳನ್ನು ಹೊರತು ಪಡಿಸಿ ಬೇರೆ ಬೇರೆ ಕಡೆ ಮಾತ್ರ ಯಕಾರಾಗಮವಾಗುತ್ತವೆಂಬುದನ್ನು ನೆನಪಿಡಬೇಕು. ಕೇತನನು ಕೊಟ್ಟ ಉದಾಹರಣೆಗಳು:

ಅಬಲಾ + ಎಲೇ = ಅಬಲಾಯೇಲೇ

ಏತೀ + ಇಚ್ಚ = ಎತೇಯಿಚ್ಚ

ಇಚ್ಚ + ಅಪೂರ್ವಮು = ಇಚ್ಚಯಪೂರ್ವಮು

ಅಪೂರ್ವಮೋಕೋ + ಇದಿ = ಅಪೂರ್ವಮೋಕೋಯಿದಿ

ಇದಿ + ಅಚ್ಚೆರುವ್ವೈ = ಇದಿಯಚ್ಚೆರುವ್ವೈ

ಅಚ್ಚೆರುವ್ವೈ + ಉನಿಕಿ = ಅಚ್ಚೆರುವ್ವೈಯುನಿಕಿ

ಚಿನ್ನಯಸೂರಿ ಸಂಧಿಯಿಲ್ಲದ ಕಡೆ ಪರಸ್ಪರಕ್ಕೆ ಯಕಾರಾಗಮವಾಗುತ್ತದೆ ಎಂದಿದ್ದಾನೆ. ಅವನು ಕೊಟ್ಟ ಉದಾಹರಣೆಗಳು-

ಮಾ + ಅಮ್ಮ =ಮಾಯಮ್ಮ

ಮಾ + ಇಲ್ಲು = ಮಾಯಿಲ್ಲು

ಮಾ + ಊರು = ಮಾಯೂರು

ಕೇತನ ಎರಡು ವರ್ಣಗಳು ಸೇರುವುದೇ ಸಂಧಿ ಎಂದಿದ್ದರಿಂದ ಯಕಾರಾಗಮವನ್ನು ಸಂಧಿ ಎಂದೇ ಪರಿಗಣಿಸಿದ್ದಾನೆಂದು ಕೆಲವು ವಿಮರ್ಶಕರು ಭಾವಿಸಿದ್ದಾರೆ. ಆದರೆ ಚಿನ್ನಯಸೂರಿ ಪರರೂಪ ಸಂಧಿಗೆ ಮಾತ್ರ 'ಸಂಧಿ' ಎಂಬ ಸಂಜ್ಞೆಯನ್ನು ವಿಧಿಸಿ ಸಂಧಿಯಿಲ್ಲದಿರುವಾಗ ಯಕಾರಾಗಮವಾಗುತ್ತದೆ ಎಂದು ಸ್ಪಷ್ಟ ಪಡಿಸಿದ್ದಾನೆ.

**ನಕಾರಾಗಮ ಸಂಧಿ:**

ಕೇತನನು ಷಷ್ಠೀ ಸಮಾಸದಲ್ಲಿ ಉತ್ವಕ್ಕೆ ಸ್ವರ ಪರವಾದಾಗ ನ ಕಾರಾಗಮವಾಗುತ್ತದೆ ಎಂದು ತಿಳಿಸಿದ್ದಾನೆ (ಆಂ.ಭಾ.ಭೂ. ಪದ್ಯ ೫೦).

ಒನರನುಜ್ಝಿಂತ ಷಷ್ಠಿ ಪೈ ನುನ್ನಯಚ್ಚು
ಮೊದಲ ಬೊಲ್ಲುನ ಕಾರಂಬು ಗದಿಸಿ ನಿಲ್ಚು
ಕೊಡುಕು ನಾಲ್ಗೂತು ನೊಡಮಿ ನಾಗೂಡುಗಾನಿ
ಕೂತೊಡಮಿ ಕೊಡುಕಾಲನಗೂಡದೆಂದು

ಉಕಾರಾಂತ ಷಷ್ಠಿಗೆ ಸ್ವರ ಪರವಾದಾಗ ನಕಾರ (ಪೊಲ್ಲು ನಕಾರವೆಂದರೆ 'ನ್') ಬರುತ್ತದೆ. ಈ ನಕಾರಕ್ಕೆ ಲೋಪವಾಗುವುದಿಲ್ಲ. ಕೊಡುಕು + ಆಲು = ಕೊಡುಕುನಾಲು ಎನ್ನಬೇಕೇ ಹೊರತು 'ಕೊಡಕಾಲು' ಎನ್ನಬಾರದು.

**ದ್ರುತ ಸಂಧಿ: ದ್ರುತವೆಂದರೆ** 'ನ' ವರ್ಣ. ಇದು 'ನ್' ರೂಪವೇ ಅಥವಾ 'ನು' ರೂಪವೇ ಅಥವಾ ಬೇರೆ ರೂಪವೇ ಎಂಬುದನ್ನು ಕುರಿತು ತೆಲುಗು ವಿದ್ವಾಂಸರಲ್ಲಿ ಸಾಕಷ್ಟು ಚರ್ಚೆ ನಡೆದಿದೆ. ಸಂಧಿಗಳಲ್ಲಿ ಒಮ್ಮೊಮ್ಮೆ ಮರೆಯಾಗುವುದು, ಮತ್ತೊಮ್ಮೆ ಅನುಸ್ವಾರದಂತಹ ಬೇರೆ ರೂಪಗಳನ್ನು ಧರಿಸುವುದು. ದ್ರುತದಿಂದ ಕೂಡಿದ ಶಬ್ದಗಳಿಗೆ 'ದ್ರುತ ಪ್ರಕೃತಿಕ'ಗಳೆಂದು, ಇಲ್ಲದ ಶಬ್ದಕ್ಕೆ 'ಕಳ' ಎಂದು ತೆಲುಗು ವ್ಯಾಕರಣ ಪರಿಭಾಷೆ.

ಕೇತನನು ಈ ದ್ರುತ ಸಂಧಿಯನ್ನು ನಾಲ್ಕು ಭಾಗಗಳನ್ನಾಗಿ ವಿಭಜಿಸಿದ್ದಾನೆ. (ಆಂ. ಭಾ. ಭೂ. ಪದ್ಯ ೫೨-೬೧).

೧. ದ್ವಿತೀಯಾ ವಿಭಕ್ತಿಯಲ್ಲಿ ಸ್ವರಕ್ಕೆ ಸ್ವರ ಪರವಾದಾಗ ದ್ವಿತೀಯಾ ವಿಭಕ್ತಿ ನ ಕಾರಕ್ಕೆ ಲೋಪವಾಗದು. ಅದು ಹಾಗೇಯೇ ನಿಲ್ಲುತ್ತದೆ (ಪ. ೫೨).

ಉದಾ:

ಸುತುನ್ + ಅಡಿಗೆ =ಸುತುನಡಿಗೆ, ಸುತುನಿನಡಿಗೆ

ಸುತುನ್ + ಅನಿಚೆ = ಸುತುನನಿಚೆ, ಸುತುನಿನನಿಚೆ

೨. ನ ಕಾರಾಂತ ಪದಗಳಿಗೆ ಕಚಟತಪಗಳು ಪರವಾದರೆ ಗಜಡದಬ ಬರುತ್ತವೆ.. ಅಂತ್ಯ ನ ಕಾರ ಬಿಂದು ರೂಪ ಪಡೆಯುತ್ತದೆ.

ಉದಾ:

ವಾನಿನ್ + ಕನಿಯೆ = ವಾನಿಗನಿಯೆ

ಕನಿಯನ್ + ಚೇರೆ = ಕನಿಯಜೇರೆ

ವಾನಿನ್ + ಟಕ್ಕರಿಚೇಸೆ = ವಾನಿಡಕ್ಕರಿಜೇಸೆ

ದಾನಿನ್ + ತೆಗಡೆ = ದಾನಿದೆಗಡೆ

ವಾನಿನ್ + ಪೊದಿವೆ = ವಾನಿಬೊದಿವೆ

ಇಲ್ಲಿ ಬಂದ ಬಿಂದು ಪೂರ್ಣಬಿಂದುವಾಗಿರಬಹುದು ಅಥವಾ ಅರ್ಧ ಬಿಂದುವಾಗಿರಬಹುದು. ಉದಾ: ಘನುಡು, ಘನುಂಡು ಇತ್ಯಾದಿ ಪದಗಳಲ್ಲೂ ಹಾಗೆಯೇ. ಆದರೆ ದೀರ್ಘದ ಮೇಲೆ ಪೂರ್ಣಬಿಂದು ಇಲ್ಲ.

೩. ನನ್ನು, ನಿನ್ನು, ತನ್ನು, ಕುನು, ತಿನು- ಇವುಗಳಲ್ಲಿರುವ ನ ಕಾರ (ನ್) ಸ್ವರ ಬಂದಾಗ ವಿಕಲ್ಪದಿಂದ ಲೋಪವಾಗುತ್ತದೆ.

ಉದಾ:

ನನ್ನು + ಎಱುಗು = ನನ್ನೆಱುಗು, ನನ್ನುನೆಱುಗು

ತನ್ನು + ಎಱುಗು = ತನ್ನೆಱುಗು, ತನ್ನುನೆಱಗು

ನಿನ್ನು + ಎಱುಗು = ನಿನ್ನೆಱುಗು, ನಿನ್ನುನೆಱುಗು

ತನಕು + ಎನಯೆ = ತನಕೆನಯೆ, ತನಕುನೆನಯೆ

ಮುನಿಕಿ + ಎನಯೆ = ಮುನಿಕೆನಯೆ, ಮುನಿಕನೆನಯೆ

೪. ನ ಕಾರಾಂತಗಳಿಗೆ ಪರುಷೇತರ ವ್ಯಂಜನ ಪರವಾದರೆ ಲೋಪ ಅಥವಾ ಪೂರ್ಣಬಿಂದು ಬರುತ್ತದೆ. ಉದಾ:

ಸುತುನಿನ್ + ಗೆಲಿಚೆ = ಸುತುನಿಂಗೆಲಿಚೆ

ಸುತುನ್ + ಗೆಲಿಚೆ = ಸುತುಗೆಲಿಚೆ

ಮೇಲಿನ ವ್ಯಾಕರಣ ಕಾರ್ಯಗಳಲ್ಲಿ ಎರಡನೆಯದಾದ ಸರಳಾದೇಶ ಸಂಧಿಯಲ್ಲಿ ಸಂಶ್ಲೇಷರೂಪ (ಕನಿಯನ್ವೇಡೆ, ದಾನಿನ್ವಕ್ಕರಿಜೇಸೆ) ವನ್ನು ಕೇತನ ಒಪ್ಪಲಿಲ್ಲ. ಅಂತಹ ಪ್ರಯೋಗಗಳು ನನ್ನಯನಲ್ಲೂ ಇಲ್ಲ. ಬಾಲ ವ್ಯಾಕರಣ ಇಂತಹ ರೂಪವನ್ನು ಒಪ್ಪಿದೆ (ಸಂಧಿ. ಸೂ. ೧೬,೧೭).

ಒಟ್ಟಾರೆ ಕೇತನನ ದ್ರುತ ಸಂಧಿ ನಿರೂಪಣೆ ಸಂಕ್ಷೇಪವಾದುದು. ಚಿನ್ನಯ ಸೂರಿಯಲ್ಲಿ ಈ ಸಂಧಿಯ ಬಗ್ಗೆ ವ್ಯಾಪಕ ವಿವರಣೆ, ಪ್ರಯೋಗಗಳುಂಟು. ಕನ್ನಡ ಭಾಷೆಯಲ್ಲಿ ಇಂಥ ಸಂಧಿ ಇಲ್ಲ.

**ಶತ್ರರ್ಥಕ 'ಚು' ವರ್ಣ ಸಂಧಿ:**

ಶತ್ರರ್ಥಕ ಚು ವರ್ಣದ ಮೇಲಿರುವ ನಕಾರಕ್ಕೆ ಸ್ವರ ಪರವಾದರೆ ನ ಕಾರಕ್ಕೆ ಲೋಪ (ಆಂ.ಭಾ.ಭೂ. ಪದ್ಯ ೧೭೩). ಪ್ರಥಮೇತರ ವಿಭಕ್ತಿಯಲ್ಲಿರುವ 'ಉನ್ನಂತ' ಗಳಿಗೆ (ಉನ್)ಸ್ವರ ಪರವಾದರೆ ಲೋಪ ವಿಕಲ್ಪ (ಆಂ. ಭಾ.ಭೂ.ಪದ್ಯ ೫೯). ಕೇತನನು ನಿರೂಪಿಸಿದ ಈ ಲಕ್ಷಣವನ್ನು ಕುರಿತು ಚಿನ್ನಯ ಸೂರಿಯು ಉತ್ವ ಸಂಧಿಯಲ್ಲಿಯೇ ವಿವರಿಸಿದ್ದಾನೆ. ಇಲ್ಲಿ ಉತ್ವ ಸಂಧಿ ಎಂದು ಹೇಳುವುದಕ್ಕಿಂತ ನ ಕಾರ (ದ್ರುತ) ಲೋಪಕ್ಕೆ ವಿಕಲ್ಪವನ್ನು ಹೇಳುವುದು ಸಮಂಜಸ.

ಶತ್ರರ್ಥದಲ್ಲಿ ಎಂದರೆ ವರ್ತಮಾನ ಅಸಮರ್ಪಕ ಕ್ರಿಯಾಧರ್ಮದಲ್ಲಿರುವ 'ಚುನ್' ಎಂಬ ವರ್ಣಕ್ಕೆ ಎಂದರ್ಥ (ವಚ್ಚುಚುನ್, ಪೋವುಚುನ್ ಮುಂತಾದುವು). ಕೇತನ ಶತ್ರರ್ಥ 'ಚು' ವರ್ಣ ಮತ್ತು ಪ್ರಥಮೇತರ ವಿಭಕ್ತಿಯ 'ಉನ್' ಅಂತಗಳನ್ನು ವಿಶೇಷವಾಗಿ ಹೇಳಿರುವುದನ್ನು ಇಲ್ಲಿ ಗಮನಿಸಬಹುದು. ಶತ್ರರ್ಥಕ್ಕೆ ಕೇತನನ ಪದ್ಯ:

ಜುನುಲಪೈನಕಾರಮು ಪೊಡಚೂಪು ಜೋವು
ನೊಪ್ಪ ನಚ್ಚುಲು ಪೈಡಾನೆ ಯುಂಡೆನೇನಿ
ಯೊದವು ಜುನ್ನಜೋ ನೊದವುಜುನುನ್ನಜೋಟಿ
ಪೂಡಚು ಚಡರೆನು ಬೊಡುಚುಚು ನಡರೆ ನನಗ (ಪ ೧೭೩)

ಜುನುಗಳ ಮೇಲೆ ನಕಾರ ಬರುತ್ತದೆ. ಅದು ಸ್ವರ ಪರವಾದಾಗ ಲೋಪವಾಗುತ್ತದೆ. (ಎಂದರೆ ಇಲ್ಲಿ ನ ಕಾರಾಗಮ ವೈಕಲ್ಪಿಕ).

ಉದಾ:

ಒದವುಜುನ್ + ಉನ್ನಜೋ = ಒದವುಜುನುನ್ನಜೋ; ಒದವುಜುನ್ನಜೊ

ಪೊಡುಚುಚುನ್ + ಅಡರೆನು = ಪೊಡುಚುಚುನಡರೆನು; ಪೊಡುಚುಚಡರೆನು

**ಗಸಡವಾದೇಶ ಸಂಧಿ:**

ತೆಲುಗು ಶಾಸನಗಳಲ್ಲಿ ಪ್ರಥಮಾ ವಿಭಕ್ತಿ ಪದಗಳಿಗೆ 'ಕ ಚ ಟ ತ ಪ'ಗಳು ಪರವಾದಾಗ 'ಗ ಜ ಡ ದ ಬ'ಗಳು ಕ್ರಮವಾಗಿ ಬಂದಿರುವ ಸಂದರ್ಭಗಳಿವೆ. ಇವು ತೆಲುಗು + ತೆಲುಗು; ತೆಲುಗು + ಸಂಸ್ಕೃತ; ಸಂಸ್ಕೃತ + ತೆಲುಗು, ಸಂಸ್ಕೃತ + ಸಂಸ್ಕೃತ ಎಂಬ ನಾಲ್ಕು ತರಹದ ಪದಗಳಲ್ಲೂ ಕಾಣುತ್ತವೆ. ಕೇತನ ಯಾವ ಪದಗಳಿಗೆ 'ಗಸಡದವ'ಗಳು ಬರುತ್ತವೆಂದು ಸ್ಪಷ್ಟಪಡಿಸಿದ್ದರೂ, ಪ್ರಥಮಾಂತಗಳ ಮೇಲೆ 'ಕ ಚ ಟ ತ ಪ'ಗಳಿಗೆ 'ಗಸಡದವ'ಗಳು ಬರುತ್ತವೆಂದು ಮಾತ್ರ ಹೇಳಿದ್ದಾನೆ (ಪದ್ಯ ೬೨).

ಪೊಸಗಂ ಬಲ್ಕೆಡು ನೆಡಬೊ
ಲ್ಪೆಸಗಿನ ಪ್ರಥಮಾಂತಮುಲ ಪಯಿಂಗದಿಸಿ ಕಡುನ್
ಬಸನಾರು ಕಚಟತಪಲುನು
ಗಸಡದವಲ್ ದ್ರೋಚಿ ವಚ್ಚು ಗವಿಜನ ಮಿತ್ರಾ.

ಚಿನ್ನಯ ಸೂರಿ ಈ ಸಂದರ್ಭದಲ್ಲಿ ಪರುಷಗಳಿಗೆ 'ಕಚಟತಪ'ಗಳು ಪರವಾದಾಗ 'ಗಸಡದವ'ಗಳು ಬಹುಳವಾಗಿ ಬರುತ್ತದೆಂದಿದ್ದಾನೆ (ಸಂಧಿ ೧೩). ಆ ಮೇಲೆ ಸಂಸ್ಕೃತದ 'ಕಚಟತಪ'ಗಳಿಗೆ' 'ಗಸಡದವ'ಗಳು ಬರುವುದಿಲ್ಲವೆಂದು ಇನ್ನೊಂದು ಸೂತ್ರದಲ್ಲಿ ಹೇಳಿದ್ದಾನೆ. (ಸಂಧಿ ೧೪). ಕೇತನನಾದರೂ ಈ ವಿವರಗಳಿಗೆ ಹೋಗದೆ 'ಗಸಡದವ'ಗಳು ಬರುವುದನ್ನು ಮಾತ್ರ ಹೇಳಿಬಿಟ್ಟಿದ್ದಾನೆ. ಸಂಸ್ಕೃತ ಪದಗಳು ಬಂದಾಗಲೂ 'ಗಡವ' ಬಂದಿರುವುದನ್ನು ಪ್ರೌಢ ವ್ಯಾಕರಣ ತೋರಿಸಿಕೊಟ್ಟಿದೆ. ಕೇತನ ಕೊಟ್ಟ ಉದಾಹರಣೆಗಳು ಮಾತ್ರ ತೆಲುಗು ಪದಗಳಿಗೆ ಸಂಬಂಧಿಸಿದಂತಹವು.

ಉದಾ:

ಸುತುಡು + ಕಡುವೇಗಮುನ = ಸುತುಡುಗಡುವೇಗಮುನ

ಸುತುಡು + ಚನಿಯೆ = ಸುತುಡುಸನಿಯೆ

ಸುತುಡು + ಟಕ್ಕರಿ = ಸುತುಡು ಡಕ್ಕರಿ

ಸುತುಡು + ಪುಟ್ಟೆ = ಸುತುಡು ವುಟ್ಟೆ




**ಪುಂಪ್ವಾದೇಶ ಟುಗಾಗಮುಗಳು:**

ತೆಲುಗು ವ್ಯಾಕರಣಗಳಲ್ಲಿ 'ಪುಂಪು' (ಪು ಮತ್ತು ಬಿಂದುಪೂರ್ವಕ ಪು) ಎಂಬಿವುಗಳ ಅದೇಶ, ಟುಗಾಗಮ, ರುಗಾಗಮ, ಆಲಿಗಾಗಮ ಮುಂತಾದವುಗಳನ್ನು ಹೇಳಲಾಗಿದೆ. ಇವುಗಳಲ್ಲಿ ಕೆಲವನ್ನು ಮಾತ್ರ ಕೇತನ ಸಮಾಸ ಪ್ರಕರಣದಲ್ಲಿ ಸೇರಿಸಿದ್ದಾನೆ. ಚಿನ್ನಯ ಸೂರಿಯು ತನ್ನ ಬಾಲ ವ್ಯಾಕರಣದಲ್ಲಿ ಸಂಧಿ ೨೮ರಲ್ಲಿ 'ಕರ್ಮಧಾರಯ ಸಮಾಸ ಪದದ ಉಕಾರಕ್ಕೆ ಸ್ವರ ಪರವಾಗಲು ಟುಗಾಗಮ ಬರುತ್ತವೆ, ಎಂದಿದ್ದಾನೆ. ಉದಾ: ಕಱಕು + ಅಮ್ಮು = ಕಱಕುಟಮ್ಮು

ಕರ್ಮಧಾರೆಯದಲ್ಲಿ ಮು ವರ್ಣಕ್ಕೆ 'ಪುಂಪು' ಗಳು ಬರುತ್ತವೆಂದು ಚಿನ್ನಯ ಸೂರಿ ಬರೆದಿದ್ದಾನೆ (ಸಂಧಿ. ಸೂ .೫೫). ಕೇತನ ಇದರ ಬಗ್ಗೆ ೧೧೮ನೆಯ ಪದ್ಯದಲ್ಲಿ ಹೀಗೆ ವಿವರಿಸಿದ್ದಾನೆ:

ಧೀನಿಧಿ ಗುಣ ಪದಮುಲ ಪೈ
ಮಾನುಗ ಹಲ್ಲುನ್ನ ನಂತಿಮಮುಲಗು ಮುಲಕುನ್
ಬೂನಿ ಪೂನಾದೇಶಂಬಗು
ಭೂನುತ ಪೈ ನಚ್ಚುಲುನ್ನ ಪುಟಲಗು ಮುಲಕುನ್

ಗುಣವಾಚಕಗಳ ಮೇಲೆ ವ್ಯಂಜನವಿದ್ದರೆ ಕೊನೆಯ 'ಮು' ಗಳಿಗೆ 'ಪು ನಾದೇಶ'ವಾಗುತ್ತದೆ. ಸ್ವರಗಳಿದ್ದರೆ 'ಪುಟ'ಗಳಾಗುತ್ತವೆ, ಉದಾ:

ವಾದಮು + ಪಂತಮುಲು = ವಾದವುಬಂತಮುಲು

ಪ್ರಮೋದಮು + ಶೃಂಗಾರಮು = ಪ್ರಮೋದವು ಶೃಂಗಾರಮು

ಮುತ್ಸಮು + ಸುರುಲು = ಮುತ್ಸವುಸುರುಲು

ಜೂ ದಮು + ಆಟಲು = ಜೂದವುಟಾಟಲು

ನೆಯ್ಯಮು + ಅದರಮುಲು = ನೆಯ್ಯಪುಟಾದರಮುಲು

ಇದರ ಪ್ರಕಾರ 'ಮು ವರ್ಣಕ್ಕೆ ವ್ಯಂಜನ ಪರವಾದಾಗ 'ವು' ಬರುವುದೆಂದು ಸ್ವರ ಪರವಾದರೆ 'ವು' ಜೊತೆಗೆ 'ಟ' ಕೂಡ ಬರುತ್ತದೆಂದು ಸ್ಪಷ್ಟವಾಗುತ್ತದೆ. ಕೆಲವರು ಈ ಕಾರ್ಯ ಬಹುಳವೆಂದು ಭಾವಿಸಿದ್ದಾರಾದರೂ ಕೇತನ ತನ್ನ ಹಿಂದಿನ ಪ್ರಯೋಗಗಳನ್ನು ದೃಷ್ಟಿಯಲ್ಲಿಟ್ಟುಕೊಂಡು 'ವುನಾಗಮ' ಮತ್ತು 'ವುಟ' ನಿತ್ಯವೆಂದೇ ವಿಧಿಸಿದ್ದಾನೆ.

**ತ್ರಿಕ ಸಂಧಿ:**

'ಆ ಈ ಏ' ಎಂಬ ಮೂರು ಸ್ವರಗಳಿಗೆ 'ತ್ರಿಕ' ಎಂಬ ಸಂಜ್ಞೆ. ಇವುಗಳಿಗೆ ವ್ಯಂಜನ ಪರವಾದಾಗ ಆ ವ್ಯಂಜನಕ್ಕೆ ದ್ವಿತ್ವವಾಗಿ ತ್ರಿಕಗಳಿಗೆ ಹ್ರಸ್ವ ಬರುತ್ತದೆ. ಉದಾ: ಆ + ಕನ್ಯ = ಆಕ್ಕನ್ಯ > ಅಕ್ಕನ್ಯ

ನನ್ನಯನು ಈ ಸಂಧಿಯನ್ನು ವಿಕಲ್ಪವಾಗಿ ಸ್ವೀಕರಿಸಿದ್ದಾನೆ. ಉದಾ:

ಅ. ಇಮ್ಮಹಾಭಾರತಂಬು

ಆ. ಎಯ್ಯದಿ

ಇ. ಆ ಗಿರಿರಾಜ

ಈ. ಈ ಜಗತಿ - ಈ ಮೊದಲಾದವು

ಕೇತನನು ಕೂಡ ನನ್ನಯನನ್ನು ಅನುಸರಿಸಿ ಈ ಸಂಧಿ ವಿಕಲ್ಪವೆಂದಿದ್ದಾನೆ (ಪ. ೧೩೬, ೧೩೭). ಅವನು ಹೇಳಿದ ಲಕ್ಷಣ ಹೀಗಿದೆ: "ಆ ಈ ಏ ಎಂಬ ಮೂರು ಸ್ವರಗಳಿಗೆ ವ್ಯಂಜನಗಳು (ಊಷ್ಮಗಳನ್ನು ಬಿಟ್ಟು) ಪರವಾದಾಗ ದೀರ್ಘ ಆ ಈ ಏ ಗಳು ಹ್ರಸ್ವಗಳಾಗುತ್ತವೆ. ಆಗ ವ್ಯಂಜನ ದ್ವಿತ್ವವಾಗುತ್ತದೆ.

**ಉದಾ:**

ಆ + ಕಾಮಿನಿ = ಆ ಕಾಮಿನಿ; ಅಕ್ಕಾಮಿನಿ

ಈ + ಕೊಡುಕು = ಈ ಕೊಡುಕು; ಇಕ್ಕೊಡುಕು

ಈ + ಊರು = ಈಯೂರು; ಇಯ್ಯಾರು

ಏ + ಕಾರ್ಯಮು = ಏ ಕಾರ್ಯಮು; ಎಕ್ಕಾರ್ಯಮು

ಆ + ಕಥಾ = ಆ ಕಥ; ಅಕ್ಕಥ

ಇಲ್ಲಿಗೆ ಕೇತನನು ನಿರೂಪಿಸಿದ ಸಂಧಿಯ ವಿಷಯ ಮುಗಿಯುತ್ತದೆ. ಅವನು ಕೆಲವು ಶಬ್ದ ರೀತಿಗಳನ್ನು ಕುರಿತು ಬೇರೆ ಬೇರೆ ಸಂದರ್ಭಗಳಲ್ಲಿ ವಿವರಿಸಿದ್ದಾನೆ.

**ಸಮೀಕ್ಷೆ:**

ನಾಗವರ್ಮನ ಕ.ಭಾ.ಭೂದ ಎರಡನೆಯ ಪರಿಚ್ಛೇದವಾದ 'ಸಂಧಿ ವಿಧಾನಂ' ಎಂಬುದು ಸಂಧಿಯನ್ನು ಕುರಿತು ಹೇಳುತ್ತಿದ್ದರೆ, ಕೇತನನ ಆಂ.ಭಾ.ಭೂ.ವು ಇಂಥ ವಿಭಾಗ ಕ್ರಮವನ್ನು ಮಾಡದೆ ಕೆಲವು ಕಂದ ಪದ್ಯಗಳಲ್ಲಿ ಸಂಧಿಯನ್ನು ವಿವರಿಸುತ್ತದೆ. ನಾಗವರ್ಮನ ಕೃತಿಯಲ್ಲಿ ಸೂತ್ರ ೧೮ರಿಂದ ಸೂತ್ರ ೩೬ರ ವರೆಗಿನ ಒಟ್ಟು ೧೯ ಸೂತ್ರಗಳಲ್ಲಿ ಸಂಧಿ ಕಾರ್ಯಗಳಿವೆ. ಕೇತನನ ಕೃತಿಯಲ್ಲಿ ಪದ್ಯ ೪೪ರಿಂದ ೬೩ರ ವರೆಗೆ ಸಂಧಿಯ ಬಗ್ಗೆ ವಿವೇಚಿಸಲಾಗಿದೆ. ಅನಂತರ ಸಮಾಸವನ್ನು ಹೇಳುವಾಗ ಇನ್ನೂ ಕೆಲವು ಸಂಧಿ ಕಾರ್ಯಗಳನ್ನು ಸೇರಿಸಲಾಗಿದೆ.

೧. ಪ್ರಾಚೀನ ಸಂಸ್ಕೃತ ವ್ಯಾಕರಣ ಪರಿಭಾಷೆಯಲ್ಲಿ 'ಸಂಧಿ' ಮತ್ತು 'ಸಂಹಿತಾ' ಸಮಾನಾರ್ಥಕ ಪದಗಳು. ಕನ್ನಡ ವ್ಯಾಕರಣಗಳಲ್ಲಿ ಸಂಹಿತಾ ಮತ್ತು ಸಂಧಿ ಎಂಬ ಎರಡು ಸಂಜ್ಞೆಗಳೂ ಬಳಕೆಯಾಗಿವೆ. ಕೇತನಾದಿ ಪ್ರಾಚೀನ ಆಂಧ್ರ ವೈಯಾಕರಣರು ಕೇವಲ ಸಂಧಿಯನ್ನೇ ಬಳಸಿದ್ದಾರೆ. ಸಂಹಿತಾ ಎಂಬುದು ಬಳಕೆಯಾಗಿಲ್ಲ.

೨. ಕ.ಭಾ.ಭೂ. ಸಂಜ್ಞಾ ಪರಿಚ್ಛೇದದ ೧೭ನೆಯ ಸೂತ್ರದಲ್ಲಿ ಪರಸ್ಪರ ಸನ್ನಿಕರ್ಷಃ ಸಂಹಿತಾ' ಎಂದು ಹೇಳಿದೆ. ವೃತ್ತಿಯಲ್ಲಿ 'ಶ್ಲಿಷ್ಟಾನಾಂ ವರ್ಣಾನಾಂ ಪರಸ್ಪರಮನ್ಯೋನ್ಯಂ ಸನ್ನಿಕರ್ಷಃ ಸಂಶ್ಲೇಷಃ ಸಂಹಿತಾ ಸಂಧಿರಿತ್ಯುವ್ಯತೇ' ಎಂದು ಸ್ಪಷ್ಟ ಪಡಿಸಿದೆ. ಕೇಶಿರಾಜನ ಶ.ಮ.ದ ಸೂತ್ರ ೫೯ರಲ್ಲಿ 'ಎರಡುಂ ಪಲವುಂ ವರ್ಣಂ ಪರಸ್ಪರಂ ಕೂಡುವಂದಂ ಅದೇ ಸಂಧಿ ವಲಂ"ಎಂದಿದೆ. ಕೇತನನು ಕೂಡ 'ಪೂರ್ವ ಪದಾಂತ ವರ್ಣ ಮತ್ತು ಪರ ಪದಾದಿ ವರ್ಣ ಕೂಡುವುದೇ ಸಂಧಿ' ಎಂದಿದ್ದಾನೆ. ಅವನನ್ನು ಅನುಸರಿಸಿ ಪೆದ್ದನ ಅಪ್ಪಕವಿ, ಅಥರ್ವಣ-ಮುಂತಾದ ಲಾಕ್ಷಣಿಕರು ಕೂಡ 'ವರ್ಣ ಸಂಯೋಗವೇ ಸಂಧಿ' ಎಂದಿದ್ದಾರೆ.

ಆಧುನಿಕ ವ್ಯಾಕರಣಕಾರರಲ್ಲಿ ಮುಖ್ಯನಾದ ಚಿನ್ನಯ ಸೂರಿ' 'ಪೂರ್ವ ಪರಸ್ವರ'ಗಳಿಗೆ ಪರಸ್ಪರ ಏಕಾದೇಶವಾಗುವುದು ಸಂಧಿ ಎಂದು ಹೇಳಿ, ಲೋಪ ಸಂಧಿಯೇ ಸಂಧಿ ಎಂದು ನಿಷ್ಕರ್ಷಿಸಿದ್ದಾನೆ. ಲೋಪಸಂಧಿಯ ವಿಷಯದಲ್ಲಿ ಕನ್ನಡ, ತೆಲುಗು ಮುಂತಾದ ಭಾಷೆಗಳು ಸಂಸ್ಕೃತಕ್ಕೆ ಭಿನ್ನವಾಗಿವೆ ಎಂಬುದು ಸ್ಪಷ್ಟ. ಕ.ಭಾ.ಭೂ. ಕೂಡ ಇದನ್ನು ಗುರುತಿಸಿದೆ ಎಂದರೆ ತಪ್ಪಾಗಲಾರದು. ಕ.ಭಾ.ಭೂದ ಸಂಧಿ ಪರಿಚ್ಛೇದದ ಆದಿಯಲ್ಲೇ 'ಸ್ವರೇ ಸ್ವರಸ್ಯ ಲೋಪಃ'(ಸೂ ೧೯) ಎಂದು ವಿಧಿಸಿರುವುದನ್ನು ನೋಡಿದರೆ ಲೋಪ ಸಂಧಿಗೆ ಎಷ್ಟು ಪ್ರಾಧಾನ್ಯವಿದೆ ಎಂಬುದು ತಿಳಿಯುತ್ತದೆ.

ಕೇತನ ಕೂಡ ಉತ್ವ ಸಂಧಿಯಲ್ಲಿ ಆಗುವ ನಿತ್ಯ ಲೋಪವನ್ನು ಮೊದಲು ಹೇಳಿ ಲೋಪ ಸಂಧಿ ತೆಲುಗಿನಲ್ಲೂ ಹೇಗೆ ಪ್ರಧಾನವಾಗಿದೆ ಎಂಬುದನ್ನು ಖಚಿತಪಡಿಸಿದ್ದಾನೆ.

೩. ನಾಗವರ್ಮನು ತನ್ನ ಭಾ. ಭೂದಲ್ಲಿ ಕನ್ನಡ ಸಂಧಿಗಳಾದ ಲೋಪ, ಆಗಮ ಆದೇಶ ಮತ್ತು ದ್ವಿತ್ವ ಸಂಧಿಗಳನ್ನು ಮಾತ್ರ ವಿವರಿಸಿದ್ದಾನೆ. ಅವುಗಳ ಜೊತೆಗೆ ಸಂಧಿ ದೋಷ, ಸಂಧಿ ವಿಕಲ್ಪ, ವಿಸಂಧಿ, ಅಸಹ್ಯೋಕ್ತಿ ಸಂಧಿ, ಶ್ರುತಿಕಷ್ಟ ಇತ್ಯಾದಿಗಳನ್ನು ಕೇಶಿರಾಜನಂತೆ ತಿಳಿಸಿಲ್ಲ. ಲೋಪ, ಆಗಮ, ಆದೇಶ- ಇವುಗಳನ್ನು ತಳಹದಿಯಾಗಿಟ್ಟುಕೊಂಡು ಸಂಧಿಯನ್ನು ವಿವರಿಸುವಲ್ಲಿ ಕನ್ನಡ ವ್ಯಾಕರಣಕಾರರು ಸಮಾನ ಮನಸ್ಸುಳ್ಳವರಾಗಿದ್ದಾರೆ. ಆದರೆ ಕನ್ನಡ ಸಂಧಿಯ ಅನೇಕ ಪಾರಿಭಾಷಿಕ ಪದಗಳಿಗೆ ಅವರು ಸಂಸ್ಕೃತಕ್ಕೆ ಋಣಿಯಾಗಿದ್ದಾರೆ.

ಕೇತನ ತನ್ನ ಕೃತಿಯ ಪ್ರಣಾಳಿಕೆಯಲ್ಲಿ ಆರು ಸಂಧಿಗಳನ್ನು ಪ್ರಸ್ತಾಪಿಸಿದ್ದರೂ ಅವುಗಳ ಹೆಸರು, ಲಕ್ಷಣಗಳನ್ನು ತಿಳಿಸದೆ ಹಲವು ಸಂಧಿಕಾರ್ಯಗಳನ್ನು ಮಾತ್ರ ಹೇಳಿದ್ದಾನೆ. ಈ ದೃಷ್ಟಿಯಿಂದ ಕೇತನನ ಸಂಧಿಪ್ರಕರಣ ಅಸಂಪೂರ್ಣವೆನ್ನಬಹುದು.

೪. ಕನ್ನಡ ಮತ್ತು ತೆಲುಗು ಲೋಪ ಸಂಧಿಗಳನ್ನು ಪರಿಶೀಲಿಸಿದಾಗ ಎರಡೂ ಅನೇಕ ವಿಷಯಗಳಲ್ಲಿ ಭೇದವಿರುವುದು ಸ್ಪಷ್ಟವಾಗುವುದು. ಕನ್ನಡ ಲೋಪಸಂಧಿಯಲ್ಲಿ 'ಸ್ವರಕ್ಕೆ ಸ್ವರ ಪರವಾದಾಗ ಲೋಪ' ಎಂದಿದೆ. ಆದರೆ ತೆಲುಗಿನಲ್ಲಿ ನಿತ್ಯಲೋಪ ಉತ್ವಕ್ಕ ಮಾತ್ರ. ಕನ್ನಡದಂತೆ ಅ-ಉ-ಎ (ಸೂ.೧೯, ೨೦ ಉದಾ) ಎಂಬ ಮೂರು ಸ್ವರಗಳು ಸೇರುವುದಿಲ್ಲ. ತೆಲುಗಿನಲ್ಲಿ ಅಕಾರಕ್ಕೆ ಸಂಧಿ ಬಹುಳ; ಎಕಾರಕ್ಕೆ ಯ ಕಾರಾಗಮವಾಗಲಿ, ನ ಕಾರಾಗಮವಾಗಲಿ ಆಗುತ್ತದೆ.

೫. ೨೨ನೆಯ ಸೂತ್ರ ಅ-ಇ-ಈ-ಎ ಎಂಬುವುಗಳಿಗೆ ಯ ಕಾರಾಗಮವನ್ನು ವಿಧಿಸುತ್ತದೆ. ಚಿನ್ನಯ ಸೂರಿ ದೀರ್ಘಸ್ವರಗಳಿಗೆ ಮಾತ್ರ ನಿತ್ಯವಾಗಿ ಯಕಾರಾಗಮ ವಿಧಿಸಿದ್ದಾನಾದರೂ ಕೇತನ ಎಲ್ಲ ಸ್ವರಗಳ ವಿಷಯದಲ್ಲೂ ಯಕಾರಾಗಮವಾಗಬಹುದೆಂದು ೪೯ನೆಯ ಪದ್ಯದಲ್ಲಿ ಹೇಳಿದ್ದಾನೆ. ಆದರೆ 'ಉ' ಕಾರಕ್ಕೆ ಮಾತ್ರ ತೆಲುಗಿನಲ್ಲಿ ಯಕಾರಾಗಮ ಬರುವುದೇ ಇಲ್ಲ. ಕನ್ನಡದಲ್ಲೂ ಹಾಗೆಯೇ. ಅಕಾರಾಂತ ಶಬ್ದದ ಮುಂದೆ ಅವಧಾರಣಾರ್ಥದ ಎಕಾರ ಬಂದಾಗ ಯಕಾರಾಗಮ. ಆದರೆ ಕೇತನ ಅ-ಆ-ಓ-ಇ-ಐ ಎಂಬುವುಗಳ ಮೇಲೆ ಯಕಾರಾಗಮ ಆಗಿರುವ ಉದಾಹರಣೆಗಳನ್ನು ೪೯ನೆಯ ಪದ್ಯದಲ್ಲಿ ಕೊಟ್ಟಿದ್ದಾನೆ.

೬. ತೆಲುಗಿನಲ್ಲಿ ವಕಾರಾಗಮ ಎಂಬುದೇ ಇಲ್ಲ. ಕನ್ನಡದಲ್ಲಿ ಪಟುವೀತಂ, ಮಡುವಿದು ಮುಂತಾದ ಸಂದರ್ಭಗಳನ್ನು ತೆಲುಗಿನಲ್ಲಿ ಪಟುವು + ಈತಂ, ಮಡುವು + ಇದು ಎಂಬುದಾಗಿ ಉತ್ವಸಂಧಿಯಾಗಿಯೇ ಹೇಳುತ್ತಾರೆ. 'ಪಟು' ಎಂಬುದಕ್ಕೆ 'ವು' ಪ್ರತ್ಯಯವನ್ನು ಮೊದಲೇ ಸೇರಿಸಿಬಿಡುತ್ತಾರೆ. ಆದುದರಿಂದ ಸಂಧಿಯಲ್ಲಿ ವಕಾರಾಗಮವಾಗುವ ಪ್ರಶ್ನೆಯೇ ಇಲ್ಲ.

೭. ತೆಲುಗಿನ ವ್ಯಾಕರಣಗಳ ಪ್ರಕಾರ ಪ್ರಕೃತಿಭಾವ ಎಂಬುದು ವ್ಯಂಜನಗಳ ವಿಷಯದಲ್ಲಿ ಇರಬಹುದೇ ಹೊರತು ಸ್ವರಗಳ ವಿಷಯದಲ್ಲಿ ಇಲ್ಲ. ಎಲೆ ಇದಾವುದೊ, ಅಯ್ಯೋ ಅಕ್ಕಟ, ಆನೆಯೋ ಅದ್ರಿಯೋ ಮುಂತಾದ ರೂಪಗಳಲ್ಲಿ ಯಕಾರಾಗಮವೋ, ನಕಾರಾಗಮವೋ, ರುಗಾಗಮ, ಯಗಾಗಮ, ವುನಾಗಮಾದಿಗಳೋ ಆಗಲೇಬೇಕು. ಸ್ವರಗಳನ್ನು ಪ್ರಕೃತಿ ಭಾವದಿಂದ ಬಿಡುವ ಪ್ರಶ್ನೆಯೇ ಇಲ್ಲ.

೮. ತೆಲುಗಿನಲ್ಲಿ ವರ್ಗ ಪ್ರಥಮಾಕ್ಷರಗಳು ತೃತೀಯಾಕ್ಷರಗಳಾಗುವುದು ನಕಾರಕ್ಕೆ 'ಕಚಟತಪ'ಗಳು ಪರವಾದಾಗ ಮಾತ್ರ. ಬೇರೆಡೆಗಳಲ್ಲಿ 'ಗಸಡದವ'ಗಳು ಬರುತ್ತವೆ. ಎಂದರೆ 'ಚ' ಮತ್ತು 'ಪ' ಎಂಬ ಅಕ್ಷರಗಳ ವಿಷಯದಲ್ಲಿ ಕೆಲವೆಡೆ 'ಜಬ' ಗಳು ಕೆಲವೆಡೆ 'ಸವ' ಗಳು ಬರುತ್ತವೆಂದರ್ಥ. ಕನ್ನಡದಲ್ಲಿ ಈ ಆದೇಶ 'ಚಟ'ಗಳಲ್ಲಿ ಬರುವುದಿಲ್ಲವೆಂದು ನಿಷೇಧಿಸಲಾಗಿದೆ (ಸೂ. ೩೦)

ತೆಲುಗಿನಲ್ಲಿ 'ಪ' 'ವ' ಆದಂತೆ ಕನ್ನಡದಲ್ಲೂ ಕೆಲವು ಸಂದರ್ಭಗಳಲ್ಲಿ ಆಗುವ ವಿಷಯವನ್ನು 'ಸ್ವರಯರಲೇಭ್ಯೋ ಬಹುಳಂ ವಃ ಪವರ್ಗಸ್ಯ' (ಸೂ. ೩೧) ಎಂಬ ಸೂತ್ರ ತಿಳಿಸುತ್ತದೆ. ಉದಾ: ಪೊಸವೆಸರ್ ಇತ್ಯಾದಿ.

೯. ಕನ್ನಡದಲ್ಲಿಲ್ಲದ ನಕಾರಾಗಮ, ವುನಾಗಮ, 'ಪುಟ' ಆಗಮ, ತ್ರಿಕ ಸಂಧಿ ಮುಂತಾದವನ್ನು ಕೇತನ ಹೇಳಿದ್ದಾನೆ. ಇವೆಲ್ಲ ತೆಲುಗು ವ್ಯಾಕರಣ ಕಾರ್ಯಗಳ ವ್ಯಾಪ್ತಿಯನ್ನು ಹೆಚ್ಚಿಸಿವೆ.

೧೦. ಅರ್ಥ ಪ್ರತೀತಿಯ ಬಗ್ಗೆ ನಾಗವರ್ಮನಲ್ಲಿ ಬರುವ ಪ್ರಸ್ತಾಪ ತೆಲುಗಿನಲ್ಲಿ ಇಲ್ಲದಿರುವುದನ್ನು ಗಮನಿಸಬೇಕು. ತೆಲುಗಿನಲ್ಲಿ ಸಂಧಿ ಆಗದ ಸಂದರ್ಭಗಳೇ ಇಲ್ಲ. ಅರ್ಥಪ್ರತೀತಿ ಕೆಡುವುದಾದರೆ ಬೇರೆ ರೀತಿ ಸಂಧಿ ಮಾಡಬೇಕೇ ಹೊರತು ಸಂಧಿ ಮಾಡದೆ ಇರಲು ಸಾಧ್ಯವಿಲ್ಲ. ಉದಾ: ಅಮ್ಮ + ಇಚ್ಚೆನು (ಅಮ್ಮ ಕೊಟ್ಟಳು) ಎಂಬುದನ್ನು ಲೋಪಸಂಧಿ ಮಾಡಿದರೆ 'ಅಮ್ಮಿಚ್ಚೆನು' (ಮಾರಿ ಕೊಟ್ಟ)

ಎಂಬ ಅರ್ಥ ಬರುತ್ತದೆ. ಇಂಥ ಸಂದರ್ಭಗಳಲ್ಲಿ ಯಕಾರಾಗಮ ಮಾಡಿ 'ಅಮ್ಮಯಿಚ್ಚೆನು' ಎನ್ನಬೇಕೆಂದು ಚಿನ್ನಯ ಸೂರಿ ವಿಧಿಸಿದ್ದಾನೆ.

ಇಲ್ಲಿಗೆ ಕೇತನನು ನಿರೂಪಿಸಿದ ಸಂಧಿ ವಿಷಯ ಮುಗಿಯುತ್ತದೆ. ಮುಂದೆ ಅವನು ಕೆಲವು 'ಶಬ್ದರೀತಿ'ಗಳನ್ನು ಕುರಿತು ಬೇರೆ ಬೇರೆ ಸಂದರ್ಭಗಳಲ್ಲಿ ವಿವರಿಸಿದ್ದಾನೆ.

೧. ಎರಡು, ಮೂರು, ನಾಲ್ಕು- ಎಂಬೀ ಸಂಖ್ಯಾವಾಚಿಗಳು ಪೂರ್ವದಲ್ಲಿದ್ದರೆ ಅವುಗಳಿಗೆ ಆದೇಶವಾಗಿ ಇರ್, ಮೂ, ನಾಲ್ ಎಂದು ಕ್ರಮವಾಗಿ ಪಡೆಯುವುದಾಗಿ ತಿಳಿಸಿದ್ದಾನೆ. ಎರಡು > ಇರ್; ಮೂರು (ಡು) ಮೂ; ನಾಲ್ಗು > ನಾಲ್, ಮೂರು ಎಂಬ ಶಬ್ದವು ಸಂಧಿಯಾದಲ್ಲಿ ಅದು ದ್ವಿಭಾವ (ದ್ವಿತ್ವ)ವನ್ನು ಪಡೆಯುತ್ತದೆ.

ಉದಾ:

೧. ಎರಡು > (ರೆಂಡು) ಇರ್ + ಪದಿ →ಇರುವದಿ (ಪ ವ) ಇಪ್ಪತ್ತು

೨. ಮೂರು (ಮೂಡು) ಮೂ + ಪದಿ→ ಮುಪ್ಪದಿ (ದ್ವಿತ್ವ) ಮೂವತ್ತು

೩. ನಾಲ್ಕು (ನಾಲ್ಗು) ನಾಲ್ + ಪದಿ → ನಲುವದಿ (ಹ್ರಸ್ವ ನ, ಪ >ವ) ನಲವತ್ತು

೨. ಕ್ರೊತ್ತ (ಹೊಸ) ಎಂಬ ಪದಕ್ಕೆ ವ್ಯಂಜನಗಳು ಪರವಾದಾಗ 'ಕ್ರೊ' ಎಂಬುದು ಮಾತ್ರ ಉಳಿದು ಪರವಾದ ವ್ಯಂಜನ ದ್ವಿತ್ವವನ್ನು ಪಡೆದುಕೊಳ್ಳುವುದಾಗಿ ಸೂತ್ರ ೧೨೪ರಲ್ಲಿ ಹೇಳಿದ್ದಾನೆ. ಉದಾ.ಗೆ ಕ್ರೊ ಕ್ಕಾರು, ಕ್ರೊತ್ತಮ್ಮುಲು, ಕೊನ್ನೆಲ, ಕೊಮ್ಮೆಱುಗುಲು - ಇಂಥವುಗಳಲ್ಲಿ ಈ ಕಾರ್ಯ ನಡೆದಿದೆ. ಕ್ರೊಂದಮ್ಮಿ, ಕ್ರೊಂಚಾಯ, ಕ್ರೊಂಬನಿಡಿ ಇಂಥ ಕಾರ್ಯಗಳು ಆಗುವುದಿಲ್ಲ. ಚಿನ್ನಯ ಸೂರಿಯ ಮತದಲ್ಲಿ ಆಗುತ್ತವೆ.

೩. ಕೆಂದಲಿರಾಕು, ಕೆಂದಮ್ಮಿಲು ಇತ್ಯಾದಿ ಪ್ರಯೋಗಗಳಲ್ಲಿ ಅಂಥದ್ದೇ ಅದ ಚೆಂಗಲ್ವ, ಚೆಂದೂವ - ಇಂಥ ಪದಗಳಲ್ಲಿಯ 'ಚೆಂ' ಎಂಬುದನ್ನು ಸಮಾನಾಂಶವಾಗಿ ಗ್ರಹಿಸಿ ಕೆಲವು ಪದಗಳಲ್ಲಿ 'ಚೆಂ' ಮುಂದೆ ಸೇರಿ ಅರುಣ ಕಾಂತಿಯನ್ನು ತಿಳಿಸುತ್ತದೆ ಎಂದು ವಿವರಿಸಿದ್ದಾನೆ (ಆಂ. ಭಾ.ಭೂ. ಪದ್ಯ ೧೨೦).

೪. ಪೇರು ಎಂಬ ಶಬ್ದವು ತೆಲುಗು ಶಬ್ದವಾಗಿದ್ದು ಅದು ಪದಗಳ ಮೊದಲಲ್ಲಿದ್ದು ಆಧಿಕ್ಯವನ್ನು ಸೂಚಿಸುವುದಾಗಿಯೂ ತಿಳಿಸಿ ಕೆಲವು ಉದಾಹರಣೆಗಳನ್ನು ನೀಡಿದ್ದಾನೆ. ಪೇರಾಕಲಿ, ಪೇರಿಂಪು- ಇತ್ಯಾದಿ.

ಅಲು ಶಬ್ದ ವಿಶೇಷೋತ್ತರ ಪದವಾಗಿದ್ದಲ್ಲಿ ಅದು ರಾಲು ಆಗಿ ಗೊಡ್ರಾಲು, ಜವರಾಲು- ಎಂದಾಗುವುದು. ಅಂತೆ ಪಾತಕುರಾಲು, ಗೆಡಪುರಾಲು, ಮುದ್ದರಾಲು ಈ ಪದಗಳನ್ನು ನೋಡಬಹುದು (ಆಂ.ಭಾ. ಭೂ ೧೬೮).

ಈ ಎಲ್ಲವನ್ನು ಪರಿಶೀಲಿಸಿದಾಗ ಕೇತನನ 'ಸಂಧಿ ವಿಧಾನಂ' ಎಂಬುದು ಕ್ಷಿಪ್ತವಾಗಿದ್ದರೂ ಅವನ ಕಾಲಕ್ಕೆ ಇದ್ದ ಅನೇಕ ಸಂಧಿಕಾರ್ಯಗಳನ್ನು ತಿಳಿಸುವಲ್ಲಿ ಶಸ್ವಿಯಾಗಿದೆ ಎನ್ನಬಹುದು.

## ಅಡಿಟಿಪ್ಪಣಿ

ಡಾ. ಬಿಳಿಗಿರಿ, ಆಲೋಕ, ಪು. ೧೫೯.

ಅದೇ, ಪು. ೧೫೬.

ಡಾ. ಎಲ್. ಬಸವರಾಜು, ಶಬ್ದಮಣಿದರ್ಪಣಂ, ಪು. ೫೭.

ಬೊಡ್ಡುಪಲ್ಲಿ ಪುರುಷೋತ್ತಂ, ತೆಲುಗು ವ್ಯಾಕರಣ ವಿಕಾಸಮು, ಪು. ೩೭೬.

ಶೇಷಗಿರಿ ಶಾಸ್ತ್ರೀ, ಆಂಧ್ರ ಶಬ್ದ ತರಂಗಿಣಿ, ಪು. ೪೦.

ಚಿನ್ನಯ್ಯ ಸೂರಿ ಮುಂತಾದವರು.

ಡಾ. ವಿ. ಶಿವಾನಂದ, ಶಬ್ದಮಣಿದರ್ಪಣ ವಿಳಾಸ, ಪು. ೭೯-೮೦.

ದುವ್ವೂರಿ ವೆಂಕಟರಮಣಶಾಸ್ತ್ರೀ, ರಮಣೀಯಮು, ಪು. ೧೮೫-೧೮೬.

ಸಂಧಿ ಪ್ರಭೇದಗಳು ಮತ್ತು ವಿವರಣೆಗೆ ಮುಖ್ಯ ಆಧಾರ - ಡಾ. ಹರಿಶಿವಕುಮಾರರ ಕೇತನ (ತೆ).

ಇದನ್ನೇ ತೆಲುಗು ವ್ಯಾಕರಣಗಳು "ಉತ್ತು" ಎನ್ನುತ್ತವೆ. ಉತ್ತು ಎಂದರೆ ಹ್ರಸ್ವ ಉಕಾರ (ತಪರತರಣ ತತ್ಕಾಲಸ್ಯ) ದೀರ್ಘ ಉಕಾರವಾದರೆ ಸಂಧಿಯಿಲ್ಲ.

ಈ ಉದಾಹರಣೆ ಕೆಲವು ಪ್ರತಿಗಳಲ್ಲಿಲ್ಲ. ಸತ್ವಮುಗಲಗೆಡಿಸಿ+ಊರಿಕಿ= ಸತ್ವಮುಗಲ-ಗೆಡಿಸೂರಿಕಿ ಎಂಬುದಾಗಿ ನಿತ್ಯ ಸಂಧಿಗೆ ಉದಾ ಇದೆ.

# ವಿಭಕ್ತಿ

1. ವಿಭಕ್ತಿ ಎಂದರೆ ಬೇರೆ ಮಾಡು, ವಿಭಾಗ ಮಾಡು, ಎಂದರ್ಥ.

   ವಿ + ಭಜ್ + ತಿ = ವಿಭಜನೆ

2. ಪದದಲ್ಲಿರುವ ಪ್ರಕೃತಿಯನ್ನು ಬೇರೆ ಮಾಡುವುದೇ ವಿಭಕ್ತಿ.[1]

3. ವಿಭಕ್ತಿ ಎಂದರೆ ಸಾಮಾನ್ಯವಾಗಿ ನಾಮ ವಿಭಕ್ತಿ ಎಂದೇ ಅರ್ಥ. ಆದರೆ ಪಾಣಿನಿ ನಾಮ ವಿಭಕ್ತಿ ಮತ್ತು ಕ್ರಿಯಾ ವಿಭಕ್ತಿ ಎಂದು ಎರಡನ್ನೂ ಹೇಳಿದ್ದಾನೆ.

4. ಪದದ ಅರ್ಥವನ್ನು ವಿಭಾಗಿಸುವುದರಿಂದ ವಿಭಕ್ತಿ ಎಂಬ ಹೆಸರು ಬಂದಿದೆ.[2]

ಹೀಗೆ ಎಲ್ಲರೂ ವಿಭಕ್ತಿ ಎಂದರೆ ವಿಭಜನೆ ಎಂಬ ಅರ್ಥವನ್ನು ನೀಡಿರುತ್ತಾರೆ. ಆದರೆ 'ವಿ' ಎಂದರೆ ವಿಶಿಷ್ಟವಾದ 'ಭಕ್ತಿ' ಎಂದರೆ ಕೂಡುವಿಕೆ ಎಂದೂ ಅರ್ಥ ಹೇಳಬಹುದು. ಭಕ್ತಿ ಎಂದರೆ ವಿಭಜನೆ ಎಂದೂ ಅರ್ಥ; 'ಸಂಯೋಗ'ವೆಂದೂ ಅರ್ಥ. ಪ್ರಕೃತಿ ಮತ್ತು ಪ್ರತ್ಯಯಗಳನ್ನು ವಿಭಾಗಿಸುವ ವಿಭಕ್ತಿಯ ಅರ್ಥಕ್ಕಿಂತ ಅವುಗಳನ್ನು ಸೇರಿಸಿ ಪದವನ್ನಾಗಿ ಮಾಡುವ ಅರ್ಥ ಪ್ರಧಾನವೆನಿಸುತ್ತದೆ. ವಿಭಕ್ತಿ ಎಂಬುದು ವ್ಯಾಕರಣದ ಒಂದು ಪಾರಿಭಾಷಿಕ ಪದ. ಪದದಲ್ಲಿರುವ ಕೆಲವು ವಿಶಿಷ್ಟ ಪ್ರತ್ಯಯಗಳಿಗೆ ವಿಭಕ್ತಿ ಪ್ರತ್ಯಯಗಳೆಂದು ಹೆಸರು. ಒಂದು ಪದದ ಕ್ರಿಯೆ ಮತ್ತು ಕಾರಕಗಳ ನಡುವಣ ಸಂಬಂಧವನ್ನು ಸೂಚಿಸುವುದು ವಿಭಕ್ತಿ ಕಾರ್ಯ.

ಆಂಗ್ಲ ವ್ಯಾಕರಣದಲ್ಲಿ 'Case' ಎಂಬ ಪದವು 'Casus' ಎಂಬ ಲ್ಯಾಟಿನ್ ಮೂಲದಿಂದ ಬಂದಿದೆ. ಅಲ್ಲಿ ಪ್ರಥಮಾ ವಿಭಕ್ತಿ ಮಾತ್ರವೇ ಪ್ರಾಚೀನ ರೂಪವೆಂದೂ ಉಳಿದುವು ಕ್ರಮೇಣ ಅದರಿಂದಲೇ ಬಂದಿವೆ ಎಂದೂ ಅಭಿಪ್ರಾಯ ಪಡಲಾಗಿದೆ. ವಿಭಕ್ತಿ ಪ್ರತ್ಯಯಗಳಿಲ್ಲದಿದ್ದರೆ ಪದಗಳಿಗೆ ಅರ್ಥ ವ್ಯಾಪ್ತಿಯಿಲ್ಲ. ನಿರ್ದಿಷ್ಟ ಪದಗಳ ಅರ್ಥ ವ್ಯಾಪ್ತಿಯಲ್ಲಿ ವಿಭಕ್ತಿ ಪ್ರತ್ಯಯಗಳ ಪಾತ್ರ ಹಿರಿದಾದುದು.

ವಿಭಕ್ತಿಯನ್ನು ಹೆಸರಿಸುವಲ್ಲಿ ಕರ್ನಾಟಕ ವೈಯಾಕರಣರು ಸಂಸ್ಕೃತ ವ್ಯಾಕರಣದ ವ್ಯಾಮೋಹಕ್ಕೆ ಒಳಗಾಗದೇ ಇರಲಿಲ್ಲ. ಸಂಸ್ಕೃತಾದಿ ಆರ್ಯ ಭಾಷೆಗಳು ಪ್ರತ್ಯಯಾತ್ಮಕ

ಭಾಷಾ ವರ್ಗಕ್ಕೆ ಸೇರಿರುವುದರಿಂದ ಅಲ್ಲಿ ವಿಭಕ್ತಿ ಪ್ರತ್ಯಯಗಳ ಮೂಲ ಸ್ವರೂಪವನ್ನು ಗುರುತಿಸುವುದು ಕಷ್ಟ. ಆದರೆ ಕನ್ನಡ, ತೆಲುಗು, ಮುಂತಾದ ದ್ರಾವಿಡ ಭಾಷೆಗಳು ಸಮುಚ್ಚಯಾತ್ಮಕ (Agglutinative) ಭಾಷಾ ವರ್ಗಕ್ಕೆ ಸೇರಿರುವುದರಿಂದ ಈ ಭಾಷೆಗಳಲ್ಲಿ ಪ್ರತ್ಯಯಗಳನ್ನು ಸುಲಭವಾಗಿ ಗುರುತಿಸಬಹುದು.

ನಾಗವರ್ಮನ ಕ.ಭಾ.ಭೂ.ದಲ್ಲಿ ವಿಭಕ್ತಿ ಮತ್ತು ಕಾರಕಗಳಿಗೆ ಸಂಬಂಧಿಸಿದಂತೆ ಎರಡು ಪ್ರಕರಣಗಳಿವೆ.'ವಿಭಕ್ತಿ ವಿಧಾನಂ' ಎಂಬಲ್ಲಿ ಸೂತ್ರ ೩೭ರಿಂದ ಸೂತ್ರ ೭೩ರ ವರೆಗೆ ವಿಭಕ್ತಿಗಳ ವಿಚಾರ ಬರುತ್ತದೆ. ಮುಂದಿನ 'ಕಾರಕ ವಿಧಾನಂ' ಎಂಬಲ್ಲಿ (ಸೂ.೭೪-೧೨೩)ವಿಭಕ್ತಿಗಳು ಕಾರಕ ವಿಧಾನದಿಂದ ಹೇಗೆ ಹತ್ತುತ್ತವೆ ಎಂಬುದನ್ನು ತಿಳಿಸಿದ್ದಾನೆ. ಶಬ್ದಸ್ಮೃತಿಯಲ್ಲೂ ವಿಭಕ್ತಿಗಳ ವಿಚಾರ ಇದೆ.

ಕ.ಭಾ.ಭೂ.ದ 'ವಿಭಕ್ತಿ ವಿಧಾನಂ' ಪ್ರಾರಂಭದ ಸೂತ್ರದಲ್ಲಿ ಲಿಂಗದ ಕಲ್ಪನೆ ಬಂದಿದೆ. ಅನಂತರ ವಿಭಕ್ತಿ ಪ್ರತ್ಯಯಗಳ ವಿವರಣೆ ಇದೆ. "ಅರ್ಥವದಕ್ರಿಯಾ ವಾಚಿ ಕೃದಂತ ಚ ಲಿಂಗಂ" (ಸೂತ್ರ ೩೭) ಎಂದು ಮೊದಲಿಗೆ ನಾಮಲಿಂಗದ ಬಗ್ಗೆ ಹೇಳಲಾಗಿದೆ. ಕ್ರಿಯಾವಾಚಕವಲ್ಲದ, ಅರ್ಥವುಳ್ಳ ಶಬ್ದವು 'ಲಿಂಗಂ' ಎಂದಿದ್ದಾನೆ. ಇದನ್ನೇ ಕೇಶಿರಾಜನು ತನ್ನ ಶ.ಮ.ದ.ದ ಸೂತ್ರ ೮೨ರಲ್ಲಿ "ಕ್ರಿಯೆಯಂ ನುಡಿಯದುದು ವಿಭಕ್ತಿಯಿಲ್ಲದುದು ಅರ್ಥವುಳ್ಳದುದು ಅಂತು ಅದು ಲಿಂಗಂ" ಎಂದು ಲಿಂಗದ ಪರಿಕಲ್ಪನೆಯನ್ನೇ ಮಾಡಿದ್ದಾನೆ. ಲಿಂಗವು ಕೃತ್, ತದ್ಧಿತ, ಸಮಾಸ, ನಾಮ -ಎಂದು ನಾಲ್ಕು ತೆರ.

ಲಿಂಗದ ಕಲ್ಪನೆ ನಾಗವರ್ಮ ಕೇಶಿರಾಜರಲ್ಲಿ ವಿಶೇಷವಾದುದು. ಅದು ಪ್ರಾತಿಪದಿತಕ್ಕೆ ಸಂಬಂಧಿಸಿದುದು. ಪುಲ್ಲಿಂಗ, ಸ್ತ್ರೀಲಿಂಗ, ನಪುಂಸಕಲಿಂಗಗಳ ಸಾಮಾನ್ಯ ಅರ್ಥವಲ್ಲ. ಕಾವ್ಯಾವಲೋಕನದ ಸೂತ್ರ ೧೫ರಲ್ಲಿಯೂ "ಧಾತು ವಿವರ್ಜಿತಮರ್ಥೋಪೇತಂ ಲಿಂಗಂ" ಎಂದಿದೆ. ಆದರೆ ಲಿಂಗದ ಬಗ್ಗೆ ನಾಗವರ್ಮನಿಗಿಂತ ಸ್ಪಷ್ಟ ಚಿತ್ರವನ್ನು ಕೊಟ್ಟವನು ಕೇಶಿರಾಜ.

ಸೂತ್ರ ೩೮ರಲ್ಲಿ "ತತೋ ವಿಭಕ್ತಯಃ" ಎಂದಿರುವುದರಿಂದ ಈ ಹಿಂದೆ ಹೇಳಿದ ನಾನಾ ಲಿಂಗಗಳಿಗೆ ಸಪ್ತ ವಿಧ ವಿಭಕ್ತಿ ಪ್ರತ್ಯಯಗಳು ಹತ್ತುವುದಾಗಿ ತಿಳಿಸಿದ್ದಾನೆ. ಆ ಸಪ್ತ ವಿಭಕ್ತಿ ಪ್ರತ್ಯಯಗಳು "ಮಮಿಂಕೆಯದದೊಳ್" ಎಂಬ ಸೂತ್ರದಲ್ಲಿ ಅಡಕವಾಗಿವೆ. ಪ್ರಥಮಾ ಮ್; ದ್ವಿತೀಯಾ ಅಮ್; ತೃತಿಯಾ ಇಂ; ಚತುರ್ಥಿ ಕೆ; ಪಂಚಮಿ ಅತ್, ಷಷ್ಠಿ ಅ; ಮತ್ತು ಸಪ್ತಮಿ ಒಳ್ ಎಂದಾಗಿರುವುವು. ಮ್ + ಅಮ್ + ಇಂ + ಕೆ + ಅತ್ + ಅ + ಒಳ್ - ಇವುಗಳು ಸೇರಿ 'ಮಮಿಂಕೆಯದದೊಳ್' ಎಂದಾಗುವುದು.

ವಿಭಕ್ತಿ ಪ್ರತ್ಯಯಗಳ ವಿಚಾರದಲ್ಲಿ ನಾಗವರ್ಮನ ಭಾ.ಭೂ.ವು ಶಬ್ದ ಸ್ಮೃತಿಯ ಸೂತ್ರ ೧೫ಕ್ಕೆ ಸಂವಾದಿಯಾಗಿದೆ. ಆದರೆ ಶಬ್ದಸ್ಮೃತಿಯಲ್ಲಿ ಸಪ್ತ ವಿಧ ವಿಭಕ್ತಿಗಳು ಕಾರಕವಶದಿಂದ ಹತ್ತುವುದಾಗಿ ಮಾತ್ರ ಹೇಳಿದರೆ, ಕ.ಭಾ.ಭೂ ದಲ್ಲಿ ಕಾರಕ ವಿಧಾನಕ್ಕೆಂದೇ ಒಂದು ಪ್ರತ್ಯೇಕ ಪ್ರಕರಣವನ್ನು ಮೀಸಲಾಗಿಟ್ಟಿರುವನು.

**ಪ್ರಥಮಾ ವಿಭಕ್ತಿ:**

ವಿಭಕ್ತಿ ಪ್ರತ್ಯಯಗಳು ವಚನ, ಸರ್ವನಾಮ, ಗುಣವಚನ, ಸಂಖ್ಯೆ - ಇವುಗಳ ಸಂಬಂಧವನ್ನು ಹೊಂದಿರುವುದರಿಂದ, ನಾಗವರ್ಮನು ಸೂತ್ರ ೪೦, ೪೧, ೪೨, ೪೩ ಮತ್ತು ೪೪ರಲ್ಲಿ ಅವುಗಳ ಪ್ರಸ್ತಾಪ ಮಾಡಿದ್ದಾನೆ. ಸೂತ್ರ ೪೫ರಲ್ಲಿ ಪ್ರಥಮೆಯ ಬಗ್ಗೆ ವಿವರಣೆ ದೊರೆಯುತ್ತದೆ.

ಸೂತ್ರ ೪೫ರಲ್ಲಿ "ಅತೋನುಸ್ವಾರಃ ಪ್ರಥಮೈಕ ವಚನಸ್ಯ" ಎಂದು ಪ್ರಥಮಾ ವಿಭಕ್ತಿ 'ಮ್' ದ ಬಗ್ಗೆ ವಿವರಣೆ ನೀಡುತ್ತಾನೆ. 'ಮ್' ಪ್ರತ್ಯಯವು ಅಕಾರಾಂತ ಲಿಂಗಗಳ ಮುಂದೆ ಬಿಂದು ಸ್ವರೂಪದಲ್ಲಿದ್ದು, ಇತರತ್ರ ಲೋಪ ಪಡೆಯುವುದು ಎಂದಿದ್ದಾನೆ. 'ಮ್' ಅನುಸ್ವಾರ ('ಂ') ಎಂದಾಗುವುದು. ಉದಾ: ಮರಂ, ನರಂ, ಧರ್ಮಂ, ದಾನಂ ಈ ಮೊದಲಾದುವು. ಬಿಂದು ಲೋಪದ ಬಗ್ಗೆ ಮುಂದಿನ ಸೂತ್ರ ಹೇಳುತ್ತದೆ. ಅಕಾರಾಂತವಲ್ಲದ ಶಬ್ದಗಳಲ್ಲಿ ಬಿಂದು ಲೋಪ. ಅದನ್ನೇ "ಅನ್ಯಸ್ಮಾಲ್ಲೋಪಃ" (ಸೂತ್ರ ೪೬) ಉದಾ. ಕರಿ, ಹರಿ, ನದಿ, ಬಿದಿ, ಮಡು, ಮಧು, ವಧು, ಸಿಸು, ಪಿತೃ, ಸವಿತೃ, ಕೆರೆ, ತೊರೆ, ತೋಳ್, ಬಾಳ್- ಇತ್ಯಾದಿ. ಇಲ್ಲಿ ನಾಗವರ್ಮನು ಇ,ಉ,ಋ,ಎ ಕಾರಾಂತ ಶಬ್ದಗಳನ್ನಲ್ಲದೆ ತೋಳ್, ಬಾಳ್ ಎಂಬುವನ್ನೂ ಕೊಟ್ಟಿದ್ದಾನೆ. ಸ್ವರಾಂತ, ವ್ಯಂಜನಾಂತಗಳೆರಡೂ ಅಕಾರಾಂತೇತರ ಶಬ್ದಗಳಲ್ಲಿ ಒಳಗೊಳ್ಳುತ್ತವೆಂದರ್ಥ. ಈ ಶಬ್ದಗಳಲ್ಲಿ ಪ್ರಥಮೆಯ ಪ್ರತ್ಯಯ 'ಮ್' ಹತ್ತುವುದಿಲ್ಲ. ಲೋಪವೂ ಆಗುವುದಿಲ್ಲ. ಕಾರಣವೆಂದರೆ ವಸ್ತುತಃ ಕನ್ನಡದಲ್ಲಿ ಪ್ರಥಮೆ ಇಲ್ಲದಿರುವುದು. ಈ ದೃಷ್ಟಿಯಿಂದ ಲೋಪದ ಪ್ರಶ್ನೆ ಇಲ್ಲಿ ಉದ್ಭವಿಸದು. ಅಲ್ಲಿ ಪ್ರಕೃತಿ ಇದ್ದ ರೂಪದಲ್ಲಿಯೇ ಪ್ರಥಮಾ ವಿಭಕ್ತಿಯಿರುತ್ತದೆ. ಒಂದು ವಿಭಕ್ತಿ ಪ್ರತ್ಯಯವೆಂದರೆ ಅದು ಲಿಂಗ, ವಚನ, ಕಾಲ, ಭೇದವಿಲ್ಲದೆ ಸಾರ್ವತ್ರಿಕವಾಗಿ ಹತ್ತುವುದು. ಕನ್ನಡ ಕೈಪಿಡಿಕಾರರು ಕನ್ನಡದಲ್ಲಿ ಪ್ರಥಮಾ ವಿಭಕ್ತಿ ಪ್ರತ್ಯಯವಿಲ್ಲ. ಅದು ಲಿಂಗವನ್ನು ಸೂಚಿಸುವ ಪ್ರತ್ಯಯ ಎಂದಿದ್ದಾರೆ.[೩]

ಸೂತ್ರ (೫೨) ರಲ್ಲಿ 'ಸ್ವರಾದೌ ನಾಗಮಃ ಪುಂಸಿ' ಎಂದಿದೆ. ಅಕಾರಾಂತ ಪುಲ್ಲಿಂಗ ಶಬ್ದಗಳಲ್ಲಿ ಸ್ವರಾದಿ ವಿಭಕ್ತಿಗಣ ಪರವಾದಾಗ ನಕಾರಾಗಮವಾಗುವುದೆಂದಿದೆ.

ಉದಾ. ದೇವನಂ, ದೇವನಿಂ, ದೇವನತ್ತಣಿಂ, -ಮುಂತಾಗಿ. ನಪುಂಸಕಲಿಂಗದ ಸಂದರ್ಭದಲ್ಲಿ ದಕಾರಾಗಮವಾಗುವುದು. (ನಪುಂಸಕಲಿಂಗೇ ದಃ ಸೂತ್ರ ೫೧). ಉದಾ: ಮನದಿಂ ಪ್ರಯೋಗ. ಮನದಿಂ ಬೇಗಂ. ಅಂತೆ ವನದತ್ತಣಿಂ ಬಂದಂ. ಆಧುನಿಕ ಭಾಷಾ ಶಾಸ್ತ್ರಜ್ಞರು ಪ್ರಥಮೆಯ ಅಸ್ತಿತ್ವವನ್ನು ಸ್ವೀಕರಿಸಲಿಲ್ಲ. ಅವರು ಪ್ರಥಮಾ ವಿಭಕ್ತಿ ಪ್ರತ್ಯಯವನ್ನು 'Zero Morpheme' ಎಂದು ಹೇಳುತ್ತಾರೆ. ಬಿಂದುವಿಗೆ ಮ್‌ಕಾರದ ಉಚ್ಚಾರಣೆಯನ್ನು ಕಲ್ಪಿಸಿರುವುದು (ಪ್ರಾಚೀನರು) ಬಹುಶಃ ಸಂಸ್ಕೃತದ ಅನುಕರಣೆ ಎಂದು ಕಾಣುತ್ತದೆ.

ಸೂತ್ರ ೫೨ರಲ್ಲಿ 'ವಿಭಾಷೆಯಾಮಿ ಮ್ನಾ' ಎಂದು ದ್ವಿತೀಯಾ ವಿಭಕ್ತಿ ಪ್ರತ್ಯಯ 'ಅಮ್' ಎನ್ನಲಾಗಿದೆ. ಅಕಾರಾಂತ ನಪುಂಸಕ ಲಿಂಗದ ಮೇಲೆ ದ್ವಿತೀಯಾ 'ಅಮ್' ಇದ್ದರೆ ವಿಕಲ್ಪದಿಂದ ಆ 'ಅಮ್' ಆದಿಯಲ್ಲಿ 'ಮ್' ಕಾರ, ನಕಾರಗಳಾಗುವುವು ಎಂದು ತಿಳಿಸಿದೆ. ಉದಾ: ಪೊಲಮಂ, ಪೊಲನಂ. ಅಂತೆ ನೆಲನಂ, ನೆಲಮಂ. ಆದರೆ ಕನ್ನಡ ಕೈಪಿಡಿಯಲ್ಲಿ ಅದು 'ಅನ್' ಎಂದು ತೋರುತ್ತದೆ. ಪ್ರಥಮಾ ವಿಭಕ್ತಿ ಪ್ರತ್ಯಯದಂತೆ ಇಲ್ಲಿಯೂ ಬಿಂದುವನ್ನು ಬರೆಯುವುದರಿಂದ ಮಕಾರ ಭ್ರಮೆ ಹುಟ್ಟಿಸಿರಬಹುದು' ಎಂದಿದೆ. ಪ್ರಾಚೀನ ಶಾಸನಗಳಲ್ಲಿ ಅನ್> ಆನ್ ಎಂದು ದೀರ್ಘ ಪಡೆದಿರುತ್ತದೆ. ಉದಾ: ಇತ್ತುದಾನ್; ಮಿಕ್ಕುದಾನ್; ಕಲ್ಲಾನೇಜಿದಾನ್; ಬಿಲ್ಲಾನಾದಂ- ಇತ್ಯಾದಿ ಪ್ರಯೋಗಗಳಿವೆ.

ಕವಿರಾಜಮಾರ್ಗಕ್ಕೂ ಹಿಂದಿನ ಗದ್ಯಪದ್ಯ ಶಾಸನಗಳಲ್ಲಿ (ಪೂರ್ವದ ಹಳಗನ್ನಡ) ದ್ವಿತೀಯಾ ವಿಭಕ್ತಿ ಪ್ರತ್ಯಯಗಳಲ್ಲಿ ಇಂತಹ ದೀರ್ಘತೆ ಕಂಡುಬರುತ್ತದೆ.

ಕೇಶಿರಾಜನು ಈ 'ಅಮ್' ವಿಗೆ ನತ್ವ ಮತ್ತು ಮತ್ವವನ್ನು ವಿಧಿಸಿದ್ದಾನೆ. ದ್ವಿತೀಯಾ ವಿಭಕ್ತಿ ಪ್ರತ್ಯಯಗಳು ಅಮ್, ಅನ್, ಆನ್, ಅ -ಗಳೆಂದು ತಿಳಿಯುವುದು.

**ತೃತೀಯಾ ವಿಭಕ್ತಿ:**

"ಅಂತೇ ದಂ ತೃತೀಯಾಃ" ಎಂದು ಸೂತ್ರ ೬೦ರಲ್ಲಿ ನಾಗವರ್ಮನು ತೃತೀಯಾ ವಿಭಕ್ತಿ ಪ್ರತ್ಯಯದ ಬಗ್ಗೆ ತಿಳಿಸಿರುತ್ತಾನೆ. ಆದರೆ ಅದು ವಾಸ್ತವವಾಗಿ 'ಇಂ' ಆಗಿದ್ದು (ಸೂ.೩೯ರ ಪ್ರಕಾರ) ಕಡೆಯಲ್ಲಿ ಪದದ ಮುಂದೆ 'ದಂ' ಬರುತ್ತದೆ. ಅದನ್ನೇ ಟೀಕುವಿನಲ್ಲಿ "ತೃತೀಯಾ ವಿಭಕ್ತಿಯ ಕಡೆಯಲ್ಲಿ ಸಿದ್ಧಮಾದ ಪದದ ಮುಂದೆ ದಂ ಎಂಬುದಕ್ಕುಂ" ಎಂದಿದೆ.

**ಉದಾ:**

ದಾನದಿಂದಂ (ದಾನದಿಂ + ದಂ)

ದಯೆಯಿಂದಂ (ದಯೆಯಿಂ + ದಂ)

ಗತಿಯಿಂದಂ (ಗತಿಯಿಂ + ದಂ)

ಮತಿಯಿಂದಂ (ಮತಿಯಿಂ + ದಂ)

ತೃತೀಯಾ 'ಇಂ'ಗೆ ಪುನಃ 'ದಂ' ಬಂದಿರುವುದು ವಿಶೇಷ. ಹಾಗೆ ಸೇರಿದಾಗ ಅದು ಇಂ + ದಂ =ಇಂದಂ ಎಂದಾಗುವುದು. ಈ ಕಾರಣ 'ಇಂ' ಹಾಗೂ 'ಇಂದಂ' ಎಂಬಿವೆರಡು ತೃತೀಯಾ ವಿಭಕ್ತಿ ಪ್ರತ್ಯಯಗಳೆಂದಂತಾಯಿತು. ಕೆಲವೆಡೆ 'ಎ' ಬರುವುದಾಗಿಯೂ ನಾಗವರ್ಮ ಹೇಳಿದ್ದಾನೆ. ಅದನ್ನು ಸೂತ್ರ ೬೧ರಲ್ಲಿ ಕಾಣುತ್ತೇವೆ.

"ಏದಂತತೌ ಚ" (ಸೂತ್ರ ೬೧) ಹಿಂದೆ ಹೇಳಿದ ತೃತೀಯಾ ವಿಭಕ್ತಿ ದಂ ಎಂಬಲ್ಲಿಯ ಅನುಸ್ವಾರ ಲೋಪವಾಗಿ ಏಕಾರ ಆದೇಶವಾಗುವುದು.

ಆಗ ಅದು ಗಂಧ + ಎ= ಗಂಧದೆ ಎಂದಾಗುತ್ತದೆಂದು ಹೇಳಲಾಗಿದೆ. ಅಂತೆ ನೆಲದೆ, ಪೊಲದೆ, ಕ್ರಮದೆ -ಈ ಮೊದಲಾದವುಗಳು, ತೃ.ವಿ.ಪ್ರ 'ಎ'ವನ್ನು ಒಳಗೊಂಡ ಪ್ರಯೋಗಗಳು.

ಗಂಧ + ಇಂ=ಗಂಧದಿಂ ಎಂಬಲ್ಲಿ ಅನುಸ್ವಾರ ಲೋಪವಾಗಿ 'ಗಂಧದಿ' ಉಳಿದು ಅದಕ್ಕೆ 'ಎ' ಪರವಾದಾಗ ಗಂಧದಿ + ಎ - ಗಂಧದೆ ಎಂದಾಗಿದೆ. ಅಂತೆ ಇನ್ನುಳಿದ ಪ್ರಯೋಗಗಳನ್ನು ಅರಿಯುವುದು. ಒಟ್ಟಾರೆ ನಾಗವರ್ಮನ ದೃಷ್ಟಿಯಲ್ಲಿ ತೃ.ವಿ.ಪ್ರ 'ಇಂ' ಮಾತ್ರವಾಗಿರದೆ ಅದು 'ಇಂದಂ' ಮತ್ತು 'ಇಂದೆ' ಎಂದು ಮೂರು ವಿಧಗಳಲ್ಲಿ ಕೂಡಿರುತ್ತದೆ. ಅದನ್ನು ಅನುಸರಿಸಿಯೇ ಮುಂದೆ ಕೇಶಿರಾಜನು ತನ್ನ ಶ.ಮು.ದ ದಲ್ಲಿ ಮೂರು ರೂಪಗಳನ್ನು ತೋರಿದ್ದಾನೆ.

ಎಂ.ವಿ.ಸೀತಾರಾಮಯ್ಯನವರು ಇದರ ಬಗ್ಗೆ ಬರೆಯುತ್ತಾ "ನಾಗವರ್ಮನು ತೃತೀಯೆಯಲ್ಲಿ ಇಂವೊಂದನ್ನೇ ಹೇಳಿ ಕಡೆಯಲ್ಲಿ ಪದದ ಮುಂದೆ ದಂ ಬರುವುದು ಎಂದಿದ್ದಾನೆ"[೫] ಎಂದಿದ್ದಾರೆ. ಆದರೆ ಅವನ ಕಲ್ಪನೆಯಲ್ಲಿ 'ಇಂ' (ಇಮ್) ಜೊತೆಗೆ ಇಂದಂ, ಇಂದೆ ಎಂಬ ಎರಡು ರೂಪಗಳು ಉಂಟು. ಅವನ ನಿರೂಪಣೆಯಲ್ಲಿ ಸ್ಪಷ್ಟತೆಯಿಲ್ಲ. ಪ್ರಾಯಶಃ ಸಂಸ್ಕೃತ ಸೂತ್ರಗಳಾದುದರಿಂದ ಈ ತೊಡಕು ಉಂಟಾಗಿರಬೇಕು. ಇವನನ್ನೇ ಅನುಸರಿಸಿದ ಕೇಶಿರಾಜನಲ್ಲಿ ಇದರ ಬಗ್ಗೆ ಸ್ಪಷ್ಟತೆ ಇದೆ. ಕೇಶಿರಾಜನು ತೃ.ವಿ.ಪ್ರ.ಕ್ಕೆ ಇಂ, ಇಂದಂ, ಇಂದೆ- ಎಂದೂ ಅವುಗಳ ಜೊತೆಗೆ ಏ ಕಾರವನ್ನು ಸೇರಿಸಿ ಒಟ್ಟಿನಲ್ಲಿ ನಾಲ್ಕು ಪ್ರತ್ಯಯಗಳನ್ನು ಪ್ರತ್ಯೇಕವಾಗಿ ತಿಳಿಸಿದ್ದಾನೆ.

ಈ ವಿಷಯದಲ್ಲಿ ಆಧುನಿಕ ವಿದ್ವಾಂಸರು "ತೃತೀಯೆಯ ಮೂಲ ರೂಪ ಇನ್, ಇಮ್ ಅಲ್ಲ. ಅದು ಇನ್ದಂ, ಇನ್ದೆ -ಎಂಬಲ್ಲಿ ಕಾಣಬಹುದು. ಇನ್ >ಇಮ್

ಆಗಿರುವುದು ನಕಾರವನ್ನು ಬಿಂದುವಾಗಿ ಬರೆಯತೊಡಗಿದ್ದರ ಪರಿಣಾಮವಾಗಿಯೇ ಎಂಬುದು ಸ್ಪಷ್ಟ. ಕೇವಲ ಕ್ವಚಿತ್ ಪ್ರಯೋಗ ಕಾವ್ಯಗಳಲ್ಲಿ ಮಾತ್ರ”[೬] ಎಂದಿದ್ದಾರೆ. ಇದರ ಬಗ್ಗೆ ಪ್ರಸ್ತಾಪಿಸುತ್ತಾ ಡಾ. ಎಲ್. ಬಸವರಾಜು ಅವರು “ತೃತೀಯಾ ವಿಭಕ್ತಿ ಪ್ರತ್ಯಯಗಳಲ್ಲಿ ‘ಎ’ ಎಂಬುದು ತೃತೀಯೆಯ ಪ್ರತ್ಯಯವಾಗಿರದೆ ಸಪ್ತಮೀ ವಿಭಕ್ತಿಯ ಪ್ರತ್ಯಯವೆಂದು ಹೇಳಬಹುದು”[೭] ಎಂದಿದ್ದಾರೆ. ಕ್ರಮದೆ, ನಯದೆ, ಭಯದೆ-ಮುಂತಾದ ಪ್ರಯೋಗಗಳು ತೃತೀಯೆಯ ‘ಎ’ ಪ್ರತ್ಯಯವನ್ನು ಒಳಗೊಂಡಿವೆ.

**ಚತುರ್ಥೀ ವಿಭಕ್ತಿ:**

“ಅತಶ್ಚತುರ್ಥ್ಯಾಸ್ತು ್ತೀಯೋ ನುಸ್ವಾರ ಪೂರ್ವಃ ಪುಂಸಿ” (ಸೂ. ೬೨) ಅಕಾರಾಂತವಾಗಿರುವ ಲಿಂಗಗಳಿಗೆ ಪರವಾದ ಚತುರ್ಥೀ ವಿಭಕ್ತಿಗೆ ಪುಲ್ಲಿಂಗದಲ್ಲಿ ಬಿಂದು ಮೊದಲಾಗಿದ್ದು ತನ್ನ ತೃತೀಯಾಕ್ಷರವನ್ನು ಪಡೆಯುತ್ತದೆ. ನಾಗವರ್ಮನ ಅಭಿಪ್ರಾಯದಲ್ಲಿ ಚ. ವಿ.ಪ್ರತ್ಯಯ ‘ಕೆ’ ಎಂದಿದ್ದರೂ ಅನುಸ್ವಾರ ಪೂರ್ವವಾದ ಕ ವರ್ಗದ ತೃತೀಯಾಕ್ಷರ ಗೆ (ಂಗೆ) ಬರುವ ವಿಷಯವನ್ನು ಈ ಸೂತ್ರದಲ್ಲಿ ಹೇಳಿದೆ. ಉದಾ: ನೃಪ + ಂಗೆ -ನೃಪಂಗೆ; ಅಂತೆ ಉಳಿದ ಉದಾಹರಣೆಗಳಾದ ದೇವಂಗೆ, ಚಂದ್ರಂಗೆ, ಅಯ್ಯಂಗೆ, ಅಪ್ಪಂಗೆ, ಪೆಜಂಗೆ, ಅವಂಗೆ -ಈ ಮೊದಲಾದವು. ಅಕಾರಾಂತ ಪುಲ್ಲಿಂಗ ‘ಗೆ’ ಬಿಂದುವೆರಸು ‘ಂಗೆ’ ಬರುವುದಾದರೆ, ಅದೇ ಅಕಾರಾಂತ ನಪುಂಸಕಕ್ಕೆ ವಿಕಲ್ಪದಿಂದ ‘ಕ್ಕೆ’ ವಿಕಲ್ಪವಾಗಿ ಬರುತ್ತದೆ ಎಂದು ಮುಂದಿನ ಸೂತ್ರ ೬೩ರಲ್ಲಿ ಹೇಳುತ್ತಾನೆ. ಅದು “ತಾನಪುಂಸಕೇ ದ್ವಿತ್ವಃ” (ಸೂತ್ರ ೬೩) ಕೊಡುವ ಉದಾಹರಣೆಗಳು: ಮನಕ್ಕೆ, ಮನಕೆ, ಬನಕ್ಕೆ ಬನಕೆ; ನೆಲಕ್ಕೆ, ನೆಲಕೆ; ತೃಣಕ್ಕೆ, ತೃಣಕೆ ಇತ್ಯಾದಿಗಳು. ಅಕಾರಾಂತವಲ್ಲದ ಲಿಂಗಗಳಿಗೆ ಪರವಾದ ಚ.ವಿ.ಪ್ರತ್ಯಯವಾದ ‘ಕೆ’ ಎಂಬುದಕ್ಕೆ ಕವರ್ಗದ ತೃತೀಯಾಕ್ಷರ ‘ಗ’ ಕಾರ ಬರುವುದಾಗಿ ಸೂತ್ರ ೬೪ರಲ್ಲಿ ವಿಶದೀಕರಿಸಿದ್ದಾನೆ. ಅದು, “ಶೇಷಾತ್ತೃತೀಯತ್ವಂ” (ಸೂತ್ರ ೬೪) ಉದಾ: ಯತಿಗೆ; ಮತಿಗೆ; ಗಿಡುಗೆ; ಮಡುಗೆ, ಮನೆಗೆ-ಇತ್ಯಾದಿ.

ಅದು, ಇದು ಎಂಬ ಸರ್ವನಾಮಗಳು ಚತುರ್ಥಿಯಲ್ಲಿ ಅದರ್ಕೆ, ಅದಕೆ; ಇದರ್ಕೆ, ಇದಕೆ ಎಂದಾಗುವುವು. ನಾಗವರ್ಮನು ಚ.ವಿ.ಪ್ರತ್ಯಯಕ್ಕೆ ಬಳಸಿಕೊಂಡ ಒಟ್ಟು ಸೂತ್ರಗಳು ೬೨, ೬೩, ೬೪ ಮತ್ತು ೬೫. ಅವನ ದೃಷ್ಟಿಯಲ್ಲಿ ಚ.ವಿ.ಪ್ರತ್ಯಯಗಳು ಗೆ, ಂಗೆ, ಕ್ಕೆ ಎಂಬ ಮೂರು. ಇದೇ ಅಭಿಪ್ರಾಯವನ್ನು ಕೇಶಿರಾಜನು ಹೇಳಿದ್ದಾನೆ. ಈ ವಿಚಾರದಲ್ಲಿ ಎಲ್ಲ ವೈಯಾಕರಣರ ಅಭಿಪ್ರಾಯಗಳು ಒಂದೇ. ನಾಗವರ್ಮನು “ಮುಮಿಂಕೆಯದದೊಳ್’ ಎಂಬ ಸೂತ್ರದಲ್ಲಿ ಸಪ್ತ ವಿಭಕ್ತಿಗಳನ್ನು ಹೆಸರಿಸಿದ್ದರೂ ಅಲ್ಲಿ ಬರುವುದು ಚತುರ್ಥಿಗೆ ‘ಕೆ’ ಮಾತ್ರ. ಆದರೂ

ಗೆ, ಂಗೆ ಗಳನ್ನು ಸೇರಿಸಿದ್ದಾನೆ. ವರ್ಗ ತೃತೀಯಾಕ್ಷರ 'ಗೆ' ಆದೇಶವಾಗುವುದು ಎಂಬ ಅಭಿಪ್ರಾಯ ನಾಗವರ್ಮ, ಕೇಶಿರಾಜರಲ್ಲಿ ಸಮಾನ. ಆದರೆ ಅದು ಭಟ್ಟಾಕಳಂಕನ ಶಬ್ದಾನುಶಾಸನದಲ್ಲಿ ಮಾತ್ರ ಕಾಣಬರುವುದಿಲ್ಲ.

ಮೇಲಿನ ವಿಷಯದಲ್ಲಿ ಡಾ|| ಶಿವಾನಂದರು "ಕೇಶಿರಾಜನು ಹಳಗನ್ನಡದಲ್ಲಿ ಅಕಾರಾಂತ ಪುಲ್ಲಿಂಗದಲ್ಲಿ (ನಾಗವರ್ಮನಂತೆ) ಬಿಂದುಸಹಿತ 'ಗೆ' ಬರುವುದು ಎನ್ನುತ್ತಾನೆ. ಆದರೆ ಪೂರ್ವ ಹಳಗನ್ನಡದಲ್ಲಿನ ನ ಕಾರ ಬರುವುದು ನಿಯತವಾಗಿದೆ. ಉದಾಹರಣೆಗೆ ಸುತನ್ಗೆ, ಅರಸನ್ಗೆ, ಅಜೀವೊನ್ಗೆ"[೬] ಎಂದಿದ್ದಾರೆ. ಆದರೆ ಅದು ನ ಕಾರವಲ್ಲ ಬಿಂದು ರೂಪ 'ನ್' ಎಂಬುದು ಪ್ರಾತಿಪದಿಕ ರೂಪವೇ. ಅವರಿತ್ತ ಉದಾಹರಣೆಗಳಲ್ಲಿ ಸುತನ್, ಅರಸನ್ ಇತ್ಯಾದಿ ಪ್ರಾತಿಪದಿಕಗಳು ಬಿಂದು ಸಹಿತ 'ಗೆ' ಪಡೆದು ಸುತಂಗೆ, ಅರಸಂಗೆ- ಎಂದಾಗಿವೆ. ಸುತಂ (ಂ>ನ್) ಪ್ರಕೃತಿ. ಅದು ಚತುರ್ಥಿ 'ಗೆ' ಪಡೆದು ಸುತಂಗೆ ಎಂದಾಗಿದೆ. ಸುತಂಗೆ ಹಾಗೂ ಸುತನ್ಗೆ -ಇವು ಎರಡೂ ಒಂದೇ ರೂಪ. ಅನುನಾಸಿಕಾಕ್ಷರಗಳಾದ ಙ, ಞ, ಣ, ನ, ಮ- ಇವು ಬಿಂದುವಿನ ಕೆಲಸವನ್ನು ನಿರ್ವಹಿಸುತ್ತವೆ.

**ಪಂಚಮಿ:**

"ಅತ್ತಣಿಂ ತ್ವನುಸಂಧೇಯಃ ಪಂಚಮ್ಯಾಃ" (ಸೂತ್ರ ೬೬) 'ಮಮಿಂಕೆಯದದೊಳ್' ಎಂಬಲ್ಲಿ ಪಂಚಮಿಗೆ ಅತ್ ಎಂದೇ ಹೇಳಿದೆಯಷ್ಟೆ. ಆದರೂ ನಾಗವರ್ಮ ಸೂತ್ರ ೬೬ ಮತ್ತು ಸೂತ್ರ ೮೪ರಲ್ಲಿ 'ಅತ್ತಣಿಂ' ಎಂದೇ ಸೂಚಿಸಿದ್ದಾನೆ. ಶಬ್ದಸ್ಮೃತಿಯ ೨೬ನೆಯ ಪದ್ಯದಲ್ಲಿಯೂ ಇದನ್ನೇ ಹೇಳಿದೆ. ಕೇಶಿರಾಜನು ಕೂಡ ತನ್ನ ಶ.ಮ.ದ ದಲ್ಲಿ "ಅತ್ತಣಿಂ (ನ್) ಎಂದು ನಿಮಿರ್ದುವರ್ ಅತ್ ಎಂದಾಗಿದ್ದ ಪಂಚಮಿಯಂ"[೭] ಎಂದೇ ತಿಳಿಸಿದ್ದಾನೆ. ಭಾ.ಭೂ.ದ ಟೀಕುವಿನಲ್ಲಿ "ಪಂಚಮಿ ವಿಭಕ್ತಿಗೆ ಅತ್ತಣಿಂ ಎಂಬ ಶಬ್ದ ಪತ್ತಿಸಲ್ಪಡವೇಟ್ಟುಂ' ಎಂದಿದೆ. ಉದಾ. ಊರಿನತ್ತಣಿಂ ಬಂದಂ, ಕೆರೆಯನತ್ತಣಿಂ ತಂದಂ, ಅವನತ್ತಣಿಂ ಭಯಂ. ಅತ್ + ಅಣ + ಇಂ - ಇವುಗಳು ಅತ್ತಣಿಂ ಎಂಬಲ್ಲಿ ಸೇರಿವೆ. ಇಂ ಎಂಬುದು ತೃತೀಯಾ ವಿಭಕ್ತಿಯೇ ಆಗಿದೆ. ಕಾರಣ ಪಂಚಮಿಯ ಅರ್ಥದಲ್ಲಿ ತೃತೀಯೆ ಬಳಕೆಯಾಗಿದೆ. ಪಂಚಮಿಯ ಅತ್ತಣಿಂ ಎಂಬಲ್ಲಿ ತೃತೀಯಾ ವಿಭಕ್ತಿ 'ಇಂ' ಇರುವುದರಿಂದ ಪಂಚಮಿಯ, ವೈಶಿಷ್ಟ್ಯವೇನೆಂಬುದು ಕಾಣುವುದಿಲ್ಲ. ಈ ದೃಷ್ಟಿಯಿಂದ ಪಂಚಮಿ ವಿಭಕ್ತಿ ಕನ್ನಡದಲ್ಲಿ ಇಲ್ಲವೆಂದೇ ತಿಳಿಯಬೇಕು. ಅದೇನಿದ್ದರೂ ತೃತೀಯೆ ಅದರ ಕಾರ್ಯವನ್ನು ನಿರ್ವಹಿಸುತ್ತದೆ.

ಕೆರೆಯತ್ತಣಿಂ ಬಂದಂ, ಕೆರೆಯಿಂ ಬಂದಂ- ಎಂಬಲ್ಲಿ ವ್ಯತ್ಯಾಸ ಕಾಣುವುದಿಲ್ಲ. ಹೊಸಗನ್ನಡದಲ್ಲಿ ಪಂಚಮಿಗ 'ದೆಸೆ' ಮತ್ತು 'ಕಡೆ' ಎಂದಾಗಿ ಸ್ವೀಕರಿಸಿ, ದೆಸೆಯಿಂದ,

ಕಡೆಯಿಂದ ಎಂದು ಮಾಡಿಕೊಂಡಿರುತ್ತೇವೆ. "ನಿಜವಾದ ಪಂಚಮೀ ವಿಭಕ್ತಿ ಪ್ರತ್ಯಯವು ಅತ್ ಎಂಬುದರ ವಿಸ್ತೃತ ರೂಪವಾದ ಅತ್ತಣಿಂ ಎಂದು (ದೊಂ?)ಂದೇ ಆಗಿದೆ"[೧೧] ಎಂಬ ಮಾತಿನಲ್ಲಿ ಸತ್ಯವಿದೆ. ಅಲ್ಲದೆ 'ಈ ವಿಭಕ್ತಿಯು ಕನ್ನಡಕ್ಕೆ ಸಹಜವಲ್ಲವೆಂದೂ ಸಂಸ್ಕೃತ ವ್ಯಾಕರಣಗಳ ಅನುಕರಣೆಯಿಂದ ಕಲ್ಪಿತವಾಗಿರುವುದೆಂದೂ ಆಧುನಿಕ ವಿದ್ವಾಂಸರು ಹೇಳಿದ್ದಾರೆ."[೧೧]

ಅತ್ತಣಿಂ- ಎಂಬ ಪ್ರಯೋಗ ಪ್ರಾಚೀನವಾದ್ದು, ಅದು ಕವಿರಾಜಮಾರ್ಗಕಾರ ಪಂಪಾದಿ ಪ್ರಾಚೀನ ಕವಿ ಕೃತಿಗಳಲ್ಲಿ, ಶಾಸನಗಳಲ್ಲಿ ಕಾಣಬರುತ್ತದೆ. ಚಿಕ್ಕಮಗಳೂರಿನ ಅನೇಕ ಶಾಸನಗಳಲ್ಲಿ ಇದರ ಬಳಕೆ ಇದೆ.

**ಷಷ್ಠೀ ವಿಭಕ್ತಿ:**

"ದೀರ್ಘಾದೇಶಃ ಷಷ್ಠ್ಯಾಯಥೇಷ್ಟಂ" (ಸೂತ್ರ ೬೭) ಎಂದು ನಾಗವರ್ಮನು ಷಷ್ಠಿಯ ಬಗ್ಗೆ ಹೇಳಿದ್ದಾನೆ. ಅದು ಹ್ರಸ್ವ ಸ್ವರ 'ಅ' ಎಂಬುದು ಪ್ರಾಚೀನಕಾಲದಲ್ಲಿ ಪೂರ್ವದ ಹಳಗನ್ನಡದಲ್ಲಿ ದೀರ್ಘವನ್ನು ಪಡೆದಿತ್ತು. ನಾಗವರ್ಮನಾದರೂ ಷಷ್ಠಿಯಲ್ಲಿ 'ಅ' ಎನ್ನುವುದರ ಪ್ರಸ್ತಾಪ ಮಾಡದೆ ದೀರ್ಘ 'ಆ' ದ ಬಗ್ಗೆ ಉಲ್ಲೇಖಿಸಿದ್ದಾನೆ. ಅದಕ್ಕೆ ಅವನು ಕೊಡುವ ಉದಾ. ನರೇಂದ್ರನಾ (ನರೇಂದ್ರ + ಆ), ಅಂತೆಯೇ ಕಾಂತೆಯಾ, ಧರ್ಮದಾ -ಈ ಮೊದಲಾದವು. ಇದನ್ನೇ ಅನುಸರಿಸಿದ ಕೇಶಿರಾಜನು ತನ್ನ ಶ.ಮ.ದ ಸೂತ್ರ ೧೨೭ರಲ್ಲಿ ಷಷ್ಠಿಗೆ ದೀರ್ಘವನ್ನು ಕಲ್ಪಿಸಿರುತ್ತಾನೆ. ಶ.ಸ್ಮೃ.ಪದ್ಯ ೩೨ರಲ್ಲೂ ಇದರ ಪ್ರಸ್ತಾಪ ಬರುತ್ತದೆ. ಷಷ್ಠಿಯ ದೀರ್ಘ ಆ ಕಾರ ಶಾಸನಗಳಲ್ಲಿ ಕಾಣಬರುತ್ತದೆ. ಇದೊಂದು ವೈಶಿಷ್ಟ್ಯ. ಬಾದಾಮಿ ಶಾಸನದಲ್ಲಿ "ಏಳನೆಯ ನರಕದಾ" ಎಂಬ ಮಾತು ಬರುತ್ತದೆ. ಹಾಗೆಯೇ 'ಕಟ್ವಪ್ಪಿನಾ' ಎಂಬುದು ಶ್ರವಣಬೆಳಗೊಳ ಶಾಸನದ ಪ್ರಯೋಗ. ಕವಿರಾಜಮಾರ್ಗಕಾರನು ಕೂಡ ನೃಪನಾ, ನೃಪನಂದನಾ- ಎಂದೇ ತಿಳಿಸಿದ್ದಾನೆ. ಕಾವ್ಯಾವಲೋಕನದ ಶ. ಸ್ಮೃ.ಯಲ್ಲೂ ಕೂಡ ಮೃಡನಾ, ಗಂಗಾಂಬುಧರನಾ- ಎಂದೇ ಪ್ರಯೋಗಗಳಿವೆ. ಬೇಡಗಡಾ, ಅಕ್ಕಟಾ -ಇವು ಷಷ್ಠಿ ದೀರ್ಘದ ಇನ್ನಿತರ ಉದಾಹರಣೆಗಳು. ಇನ್ನಿತರ ದ್ರಾವಿಡ ಭಾಷೆಗಳಲ್ಲಿ, ಷಷ್ಠಿಗೆ 'ಅ' ಎಂದೇ ಇದೆ. ಆದರೆ ಕನ್ನಡದಲ್ಲಿ ಮಾತ್ರ ದೀರ್ಘಾದೇಶ ಪಡೆಯುವುದು ಒಂದು ವಿಶೇಷ. ನಾಗವರ್ಮನು 'ಆ' ಬಳಸಿಲ್ಲ. ಅಜಿತನಾಥಪುರಾಣ, ವಡ್ಡಾರಾಧನೆ, ಪಂಪಭಾರತ ಈ ಕೃತಿಗಳಲ್ಲಿ ಷಷ್ಠಿಯ 'ಆ' ಬಳಕೆಯಾಗಿರುವುದು ಗಮನಾರ್ಹ.

**ಸಪ್ತಮೀ ವಿಭಕ್ತಿ:**

"ಸಪ್ತಮ್ಯಾ ಅಲ್ಲಿ ವಾ" (ಸೂತ್ರ ೬೮) ಎಂದು ಸಪ್ತಮಿಯ ಬಗ್ಗೆ ತಿಳಿಸಲಾಗಿದೆ. ನಾಗವರ್ಮನ ಅಭಿಪ್ರಾಯದಲ್ಲಿ ಸಪ್ತಮಿಗೆ 'ಒಳ್' ಎಂಬುದೇ ಆಗಿದೆ. ವಿಕಲ್ಪವಾಗಿ

'ಅಲ್ಲಿ' ಎಂಬುದು ಪ್ರಾಪ್ತಿಸುತ್ತದೆ. ಉದಾ: ಮನದೊಳ್, ಮನದಲ್ಲಿ ಬನದೊಳ್, ಬನದಲ್ಲಿ; ಅಲ್ಲಿ, ಒಳ್ -ಎಂಬಿವು ಸಪ್ತಮಿಯ ಸಾಮಾನ್ಯ ಪ್ರತ್ಯಯಗಳೆಂದು ನಮ್ಮ ಎಲ್ಲ ವೈಯಾಕರಣರ ನಿಲುವು ಆಗಿದೆ. ಆದರೂ ಕ್ವಚಿತ್ತಾಗಿ ಅಲ್, ಎ-ಎಂಬ ಪ್ರತ್ಯಯಗಳನ್ನೂ ಬಳಸಲಾಗಿದೆ. ಬೇರೊಳ್ (ಬೇರು + ಒಳ್); ಗುಹೆಯೊಳಗೆ, ಊರೊಳಗೆ, ಪುರದೊಳಗೆ- ಎಂಬಲ್ಲಿ ಒಳಗೆ' ಎಂಬುದು ಸಪ್ತಮಿ. ನಾಡಲ್ಲಿ, ಕಲೆಯಲ್ಲಿ-ಎಂಬಲ್ಲಿ 'ಅಲ್ಲಿ' ಬಳಕೆಯಾಗಿದೆ. ಅಲ್ ಪ್ರತ್ಯಯಕ್ಕೆ ಉದಾ: ತಲೆಯಲ್, ಕತ್ತುರಿಯಲ್, ಬೆಸದಲ್-ಇತ್ಯಾದಿ. ಇವುಗಳಿಗೆ ಸಂವಾದಿಯಾಗಿ 'ಎ' ಎಂಬುದು ಬಳಕೆಯಲ್ಲಿತ್ತೆಂದು ಪಂಪಭಾರತ, ವಡ್ಡಾರಾಧನೆ ಮೊದಲಾದ ಕೃತಿಗಳಿಂದ ತಿಳಿಯಬಹುದು. ಅಲ್ಲದೆ ಪೂರ್ವದ ಹಳಗನ್ನಡದಲ್ಲಿ ಸಪ್ತಮಿಗೆ ಒಳ್, ಒಳ್ಳೆ, ಒಳು, ಒಳೆ, ಅಲ್ಲಿ, ಅಲಿ, ಉಳ್- ಇತ್ಯಾದಿಗಳನ್ನು ಕಾಣುತ್ತೇವೆ. 'ಉಳ್'ಗೆ ನಾಡುಳ್, ವೆಟ್ಟಿದುಳ್- ಇತ್ಯಾದಿ ಪ್ರಯೋಗಗಳನ್ನು ಶಾಸನಗಳಲ್ಲಿ ಕಾಣುತ್ತೇವೆ. 'ಅಲಿ' ಗೆ ಪ್ರಯೋಗ ಒಡ್ಡಲಿ. "ಪೂರ್ವದ ಹಳಗನ್ನಡದಲ್ಲಿ ಆಗಮ, ಆದೇಶ ರೂಪಗಳಿದ್ದರೂ ಇವೆಲ್ಲಕ್ಕೂ ಉಳ್ ಎಂಬುದೇ ಮೂಲವಾಗಿರುವುದು ಸ್ಪಷ್ಟ."[೧೮] ಮರಿಯಪ್ಪ ಭಟ್ಟರು ಸಪ್ತಮಿಯ 'ಉಳ್ ಎಂಬುದರ ಮೂಲ 'ಉಲ್' ಎಂದು ಅಭಿಪ್ರಾಯ ಪಟ್ಟಿದ್ದಾರೆ. ನಾಗವರ್ಮನು ಸಪ್ತಮಿಯ ಬಗ್ಗೆ ಹೇಳಿದ್ದರೂ 'ಸತಿ ಸಪ್ತಮಿ' ಯ ಬಗ್ಗೆ ಏನನ್ನೂ ಹೇಳಿಲ್ಲ. ಕೇಶಿರಾಜನು ಅದರ ಬಗ್ಗೆ ಹೇಳುವುದಲ್ಲದೆ ಅದು ಕನ್ನಡದ ಅಸಾಧಾರಣ ಲಕ್ಷಣಗಳಲ್ಲಿ ಒಂದು ಎಂದು ಕನ್ನಡ ಜಾಯಮಾನದ ಬಗ್ಗೆ ಹೆಚ್ಚಿಗೆ ಹೇಳಿದ್ದಾನೆ. ಒಟ್ಟಾರೆ ಸಪ್ತಮಿ ವಿಭಕ್ತಿಗೆ ಒಳ್, ಒಳಗೆ, ಅಲ್ಲಿ ಎಂಬುದರ ಜೊತೆಗೆ ಉಳ್, ಅಲಿ, ಎ- ಎಂಬ ಪ್ರತ್ಯಯಗಳು ಇರುವುವು ಎಂದು ತಿಳಿದು ಬಂದಿದೆ. ಪ್ರಾಚೀನ ಗ್ರಂಥಗಳನ್ನು ಮತ್ತು ಶಾಸನಗಳನ್ನು ಅಭ್ಯಸಿಸುವವರಿಗೆ ಇವುಗಳ ಮಾಹಿತಿ ಅನಿವಾರ್ಯ, ಅಷ್ಟೇ ಉಪಯುಕ್ತ.

**ಸಂಬೋಧನೆ:**

ನಾಗವರ್ಮನು ಹೇಳಿರುವ 'ಮಮಿಂಕೆಯದದೊಳ್' ಎಂಬಲ್ಲಿ ಸಂಬೋಧನೆಯ ಬಗ್ಗೆ ವಿವರಣೆ ಇಲ್ಲ. ಆದರೂ ಕನ್ನಡ ವೈಯಾಕರಣರು ಸಂಬೋಧನಾ ವಿಭಕ್ತಿಯನ್ನು ಕುರಿತು ಹೇಳಿದ್ದಾರೆ. ನಾಗವರ್ಮನು ಆಮಂತ್ರಣೇ ಪ್ರಥಮೈಕ ವಚನಸ್ಯಲೋಪ:" ಸೂತ್ರ ೭೦) ಎಂದು ಇದರ ಬಗ್ಗೆ ತಿಳಿಸಿದ್ದಾನೆ. ಸಂಬೋಧನೆಯಲ್ಲಿ ಪ್ರಥಮ ಏಕವಚನ ಪ್ರತ್ಯಯಕ್ಕೆ ಲೋಪ ಬಂದು, ಅಂತ್ಯ ಸ್ವರವನ್ನು ವಿಕಲ್ಪವಾಗಿ ದೀರ್ಘದ ಉಚ್ಚಾರಣೆ ಮಾಡುವುದು ಸಂಬೋಧನೆಯ ಲಕ್ಷಣ. ಉದಾ. ಎಲೆ ದೇವಾ, ಎಲೆ ಭೂಪಾ, ಎಲೆ ಅಣ್ಣಾ, ಎಲೆ ಅಕ್ಕಾ, -ಇತ್ಯಾದಿ. ಕ.ಭಾ.ಭೂ.ದ ಮೇಲಿನ ಸೂತ್ರಕ್ಕೆ ಶ.ಸ್ಮೃ.ಯ

ಪದ್ಯ ೨೮ ಮತ್ತು ಕೇಶಿರಾಜನ ಶ.ಮ.ದ.ಪ ಪದ್ಯ ೧೩೪, ೧೩೫, ೧೩೬ ಇವುಗಳು ಸಂವಾದಿಯಾಗಿವೆ. "ಸಂಬೋಧನೆಯು ಕಾರಕ ವಿಭಕ್ತಿಯಲ್ಲ. ಯಾರನ್ನೋ ಅಥವಾ ಯಾವುದನ್ನೋ ಕುರಿತು ತನ್ನತ್ತ ಗಮನ ಸೆಳೆಯುವಂತೆ ಮಾಡುವುದೇ ಸಂಬೋಧನೆ"[೧೬] ವಾಸ್ತವವಾಗಿ ಇದರ ಅವಶ್ಯಕತೆಯೇ ಇಲ್ಲವೆನ್ನಬಹುದು. ಕಾರಣ ಅದು ಪ್ರಥಮೆಯ ಒಂದು ಭೇದ ಮಾತ್ರ. ಬಹುವಚನ ಪ್ರತ್ಯಯಗಳಾದ ಇರ, ಇರಾ, ಇರೆ ಎಂಬುವು ಸಂಬೋಧನೆಯಲ್ಲಿ ಸೇರುವವು. ಸಂಬೋಧಿಸುವ, ಕರೆಯುವ ಅರ್ಥದಲ್ಲಿ ಪ್ರಥಮೆಯ ಬದಲಾಗಿ ಸಂಬೋಧನೆ ಬರುತ್ತದೆ. ಪ್ರಥಮೆಗೂ ಇದಕ್ಕೂ ಹೆಚ್ಚು ವ್ಯತ್ಯಾಸವಿಲ್ಲ. ಆಮಂತ್ರಣದಲ್ಲಿ ವರ್ತಿಸುವ ಪ್ರಥಮ ಏಕವಚನದ 'ಮ' ಕಾರಕ್ಕೆ ವಿಕಲ್ಪದಿಂದ 'ಏ' ಕಾರ ಬರುವುದು. ಅದನ್ನೇ ನಾಗವರ್ಮನು "ಏತ್ವಂ ವಾ ತದಂತಸ್ಯ" (ಸೂತ್ರ ೭೧) ಎಂದಿದ್ದಾನೆ. ಅದಕ್ಕೆ ಉದಾ: ಎಲೆ ದೇವಾ, ಎಲೆ ಭೂಪಾ, ಎಲೆ ಮಂದಾನಿಲವೇ, ತಂಬೆಲರೇ, ಮಾವೇ, ಮಲ್ಲಿಗೆಯೇ, ಇಂದೋಳವೇ -ಇತ್ಯಾದಿ. ಇನ್ನು ಬಹುವಚನದಲ್ಲಿ ಸಂಬೋಧನೆಯನ್ನು ಕುರಿತು, ಸೂತ್ರ ೭೨ರಲ್ಲಿ "ಇರಾಲ್ಲೇಪೋಗಳಃ ಸಂಬೋಧನಾ ವಿಷಯೇ" ಎಂದಿದೆ. ದ್ವಿತ್ವ ಬಹುವಚನಕ್ಕೆ ಉಕ್ತವಾದ 'ಗಳ್' ಪ್ರತ್ಯಯದ ಮುಂದೆ ಇರಾಗಮ ಬರುವುದಾಗಿ ಹೇಳಿದ್ದಾನೆ ನಾಗವರ್ಮ. ಅದಕ್ಕೆ ಅವನು ಕೊಡುವ ಉದಾ: ದೈವಂಗಳಿರಾ, ದೇವತೆಗಳಿರಾ, ಮಾಮರಂಗಳಿರಾ, ನಂದನಗಳಿರಾ ಇತ್ಯಾದಿ.

ಮುಂದಿನ ಸೂತ್ರದಲ್ಲಿ ನಯಸೇನಾಚಾರ್ಯನ ಮತದಂತೆ ಸಂಬೋಧನೆಯಲ್ಲಿ ದೀರ್ಘಾದೇಶ ಬರುವುದಾಗಿ, "ದೀರ್ಘೋಕ್ತಿರ್ನಯಸೇನಸ್ಯ" ಎಂದಿದ್ದಾನೆ. ಅದಕ್ಕೆ ಉದಾ: ದೇವಾ ಬಿನ್ನಪಂ. 'ದೇವಾ' ಎಂಬಲ್ಲಿ ದೀರ್ಘಾದೇಶವಿದೆ.

ಹೀಗೆ ನಾಗವರ್ಮನು ಸಂಬೋಧನೆಗೆ ಬಳಸಿಕೊಂಡಿರುವ ಸೂತ್ರಗಳು ಒಟ್ಟು ೪ (ಸೂತ್ರ ೭೦, ೭೧, ೭೨, ೭೩). ಸಂಬೋಧನೆಯೊಂದಕ್ಕೆ ಇಷ್ಟು ಸೂತ್ರಗಳನ್ನು ಬಳಸಿಕೊಂಡಿರುವುದು ಆಶ್ಚರ್ಯದ ಸಂಗತಿ. ಪ್ರಾಯಶಃ ಅವನ ಕಾಲದಲ್ಲಿ ಸಂಬೋಧನೆಗೆ ಅಷ್ಟೊಂದು ಪ್ರಾಮುಖ್ಯತೆ ಇತ್ತೇನೋ?

'ವಿಭಕ್ತಿ ವಿಧಾನಂ' ಎಂಬಲ್ಲಿ ಉಳಿದಿರುವ ೪೧, ೪೨, ೪೩, ೪೪ ಹಾಗೂ ೪೭, ೪೮, ೪೯ ಈ ಸೂತ್ರಗಳಲ್ಲಿ ವಚನ ಪ್ರತ್ಯಯ, ಗುಣವಚನ, ಸರ್ವನಾಮಗಳ ಬಗ್ಗೆ ಹೇಳಲಾಗಿದೆ.

**ವಚನ ಪ್ರತ್ಯಯಗಳು:** ವಚನ ಪ್ರತ್ಯಯಗಳು ವಿಭಕ್ತಿ ಪ್ರತ್ಯಯ ಪೂರ್ವದಲ್ಲಿ ಬರುವುದರಿಂದ ಅವುಗಳನ್ನು ನಾಗವರ್ಮನು ವಿಭಕ್ತಿ ವಿಧಾನದಲ್ಲಿ ಪ್ರಸ್ತಾಪಿಸಿರುತ್ತಾನೆ.

'ದ್ವಿತ್ವ ಬಹುತ್ವಯೋರ್ಗಳಾದೌ' ಎಂದು ಸೂತ್ರ ೪೦ರಲ್ಲಿ ವಚನ ಪ್ರತ್ಯಯಗಳ ಬಗ್ಗೆ ಹೇಳಿದ್ದಾನೆ. ಸೂತ್ರದ ಪ್ರಕಾರ ಅರ್, ವಿರ್, ಗಳ್, ಕಳ್ -ಎಂಬಿವು ವಚನ

ಪ್ರತ್ಯಯಗಳು. ಇವು ವಿಭಕ್ತಿ ಪೂರ್ವದಲ್ಲಿ ಬರುವವು. ಕನ್ನಡದಲ್ಲಿ ಏಕ ಮತ್ತು ಬಹುವಚನಗಳು ಮಾತ್ರ ಇವೆ. ದ್ವಿವಚನವಿಲ್ಲ. ಸಂಸ್ಕೃತದ ಅನುಕರಣೆಯಿಂದ ಕನ್ನಡದಲ್ಲೂ ದ್ವಿವಚನವಿದೆ ಎಂದು ನಾಗವರ್ಮನಂತೆ ಕೇಶಿರಾಜನೂ ಹೇಳಿದ್ದಾನೆ. ದ್ವಿವಚನಕ್ಕೆ ನಾಗವರ್ಮ ಕೊಡುವ ಉದಾ: ಕಣ್ಗಳ್, ಕಣ್ಗಳಂ, ಕಣ್ಗಳಿಂ- ಇತ್ಯಾದಿ. ಬಹುವಚನ ಪ್ರತ್ಯಯಗಳೇ ಆಗಿವೆ. ವಿಭಕ್ತಿ ಪ್ರತ್ಯಯಗಳು ಈ ದ್ವಿವಚನ ಹಾಗೂ ಬಹುವಚನ ಪ್ರತ್ಯಯಗಳ ಅನಂತರದಲ್ಲಿ ಬರುವುವು. ಉದಾ: ಕಣ್ಗಳ್, ಕಣ್ಗಳಂ, ಕಣ್ಗಳಿಂ, ಕಣ್ಗಳ್ಗೆ, ಕಣ್ಗಳತ್ತಣಿಂ, ಕಣ್ಗಳ, ಕಣ್ಗಳೊಳ್. ಸೂತ್ರ ೪೨ರಲ್ಲಿ ಇನ್ನುಳಿದ ಬಹುವಚನ ಪ್ರತ್ಯಯಗಳನ್ನು ಕುರಿತು ಹೇಳಿದೆ. ಅಲ್ಲಿ "ಸ್ತ್ರೀ ಪುರುಷ ವಾಚಕೇಷ್ವಿರರ್ ದಿರ್‌ವಿರ್ ಕ್ವಚಿತ್" (ಸೂತ್ರ ೪೨) ಎಂದಿರುವುದರಿಂದ ಅರ್, ಇರ್, ದಿರ್ ಮತ್ತು ವಿರ್ ಇವುಗಳು ಸ್ತ್ರೀಲಿಂಗ ಮತ್ತು ಪುಲ್ಲಿಂಗ ಶಬ್ದಗಳಲ್ಲಿ ಬರುವುವು. ಇವು ಈ ಹಿಂದೆ ಹೇಳಿದ 'ಗಳ್' ಪ್ರತ್ಯಯವನ್ನು ನಿಷೇಧಿಸಿ ಬರುವುದುಂಟು. ಉದಾ: ಸ್ತ್ರೀಲಿಂಗಕ್ಕೆ- ಪೆಂಡಿರ್, ತೋಟಿರ್ -ಇತ್ಯಾದಿ. ಪುಲ್ಲಿಂಗಕ್ಕೆ: ತಮ್ಮಂದಿರ್ (ತಮ್ಮ+ ದಿರ್), ತಂದೆವಿರ್ ಇತ್ಯಾದಿ. ಮಾವಂದಿರ್, ಮಾವಂಗಳ್, ಅತ್ತೆವಿರ್, ಅತ್ತೆಗಳ್ ಎಂಬ ಪ್ರಯೋಗಗಳಲ್ಲಿ'ಗಳ್' ಹಾಗೂ'ದಿರ್' ಎರಡೂ ಪ್ರತ್ಯಯಗಳೂ ಬಂದಿವೆ. ಈ ಕಾರಣ 'ಗಳ್' ಜೊತೆಗೆ ಅರ್, ಇರ್, ವಿರ್, ದಿರ್- ಇವು ದ್ವಿವಚನ ಮತ್ತು ಬಹುವಚನ ಪ್ರತ್ಯಯಗಳೆಂದು ತಿಳಿಯಬಹುದು.

ಸೂತ್ರ ೪೩ರಲ್ಲಿ "ಸ್ವಾರ್ಥೇऽತಃ ಕಳ್" ಎಂದಿರುವುದರಿಂದ ಹಿಂದೆ ಹೇಳಿದ ಬಹುವಚನ ಪ್ರತ್ಯಯಗಳಿಗೆ ಇದನ್ನು ಸೇರಿಸಿಕೊಳ್ಳುವುದು. ಉದಾ: ಮಕ್ಕಳ್, ನಾಟ್ಕಳ್, ಕೋಟ್ಕಳ್, ಪಂಡಿತರ್ಕಳ್, ಸುತರ್ಕಳ್, ವಿಚಾರಪರರ್ಕಳ್, ತಾಯ್ವಿರ್ಕಳ್- ಎಂಬಿವು 'ಕಳ್' ಸೇರಿರುವ ಶಬ್ದಗಳು. ತಾಯ್ವಿರ್ ಮತ್ತು ತಾಯ್ವಿರ್ಕಳ್ -ಎಂಬ ಪ್ರಯೋಗಗಳಲ್ಲಿ 'ವಿರ್' ಹಾಗೂ 'ಕಳ್' ಎಂಬ ಎರಡೂ ಪ್ರತ್ಯಯಗಳು ಕಾಣಿಸಿಕೊಂಡಿವೆ.

'ಸಂಖ್ಯಾಯಾಂ ವಃ' ಎಂದು ಸೂತ್ರ ೪೪ರಲ್ಲಿ ಹೇಳಿರುವುರಿಂದ ಸಂಖ್ಯೆಯಲ್ಲಿ 'ಅರ್' ಪ್ರತ್ಯಯ ಪರವಾದರೆ, ನಡುವೆ ವಕಾರಾಗಮವಾಗುವುದುಂಟು. ಉದಾ: ಒರ್ವರ್. ಒಂದು ಎಂಬುದರ ಆದೇಶ ಒರ್. ಕಾರಣ ಒರ್ + ಅರ್ > ಒಂದು + ಅರ್ = ಒರ್ವರು. ಹಾಗೆಯೇ ಇರ್ವರ್ : ಎರಡು-ಇರ್ + ಅರ್; ಮೂವರು: ಮೂರು: ಮೂ + ಅರ್; ನಾಲ್ವರ್, ಅಯ್ವರ್, ಅರುವರ್ ಎಂಬಂತೆ ತಿಳಿಯುವುದು. ನಾಲ್ಕು, ಐದು, ಆರು-ಇವುಗಳಿಗೆ ನಾಲ್, ಐ, ಅರುಗಳು ಆದೇಶವಾಗಿವೆ; ಅರ್ ಪರವಾದಾಗ ಮಧ್ಯದಲ್ಲಿ ವಕಾರ ಬಂದಿದೆ.

ಮುಂದಿನ ಸೂತ್ರ ೪೭, ೪೮, ೪೯ಗಳಲ್ಲಿ ಗುಣವಚನ, ಸರ್ವನಾಮಗಳನ್ನು ಕುರಿತು ಹೇಳುತ್ತಾ ಅವುಗಳಿಗೆ ಬಹುವಚನ ಪ್ರತ್ಯಯ 'ಅವು' ಮತ್ತು 'ಗಳು' ಹತ್ತುವುವರ ಬಗ್ಗೆ ತಿಳಿಸಲಾಗಿದೆ.

"ಗುಣೋಕ್ತೇರ ವಾವು ಗಾಂತ್ಯಾ ವಧೇಃ" (ಸೂತ್ರ ೪೭) ಎಂಬಲ್ಲಿ ಗುಣವಚನಗಳಿಗೆ ಅವು ಹತ್ತಿದಾಗ 'ತು' ಮತ್ತು 'ದು'ಗಳು ಲೋಪವಾಗುವುವು. ತು, ದು ಗಳಿಂದ ಕೊನೆಗೊಳ್ಳುವ ಪದಗಳು ಸಾಮಾನ್ಯವಾಗಿ ಗುಣವಚನಗಳಾಗಿರುತ್ತವೆ. ಕರಿದು, ಪಿರಿದು ಇನಿದು, ಅನಿತು, ಇನಿತು, ಎನಿತು ಎಂಬಿವು ಗುಣವಚನಗಳು.

ಕರಿದು + ಅವು = ಕರಿಯವು ಎಂಬಲ್ಲಿ 'ದು' ಲೋಪವಾಗಿ ಯ ಕಾರ ಆಗಮವಾಗಿದೆ. ವಿಭಕ್ತಿ ಪ್ರತ್ಯಯಹತ್ತಿದಾಗ ಕರಿಯವಂ, ಕರಿಯವರಿಂ, ಕರಿಯವರ್ಕೆ, ಕರಿಯವರತ್ತಣಿಂ, ಕರಿಯವರ, ಕರಿಯವರೊಳ್ ಎಂದಾಗುವುವು. ಅಂತೆ ಪಿರಿಯವು, ಅಸಿಯವು -ಈ ಮೊದಲಾದ ಗುಣವಚನಗಳ ಬಗ್ಗೆ ತಿಳಿಯಬಹುದು.

'ಸರ್ವನಾಮ್ನಸ್ತದಾದೇರಪಿ' (ಸೂತ್ರ ೪೮) ಎಂಬಲ್ಲಿ ಸರ್ವನಾಮಗಳಿಗೆ 'ಅವು' ಪರವಾದರೆ, 'ಅವು' ಎಂಬುದರ ಆದಿಗೆ (ಅಕಾರ) ಲೋಪ ಬರುವುದು. ಅದು, ಇದು, ಉದು ಎಂಬಿವು ಏಕವಚನದ ಸರ್ವನಾಮ ಪದಗಳು. ಇವುಗಳಿಗೆ ಬಹುವಚನ ಪ್ರತ್ಯಯಗಳು ಪರವಾದರೆ 'ಅವು'ವಿನ ಆದಿಗೆ ಲೋಪ. ಮೊದಲು ಅದು, ಇದು, ಉದು ಗಳಲ್ಲಿರುವ 'ದು' ಗೆ ಲೋಪವಾಗಿ 'ಅವು' ವಿನ 'ಅ' ಗೆ ಲೋಪವಾಗಿ ಅವು, ಇವು, ಉವು ಎಂಬ ರೂಪಗಳು ಬರುತ್ತವೆ. ಇವುಗಳಿಗೆ ವಿವಿಧ ವಿಭಕ್ತಿ ಪ್ರತ್ಯಯಗಳು ಬರುತ್ತವೆ. ಈ ಸಂರ್ಭದಲ್ಲಿ ಕೇಶಿರಾಜ

ಅದುವಿದುವುದುವೆಂಬವಜಿಂ
ತ್ಯದುಕಾರಕ್ಕೊದವುಗುಂ ವಕಾರಂ ಪುಲ್ಲಿಂ
ಗದೊಳಲ್ಲಿ ತಕಾರಂ ಮೇ
ಣೊದವಿರೆ ಚೆಚ್ಚರದೆ ಬರ್ಕುಮಾದಿಗೆ ದೀರ್ಘಂ॥ (ಸೂತ್ರ ೧೬೧)

ಎಂದು ಹೇಳಿ ದು ಕಾರಕ್ಕೆ ವಕಾರ ಪುಲ್ಲಿಂಗದಲ್ಲಿ ಬರುವುದಾಗಿ ಹೇಳಿದ್ದಾನೆ. "ಅದಂತಾನ್ನಾಗಮಃ ಪೂರ್ವಸ್ಮಿನ್‌ಗಳ್" ಎಂದು ಸೂತ್ರ ೪೯ರಲ್ಲಿ ತಿಳಿಸಿದೆ. ಅಕಾರಾಂತ ಪದಗಳಿಗೆ ದ್ವಿವಚನ ಹಾಗೂ ಬಹುವಚನ ಪ್ರತ್ಯಯ 'ಗಳ್' ಪರವಾದರೆ ಪ್ರಕೃತಿಯ ಪರದಲ್ಲಿ ನಕಾರಾಗಮವಾಗುವುದುಂಟು. ಉದಾ: ಗಜ + ಗಳ್ = ಗಜಂಗಳ್ ಅಂತೆ ಉಳಿದ ಉದಾಹರಣೆಗಳಾದ ಹಯಂಗಳ್, ಮರಂಗಳ್-ಇತ್ಯಾದಿ.

**ಅಗಮಗಳು:**

"ಉದಂತಾತ್ತೃತೀಯಾದಿಷ್ವಿನಾಗಮೋ ಬಹುಳಂ" (ಸೂತ್ರ ೫೪) ಎಂದು ನಾಗವರ್ಮ ಇನಾಗಮದ ಬಗ್ಗೆ ತಿಳಿಸಿರುತ್ತಾನೆ. ಉಕಾರಾಂತವಾದ ಲಿಂಗಗಳಿಗೆ

ತೃತೀಯಾದಿ ವಿಭಕ್ತಿಗಳು ಪರವಾಗಲು ವಿಕಲ್ಪದಿಂದ ಇನಾಗಮವು ಪ್ರಾಪ್ತಿಸುವುದು. ಉದಾ: ಗುರುವಿನಿಂ, ನೀತಿಜ್ಞಿಂ - ಎಂಬಲ್ಲಿ ಗುರುವು + ಇನ + ಅಂ = ಗುರುವಿನಿಂ ಎಂದಾಯಿತು. ಅಂತೆ ಮನುವಿನಿಂ ವಿಕಲ್ಪವಾದುದರಿಂದ ಗುರುವ, ಮನುವ ಎಂದು ತಿಳಿಯುವುದು. ಇನಾಗಮಕ್ಕೆ ಮನುವಿನೊಳ್, ಗುರುವಿನೊಳ್ ಮಡುವಿನೊಳ್ ಎಂಬ ಪ್ರಯೋಗಗಳು ಉಂಟು. "ಅಱು ಕಾರಸ್ಯ ಸಂಖ್ಯಾಸರ್ವನಾಮ ಗುಣವಚನೇಷು" (ಸೂತ್ರ ೫೫) ಎಂದಿರುವುದರಿಂದ ಸಂಖ್ಯೆ, ಸರ್ವನಾಮ, ಗುಣವಚನಗಳ ಕಡೆಯಲ್ಲಿರುವ ಉಕಾರತಸ್ಯ ಎಂದರೆ ಉಕಾರಕ್ಕೆ ತೃತೀಯಾದಿ ವಿಭಕ್ತಿಗಳು ಪರವಾಗಲು ಅಲ್ಲಿ 'ಅಱು' ಆದೇಶವಾಗುವುದು. ಉದಾ: ಒಂದಱಿಂ, ಎರಡಱಿಂ, ಮೂವಱಿಂ ಇನಾಗಮದಂತೆ ಅಱ್ ಆಗಮವಾಗಿದೆ.

"ದಿಗ್ವಾಚಿ ಭ್ಯೋಽಣಿ" ಎಂಬ ಸೂತ್ರ ೫೬ರ ಪ್ರಕಾರ ದಿಕ್‌ಸೂಚಿ ಲಿಂಗಗಳಿಗೆ ತೃತೀಯಾದಿ ವಿಭಕ್ತಿಗಳು ಪರವಾಗಲು 'ಅಣ್' ಪ್ರತ್ಯಯ ಪ್ರಾಪ್ತಿಸುವುದು. ಉದಾ: ಮೂಡಣಿಂ ಮೂಡಣ್ಗೆ -ಇತ್ಯಾದಿ. ಮೂಡಣ, ಪಡುವಣ, ಬಡಗಣ, ತೆಂಕಣಗಳು ದಿಕ್ ಸೂಚಿ ಶಬ್ದಗಳು. ತೃತೀಯಾದಿ ವಿಭಕ್ತಿಗಳು ಪರವಾಗಿ ಮೇಲಿನ ರೂಪ ಪಡೆದಿವೆ. "ವಾಲತ: ಪ್ರಥಮಾ ದ್ವಿತೀಯಾಯೋಃ" (ಸೂತ್ರ ೫೭) ಎಂಬಲ್ಲಿ ಅಕಾರಾಂತ ದಿಕ್ ಸೂಚಿಗಳಿಗೆ ಪರವಾದ ಪ್ರಥಮಾ, ದ್ವಿತೀಯಾ, ವಿಭಕ್ತಿಗಳಿಗೆ ವಿಕಲ್ಪದಿಂದ 'ಅಲ್' ಪ್ರತ್ಯಯ ಬರುವುದು. ಉದಾ: ಮೂಡಲ್, ತೆಂಕಲ್, ಪಡುವಲ್, ಬಡಗಲ್ ಇತ್ಯಾದಿ. ದಿಕ್‌ಸೂಚಿ ಅತ್ತ, ಇತ್ತ ಎಂಬ ಶಬ್ದಗಳಿಗೆ ಪ್ರಥಮಾ, ದ್ವಿತೀಯಾ ವಿಭಕ್ತಿಗಳು ಪರವಾಗಲು 'ಅಲ್' ಪ್ರಾಪ್ತಿಸಿ, ಅತ್ತಲ್, ಇತ್ತಲ್ -ಎಂದಾಗುತ್ತವೆ. "ಸಪ್ತಮ್ಯಾಂಚ" -ಎಂದು ಸೂತ್ರ ೫೮ರಲ್ಲಿ ಹೇಳಿದುದರಿಂದ ಅಕಾರಾಂತ ದಿಕ್ ಸೂಚಿ ಶಬ್ದಗಳಿಗೆ ಪರವಾದ ಸಪ್ತಮಿ ವಿಭಕ್ತಿಗೆ ವಿಕಲ್ಪವಾಗಿ 'ಅಲ್' ಪ್ರತ್ಯಯ ಬರುತ್ತದೆ. ಉದಾ: ಮೂಡಲಿರ್ದಂ, ಮೂಡಿರ್ದಂ, ಅಂತೆ ತೆಂಕಲಿರ್ದಂ, ಅತ್ತಲಿರ್ದಂ, ಇತ್ತಲಿರ್ದಂ ಈ ಮೊದಲಾದುವು ವಿಕಲ್ಪದಿಂದ ತೆಂತಿರ್ದಂ, ಇತ್ತಲಿರ್ದಂ-ಮುಂತಾದ ರೂಪಗಳನ್ನು ಪಡೆಯುತ್ತವೆ. 'ಉತ ಏತ್' ಎಂಬ ೫೯ನೆಯ ಸೂತ್ರದಂತೆ ದಿಕ್ಕನ್ನು ಸೂಚಿಸುವ ಶಬ್ದಗಳು, ಕಡೆಗೆ ಉಕಾರವನ್ನು ಪಡೆದಿದ್ದಲ್ಲಿ ಅವುಗಳಿಗೆ ಸಪ್ತಮಿ ಪರವಾಗಲು ಎಕಾರವು ಬರುತ್ತದೆ.

ಮೇಗು, ಕೆಳಗು, ಒಳಗು, ಬೆಳಗು, ಪೊರಗು- ಎಂಬ ಉಕಾರಾಂತ ಶಬ್ದಗಳಿಗೆ ಸಪ್ತಮಿ ವಿಭಕ್ತಿ ಪರವಾದರೆ ಎಕಾರ ಬರುತ್ತದೆ. ಉದಾ: ಮೇಗು > ಮೇಗೆ; ಕೆಳಗು > ಕೆಳಗೆ; ಇತ್ಯಾದಿ.

ಹೀಗೆ ಕ. ಭಾ.ಭೂ.ದ ಸೂತ್ರ ೫೪, ೫೫, ೫೬, ೫೭, ೫೮, ೫೯, ೬೦-ಇವು ಇನಾಗಮ, ಅಜಾಗಮ, ಅಣ್ ಆಗಮ, ಅಲ್ ಆಗಮಗಳನ್ನು ಹೇಳಿವೆ. ಇಲ್ಲಿಗೆ 'ವಿಭಕ್ತಿ ವಿಧಾನಂ' ಎಂಬ ಪರಿಚ್ಛೇದವು ಮುಕ್ತಾಯವಾಗುತ್ತದೆ. ನಾಗವರ್ಮನ 'ವಿಭಕ್ತಿ ವಿಧಾನಂ' ವಿಸ್ತೃತವಾದುದು. ಅದು ಕೇವಲ ವಿಭಕ್ತಿ ಪ್ರತ್ಯಯಗಳಿಗೆ ಸೀಮಿತವಾಗಿಲ್ಲ. ಅವುಗಳ ಹಿನ್ನೆಲೆಯಲ್ಲಿ ವಚನ ಪ್ರತ್ಯಯಗಳ ಪರಿಚಯವನ್ನು ಮಾಡುತ್ತದೆ. ಅಲ್ಲದೆ ಸಂಖ್ಯಾ, ಗುಣವಚನ, ಸರ್ವನಾಮ- ಇವುಗಳ ಮೇಲೂ ಬೆಳಕನ್ನು ಚೆಲ್ಲುತ್ತದೆ. ವಿವಿಧ ಆಗಮಗಳಾದ ಇನಾಗಮ, ಅಜಾಗಮ, ಅಣ್ ಆಗಮ ಇತ್ಯಾದಿಗಳನ್ನು ಕೂಡ ಸೇರಿಸಿಕೊಂಡಿದೆ.

## ತೆಲುಗು ವಿಭಕ್ತಿ ಪ್ರತ್ಯಯಗಳು

ಕೇತನ ಮೊದಲು ತೆಲುಗು ಭಾಷೆಯ ಎಂಟು ವಿಭಕ್ತಿಗಳನ್ನು ನಿರೂಪಿಸುವುದಾಗಿ ಹೇಳುತ್ತಾ ಕೆಳಗಿನಂತೆ ಬರೆದಿದ್ದಾನೆ:

"...... ವಿಭಕ್ತುಲು ಚೆಪ್ಪೆದಂ ಪ್ರಥಮಯು ದ್ವಿತೀಯಯು ದೃತೀಯಯು, ಚತುರ್ಥಿಯು, ಪಂಚಮಿಯು, ಷಷ್ಠಿಯು, ಸಪ್ತಮಿಯು, ಸಂಬೋಧನಂಬುನನ ನೆನಿಮಿದಿತೆಱಂಗುಲ ವಿಭಜಿಂಪ ಬಡುಟಂ ಜೇಸಿ ವಿಭಕ್ತುಲನಂಬರಗೆ...." (ವಚನ ೬೮). ಮೇಲಿನ ಗದ್ಯಭಾಗದ ಪ್ರಕಾರ "ವಿಭಕ್ತಿಗಳನ್ನು ಕುರಿತು ಹೇಳುತ್ತೇನೆ- ಪ್ರಥಮ ದ್ವಿತೀಯಾ ತೃತೀಯಾ ಚತುರ್ಥಿ ಪಂಚಮಿ ಷಷ್ಠಿ ಸಪ್ತಮಿ ಸಂಬೋಧನೆ" -ಎಂದು ವಿಭಕ್ತಿಗಳು ಎಂಟು ವಿಧವಾಗಿ ವಿಂಗಡಿಸಿರುವುದರಿಂದ ಅವು ವಿಭಕ್ತಿಗಳಾಗಿರುವುವು.

ಇಲ್ಲಿ ಕೇತನ 'ವಿಭಕ್ತಿ' ಎಂಬುದಕ್ಕೆ ಹೇಳಿದ ಅರ್ಥ ಗಮನಾರ್ಹ. ಪ್ರಥಮೆಯಿಂದ ಸಂಬೋಧನೆಯವರೆಗಿನ ಎಂಟು ವಿಭಕ್ತಿಗಳಾಗಿ ವಿಭಾಗಿಸಿರುವುದರಿಂದಲೇ 'ವಿಭಕ್ತಿ' ಎಂಬ ಹೆಸರು ಬಂದಿದೆಯಂತೆ. ಇದಾದ ಮೇಲೆ ಒಂದೊಂದು ವಿಭಕ್ತಿ ಯಾವ ಅರ್ಥದಲ್ಲಿ ಬರುತ್ತದೆ ಎಂಬುದನ್ನು ಹೇಳಿ ವಿಭಕ್ತಿಯನ್ನು ಕಾರಕದ ಬೆಳಕಿನಲ್ಲಿ ವಿವರಿಸಿರುವುದು ಕೂಡ ಗಮನಾರ್ಹ. "ಮಾಡುವವನು ಪ್ರಥಮೆ, ಮಾಡಲ್ಪಟ್ಟದ್ದು ದ್ವಿತೀಯೆ, ಉಪಕರಣ ತೃತೀಯೆ, ಮಾಡಿಸಿಕೊಳ್ಳುವವನು ಚತುರ್ಥಿ, ಬಿಡಲು ಸ್ಥಾನವಾದುದು ಪಂಚಮಿ, ಒಡೆಯ ಷಷ್ಠಿ, ಅಸ್ತಿತ್ವದ ಸ್ಥಾನ ಸಪ್ತಮಿ, ಸಮುಖ ಮಾಡುವುದು ಸಂಬೋಧನೆ.

ಅನಂತರ ಕೇತನ ಕರ್ಣಾಟಕ ಭಾಷಾ ಭೂಷಣದಲ್ಲಿರುವಂತೆಯೇ ಏಕವಚನ, ಬಹುವಚನಗಳನ್ನು ಹೇಳತೊಡಗಿದ. ಇದು ಸವಿವರವಾಗಿದೆ.

ಪದ್ಯ ೬೯ರ ಪ್ರಕಾರ ಕೇತನ ನಿರೂಪಿಸಿದ ವಿಭಕ್ತಿ ಪ್ರತ್ಯಯಗಳು ಹೀಗಿವೆ:

೧. ಪ್ರಥಮಾ : ಡು, ಮು, ವು, ಲು (ಉ. ರು)

೨. ದ್ವಿತೀಯಾ : ನಿ,ನ (ಅನ್ನು, ನ)

೩. ತೃತೀಯಾ: ಚೇತ, ನ (ಇಂದ)

೪. ಚತುರ್ಥಿ : ಕು, ಕಿ (ಗೆ, ಕ್ಕೆ)

೫. ಪಂಚಮಿ : ವಲನ (ಕಡೆ, ದೆಸೆಯಿಂದ)

೬. ಷಷ್ಠಿ : ಉ, ಅ (ಅ)

೭. ಸಪ್ತಮಿ : ಅಂದು (ಅಲ್ಲಿ, ಒಳಗೆ)

ಈ ಸಪ್ತ ವಿಭಕ್ತಿ ಪ್ರತ್ಯಯಗಳಿಗೆ ಅವನು ಪದ್ಯ ೬೯, ೭೦ಗಳಲ್ಲಿ ಉದಾಹರಣೆ ಕೊಟ್ಟಿದ್ದಾನೆ. ಸುತುಡು (ಪ್ರ); ಸುತುನಿ (ದ್ವಿ), ಸುತುಚೇತನ್ (ತೃ), ಸುತುನಕು (ಚ) ಇತ್ಯಾದಿ. ಪ್ರ.ವಿ. 'ಮು' ಎಂಬುದರ ಪ್ರಾಚೀನ ರೂಪ 'ಲು' ಎಂಬುದೇ ಆಗಿದೆ. ಅದು ೩ನೆಯ ಶತಮಾನದಲ್ಲಿ' 'ಮ್ಬು' 'ಂಬು' ಎಂಬ ರೂಪವನ್ನು ತಾಳಿತ್ತು. ೯, ೧೦ನೆಯ ಶತಮಾನದಲ್ಲಿ 'ಮು' ಎಂಬ ರೂಪವೂ ಇತ್ತು. ಅನಂತರದಲ್ಲಿ ಇದು 'ಮ್ಮು' ಎಂಬ ದ್ವಿತ್ವವನ್ನು ಪಡೆಯಿತು. ಮತ್ತೆ ಸ್ವಲ್ಪ ಕಾಲದಲ್ಲಿ 'ಮ್ಮು' ದ್ವಿತ್ವ ಕಳೆದುಕೊಂಡು ಕೇವಲ 'ಮು' ಎಂಬ ರೂಪ ಪಡೆಯಿತು. ಅಂತೆಯೇ 'ವು' ಎಂಬುದು ಪ್ರಾಚೀನ ರೂಪ. ಹೀಗೆ ಡು, ಮು ವುಗಳು ಪ್ರಥಮಾ ವಿಭಕ್ತಿ ಪ್ರತ್ಯಯದ ಏಕವಚನವಾದರೆ ಅವುಗಳಿಗೆ 'ಲು' ಎಂಬುದು ಬಹುವಚನ. ಪ್ರಥಮೈಕ ವಚನದಲ್ಲಿ ಡು, ಮು, ವು ಬರುವುದನ್ನು ತತ್ಸಮ ಪದ ನಿರೂಪಣೆಯಲ್ಲಿ ಕೇತನ ಸವಿಸ್ತರವಾಗಿ ಹೇಳಿದ್ದಾನೆ (ಪ.೩೫ ಮತ್ತು ೪೦). "ಉಕಾರಾಂತಗಳಿಗೆ" 'ವು' ಬರುವುದು ಶಬ್ದಗಳಿಗೆ 'ಮು' ಬರುವುದು ಪುರುಷವಾಚಿಯಲ್ಲಿ 'ಡು' ಬರುವುದು.

ತರುವು ತನುವು ಧನ ಮರ್ಥಮು
ಗುರುಡು ಪುರುಷುಡುತ್ತಮುಂಡು ಗುಣವಂತುಡು ಸು
ಸ್ಥಿರಮತಿಮಂತುಡು ಯಶಮುನ
ನರುದುಗ ಹನುಮಂತುಡನ ನುದಾಹರಣಂಬುಲ್॥ (ಪ.೩೭)

ಮುಕಾರಕ್ಕೆ ದ್ವಿತ್ವ, ಬಿಂದು ಪೂರ್ವಕ 'ಬು' ಕಾರ ಬರುವುವು (ಉದಾ. ಖಗಮು ಖಗಮ್ಮು, ಖಗಂಬು). 'ಋ' ಅಂತ್ಯದಲ್ಲಿರುವ ಪದಗಳಲ್ಲಿ 'ಡು' ಬರುವುದಿಲ್ಲ. ಋ ಕಾರ ಲೋಪವಾಗುವುದು. (ಹೋತ, ಧಾತ, ನೇತ, ದಾತ). ಇಲ್ಲಿ ಕನ್ನಡಕ್ಕೆ ತೆಲುಗಿಗೆ

ವ್ಯತ್ಯಾಸವಿದೆ ಎಂಬುವನ್ನು ಗಮನಿಸಬೇಕು. ಆದರೆ ಭಾಷಾ ವಿಜ್ಞಾನದ ಬೆಳಕಿನಲ್ಲಿ ನೋಡಿದಾಗ "ತೆಲುಗು ಭಾಷೆಯಲ್ಲಿ ಪ್ರಾತಿಪದಿಕಗಳೇ ಸಾಮಾನ್ಯವಾಗಿ ಪ್ರಥಮೈಕವಚನ ರೂಪದಲ್ಲಿ ಇರುತ್ತವೆ."[೧೪]

**ದ್ವಿತೀಯಾ ವಿಭಕ್ತಿ:**

ಕೇತನನು ನಿರೂಪಿಸಿದ ದ್ವಿ.ವಿ.ಪ್ರ. 'ನಿ' ಮತ್ತು 'ನ' ವಾಗಿದೆ. ಆದರೆ ನನ್ನಯನಲ್ಲಿ ಅದು 'ನ್' ಅಥವಾ 'ಗುರಿಂಚಿ' ಎಂದೇ ಇದೆ. ಪ್ರಾಚೀನ ಶಾಸನಗಳಲ್ಲಿ 'ನಿ' ಎಂಬುದೊಂದೆ ಬಳಕೆಯಾಗಿದೆ. 'ಸುತು' ಅಥವಾ 'ಸುತುನಿ' ಎಂಬುದು ಕೇತನ ದ್ವಿ.ವಿ.ಪ್ರ.ಕ್ಕೆ ಕೊಟ್ಟ ಉದಾಹರಣೆ. 'ಸುತುಲ' ಎಂಬುದು ಬಹುವಚನ ಪ್ರತ್ಯಯದ ಪದ. ಉಕಾರಾಂತ ಪದಗಳಿಗೆ ಅದು ಲೋಪ. ಉದಾ: ವೃಕ್ಷಮು (ನ್) ವೃಕ್ಷವನ್ನು. ಅಕಾರಾಂತ ಪದಗಳಲ್ಲಿ ಲೋಪ. ಉದಾ. ತಲ (ನ್) ತಲೆಯನ್ನು. ಇಕಾರಾಂತ ಪದಗಳಿಗೆ 'ನ್' ಪ್ರತ್ಯಯ ಹತ್ತುವುದುಂಟು. ಉದಾ: ಕರಿನ್ (ಕರಿಯನ್ನು). ಈ ದೃಷ್ಟಿಯಿಂದ ದ್ವಿ. ವಿ.ಪ್ರ.ವು.ನಿ,ನು,ನ್- ಎಂಬ ಮೂರು ರೂಪವನ್ನು ಪಡೆದಿರುತ್ತದೆ ಎಂಬುದು ಗಮನಾರ್ಹ.

**ತೃತೀಯಾ ವಿಭಕ್ತಿ:**

ಚೇತ, ನ- ಎಂಬಿವುಗಳು ತೃ.ವಿ.ಪ್ರ.ಗಳು. ಕೇತನನು ಇದಕ್ಕೆ 'ಸುತು ಚೇತನ್' ಎಂದು ಉದಾಹರಿಸಿದ್ದಾನೆ. 'ಸುತುಚೇತನ್' ಎಂದರೆ ಸುತು (ನಿ) ಚೇತನ್ ಎಂದೇ ಅರ್ಥ. ಪ್ರಾಚೀನ ಶಾಸನಗಳಲ್ಲಿ ಅದು ತೋಡ, ತೋನ ಎಂದು ಬಳಕೆಯಾಗಿದೆ. ನನ್ನಯನಲ್ಲಿ 'ನ್' ಮತ್ತು ಗುರಿಂಚಿ- ಎಂದು ಪ್ರಯೋಗವುಂಟು. ಉದಾ. ಸುತುಚೇತನ್. ಸುತನಿಂದ ಎಂಬ ಕೇತನನ ಉದಾಹರಣೆ ಸುತುನಿತೋಡ, ಸುತುನಿಗುರಿಂಚಿ ಎಂಬ ಉದಾಹರಣೆಗಳಿಗೆ ಸಂವಾದಿಯಾಗಿದೆ. ಕೇತನ 'ನಿ' ಎಂಬ ವರ್ಣಕ್ಕೆ ಲೋಪಮಾಡಿದ್ದಾನೆ. ಸುತುನಿಚೇತನ್, ಸುತುನಿ ತೋಡ, ಸುತುನಿಗುರಿಂಚಿ ಈ ಎಲ್ಲ ಪ್ರಯೋಗಗಳು ತೃತೀಯಾರ್ಥವನ್ನೇ ಹೇಳುತ್ತವೆ. ಕನ್ನಡದಲ್ಲಿ ಇಂದ, ಗೋಸ್ಕರ ಇದ್ದಂತೆ. ಕರಿಚೇತನ್, ಸುತುಚೇತನ್ ಎಂಬ 'ಇ' ಮತ್ತು 'ಉ' ಕಾರಾಂತ ಶಬ್ದಗಳಿಗೆ ದ್ವಿ.ವಿ.ಪ್ರ. 'ನಿ' ಆದರೆ ಮುಕಾರಾಂತದಲ್ಲಿ ಮಾತ್ರ ವ್ಯತ್ಯಾಸ. 'ವೃಕ್ಷಮುನ' ಎಂದೇ ಅಲ್ಲಿ ಬಳಕೆ. ತೃತೀಯಾ ವಿಭಕ್ತಿ ಪಂಚಮಿಯ ಕೆಲಸವನ್ನು ನಿರ್ವಹಿಸುತ್ತದೆ. ಚೇತನ್, (ಇಂದ) ಎಂಬುದೇ ತೃ, ವಿ.ಪ್ರ. ಹೆಚ್ಚಿಗೆ ಬಳಕೆಯಾಗುವುದು.

**ಚತುರ್ಥಿ ವಿಭಕ್ತಿ:**

ಕೇತನ ನಿರೂಪಿಸಿದ ಚ.ವಿ. ಪ್ರ. ಕು ಮತ್ತು 'ಕಿ' ಎಂಬುವು. ನನ್ನಯ ಭಾರತದಲ್ಲಿ 'ಕೈ' ಮತ್ತು 'ಪೊಂಟೆನ್' ಎಂದು ಬಳಕೆಯಾಗಿವೆ. ಪ್ರಾಚೀನ ಶಾಸನಗಳಲ್ಲಿ ಕೈ, ಕಿ,ಕು-

ಎಂಬ ರೂಪಗಳು ದೊರೆಯುತ್ತವೆ. 'ಸುತುನಕುನಿಚ್ಚೆ''- ಇದು ಕೇತನನ ಪ್ರಯೋಗ. ಸುತುನಕುನ್, ಸುತುನಿಕಿನಿ-ಎಂಬ ಪ್ರಯೋಗಗಳೂ ಉಂಟು. ವೃಕ್ಷಮುನಕುನ್, ತಲಕುನ್, ಕರಿಕಿನ್- ಇತ್ಯಾದಿ ಇನ್ನುಳಿದ ಪ್ರಯೋಗಗಳು. ಕೇತನ ಚತುರ್ಥಿಗೆ 'ಕುನ್' 'ಕಿನ್' ಕೊಟ್ಟ ಉದಾಹರಣೆಗಳು ಚಿಂತಾಮಣಿಗೆ ಭಿನ್ನವಾಗಿವೆ. ಚಿಂತಾಮಣಿಯಲ್ಲಿ 'ಕೈ, ಕೊಱಕು ಚತುರ್ಥ್ಯಾ (ಆ.ಶ.ಚಿಂ.ಸೂತ್ರ ೬) ಎಂದು ಚತುರ್ಥಿಗೆ ಕೈ ಮತ್ತು ಕೊಱಕು ಎಂಬುವನ್ನು ಹೇಳಿದ್ದಲ್ಲದೆ ಕೇತನ ಚತುರ್ಥಿಗೆ ಕೊಟ್ಟಿರುವ ಕಿ, ಕುಗಳನ್ನು ಷಷ್ಠಿಯಲ್ಲಿ ಸ್ವೀಕರಿಸಿದ್ದಾನೆ. ಒಟ್ಟು ಚ.ವಿ.ಪ್ರ.ಗಳು ಕಿ, ಕು,ಕೈ, ಕೊಱಕು ಎಂಬ ರೂಪಗಳೇ ಆಗಿವೆ. ಕನ್ನಡದ ಗೆ, ೦ಗೆ, ಕೆ, ಕ್ಕೆಗಳಿಗೆ ಅವು ಸಂವಾದಿಯಾಗಿವೆ. ನನ್ನಯನಲ್ಲಿ 'ಪೊಂಟೆನ್' ಎಂಬ ಪ್ರಯೋಗ ವಿಶೇಷವೆನ್ನಬಹುದು.

**ಪಂಚಮೀ ವಿಭಕ್ತಿ :** 'ವಲನ್' ಎಂಬುದು ಪಂ.ವಿ.ಪ್ರ. ಕೇತನ 'ಸುತುನಿವಲನನ್' ಎಂದು ಹೇಳಿರುವನು. ನನ್ನಯ ಭಾರತದಲ್ಲಿ 'ವಲನ' ಎಂಬುದರ ಜೊತೆಗೆ 'ಕಂಟೆ' 'ಕೊಂಟೆನ್'- ಎಂಬ ರೂಪಗಳೂ ದೊರೆಯುತ್ತವೆ. ಪ್ರಾಚೀನ ಶಾಸನಗಳಲ್ಲಿ 'ವಲನ' ಮತ್ತು 'ಉಣ್ಡಿ'- ಎಂಬ ಪ್ರಯೋಗಗಳಿವೆ. ಒಟ್ಟಾರೆ ಪಂಚಮಿಯ 'ವಲನ' ಎಂಬುದು ಎಲ್ಲ ವೈಯಾಕರಣರ ದೃಷ್ಟಿಯಲ್ಲಿ ಸಮವಾಗಿಯೇ ಬಳಕೆಯಾಗಿದೆ. 'ವಲನ ಎಂದರೆ 'ಇಂದ' ಎಂದರ್ಥ. ದಾನಿವಲನ ಎಂದರೆ 'ಅದರಿಂದ' ಎಂದು ಅರ್ಥ. ಕನ್ನಡದ ಪಂಚಮಿ 'ದೆಸೆ' ಮತ್ತು 'ಕಡೆ'ಯಿಂದ ಎಂಬ ಅರ್ಥದಲ್ಲಿಯೇ ಬಳಕೆಯಾಗಿವೆ. ವಸ್ತುತ: 'ಇಂದ' ತೃತೀಯಾ ವಿಭಕ್ತಿಯಾಗಿರುತ್ತದೆ.

**ಷಷ್ಠೀವಿಭಕ್ತಿ:**

'ಉ' ಮತ್ತು 'ಅ' ಷಷ್ಠಿಯ ಪ್ರತ್ಯಯಗಳಾಗಿದ್ದು, ಅವು ಸಂಬಂಧಾರ್ಥದಲ್ಲಿ ಬಳಕೆಯಾಗುತ್ತವೆ. 'ಸುತುಲ-ಧನಮು' ಎಂಬುದು ಕೇತನನ ಪ್ರಯೋಗ. ಇದರ ಅರ್ಥ ಮಕ್ಕಳ ಸಂಪತ್ತು. ಮಕ್ಕಳಿಗೂ, ಸಂಪತ್ತಿಗೂ ಇರುವ ಸಂಬಂಧವನ್ನು 'ಅ' ಸೂಚಿಸುತ್ತದೆ. ನನ್ನಯನ ಭಾರತದಲ್ಲಿ 'ಅ,ಇ,ನ'- ಈ ವರ್ಣಗಳು ಕಾಣಿಸಿಕೊಂಡಿವೆ. 'ಲೋನ್' ಮತ್ತು 'ಲೋಪಲ'- ಎಂಬಿವುಗಳು ಷಷ್ಠೀ ಪ್ರತ್ಯಯಗಳಾಗಿ ಪ್ರಾಚೀನ ಶಾಸನಗಳಲ್ಲಿ ಕಾಣಬರುತ್ತವೆ. ''ಕೇತನ ಷಷ್ಠೀ ವಿಭಕ್ತಿಗೆ ಉದಾಹರಣೆ ಕೊಟ್ಟಿರುವ ವಿಧಾನವನ್ನು ನೋಡಿದರೆ ಅವನು ಷಷ್ಠಿಗೆ ಪ್ರತ್ಯೇಕವಾಗಿ ವಿಭಕ್ತಿ ಪ್ರತ್ಯಯವಿಲ್ಲವೆಂದೇ ಅಭಿಪ್ರಾಯಪಟ್ಟಂತಿದೆ''.[೧೯] ಕೊಟ್ಟಿರುವ ಉದಾಹರಣೆಗಳಿಂದ 'ಉ' ಮತ್ತು 'ಅ' ಪ್ರತ್ಯಯಗಳೆಂದು ಹೇಳಬಹುದಾದರೂ ವಿಭಕ್ತಿ ಪ್ರತ್ಯಯ ಇಲ್ಲದ ರೂಪವು 'ಸುತುನಿ' 'ಸುತು' 'ಸುತುಲ'- ಆಗಿರುವುದರಿಂದ ಯಾವ ಪ್ರತ್ಯಯವೂ ಇಲ್ಲವೆಂದು ಹೇಳಬಹುದು. ತೆಲುಗಿನಲ್ಲಿ ಹೇಳಲಾದ 'ಅ' ಎಂಬುದು ಕನ್ನಡದಲ್ಲಿಯೂ ಷಷ್ಠೀ ಪ್ರತ್ಯಯವಾಗಿದೆ.

**ಸಪ್ತಮಿ ವಿಭಕ್ತಿ:**

'ಅಂದು' 'ನನ್' ಸಪ್ತಮೀ ವಿಭಕ್ತಿ ಪ್ರತ್ಯಯಗಳು. ಸುತುನಂದು (ಸುತನಲ್ಲಿ) ಸುತುನಿಯಂದು- ಎಂಬಿವು ಸಪ್ತಮಿಯ ಪ್ರಯೋಗಗಳು. ತಲಯಂದು, ಕರಿಯಂದು- ಎಂಬಿವು ಉಳಿದ ಉದಾಹರಣೆಗಳು. ವೃಕ್ಷಮುನನ್, ಎಂಬಲ್ಲಿ ಮಾತ್ರ ನನ್ ಎಂಬ ಪ್ರತ್ಯಯ ಬಂದಿದೆ. 'ಉನ್' 'ನ' ಎಂಬ ಪ್ರಯೋಗಗಳು ಪ್ರಾಚೀನ ಶಾಸನಗಳಲ್ಲಿ ದೊರೆಯುತ್ತವೆ. ಒಟ್ಟಿನಲ್ಲಿ ತೆಲುಗು ಸಪ್ತಮಿಗೆ 'ಅಂದು', 'ನನ್', 'ಉನ್' 'ನ್'- ಎಂಬ ರೂಪಗಳಿದ್ದಾಗಲೂ ಹೆಚ್ಚು ಬಳಕೆಯಾದದ್ದು 'ಅಂದು' ಎಂಬುದೊಂದೇ.

**ಸಂಬೋಧನೆ:**

ಕೇತನ ಸಪ್ತ ವಿಭಕ್ತಿ ಪ್ರತ್ಯಯಗಳನ್ನು ಹೇಳಿ, ಅನಂತರ ಸಂಬೋಧನೆಯನ್ನು ಹೇಳಿದ್ದಾನೆ. ಸಂಸ್ಕೃತದ ಪಾಣಿನಿ, ಕಾತಂತ್ರಗಳಲ್ಲಿ ಇದು ಕಾಣಬರುವುದಿಲ್ಲ. ನಾಗವರ್ಮ ಸಪ್ತ ವಿಧ ವಿಭಕ್ತಿಗಳನ್ನೇ ಪ್ರಧಾನವಾಗಿ ಹೇಳುತ್ತಾ 'ಮಮಿಂಕೆಯದದೊಳ್' ಎಂದಿರುವನು. ಕೇತನ "ಸಮುಖಂಬು ಸೇಯುನದಿ ಸಂಬೋಧನಂಬು" (ಸೂತ್ರ ೭೮) ಎಂದು ಸಂಬೋಧನೆಯ ಬಗ್ಗೆ ಹೇಳಿದ್ದಾನೆ. ನಾಗವರ್ಮ 'ಆಮಂತ್ರಣೀ' ಎಂದು ಕರೆಯುವಾಗ 'ಸಂಬೋಧನೆ' ಎಂದು ಮಾತ್ರ ಹೇಳಿದ್ದಾನೆ.

ಕೇತನ ಸಂಬೋಧನೆಯ ಬಗ್ಗೆ ಹೇಳುತ್ತಾ ಏಕವಚನದ ಕೊನೆಯಲ್ಲಿ ಇರುವ ಉತ್ವ ಅತ್ವವಾಗುವುದು. ಇತ್ವ, ಈತ್ವವಾಗುವುದು. ಬಹುವಚನದಲ್ಲಿ 'ಆರ' ಎಂಬುದು ಬರುವುದು. ಆಗ ಹ್ರಸ್ವ ದೀರ್ಘವಾಗುವುದು ಎಂದಿದ್ದಾನೆ. ಉದಾ:

ಸುತುಡು > ಸುತುಡ, ಸುತುಡಾ
ಸುದತಿ > ಸುದತಿ, ಸುದತೀ
ವಿಮಲತರ ಮತುಲು > ವಿಮಲತರ ಮತುಲಾರ,
ವಿಮಲತರಮತುಲಾರಾ
ಹಿತಕರುಲು > ಹಿತಕರುಲಾರ, ಹಿತಕರುಲಾರಾ

ತತ್ಸಮಗಳಲ್ಲಿ ಒಮ್ಮೊಮ್ಮೆ 'ಡ' ಕಾರ ಉಳಿಯುವುದು

ಉದಾ: ಓ ಪುರುಷೋತ್ತಮ, ಓ ಪುರುಷೋತ್ತಮುಡಾ
ವಿವಲಯಶಾ, ವಿಮಲಯಶುಡಾ

ಒಟ್ಟಿನಲ್ಲಿ ಕೇತನ ಪ್ರಥಮಾ ವಿಭಕ್ತಿಯ ಏಕವಚನ ಮತ್ತು ಬಹುವಚನಗಳನ್ನು ವಿಸ್ತೃತವಾಗಿ ನಿರೂಪಿಸಿದ ಅನಂತರ ಉಳಿದ ವಿಭಕ್ತಿಗಳನ್ನು ಏಳು ಪದ್ಯಗಳಲ್ಲಿ

ಹೇಳಿದ್ದಾನೆ. ಕೆಲವು ಕಡೆ ದ್ವಿತೀಯಾ ವಿಭಕ್ತಿಗೆ ಪ್ರಥಮಾ ವಿಭಕ್ತಿಯಾಗುವುದೆಂಬುದನ್ನು ೮೭ನೆಯ ಪದ್ಯದಲ್ಲಿ ಹೇಳಿದ್ದಾನೆ. ಉದಾ:

ರಾಜಂಗದಮುಲನು + ಊಡ್ಚೆ =ರಾಜಂಗದಮುಲೂಡ್ಚೆ (ರಾಜಪಟ್ಟಿಕಳಚಿದ) ಪತಿ ನೂತ್ನಂಗದಮುಲನು + ತಾಲ್ಚಿ - ಪತಿನೂತ್ನಂಗದಮುಲ ದಾಲ್ಚಿ (ರಾಜಪೊಸಬಟ್ಟೆ ಉಟ್ಟು) ಮೊದಲನೆಯ ಉದಾಹರಣೆಯಲ್ಲಿ ದ್ವಿತೀಯಾಗೆ ಪ್ರಥಮ ಬಂದಿದೆ. ಎರಡನೆಯದರಲ್ಲಿ ದ್ವಿತೀಯ ಇದೆ.

ಇದಾದ ಮೇಲೆ 'ಬೇಕಾದಾಗ ಚೇತ, ಕೈ, ವಲನ, ಯೊಕ್ಕ, ಅಂದು- ಎಂಬುವು ತೃತೀಯಾದಿಗಳಲ್ಲಿ ಬರುತ್ತವೆ' ಎಂದಿದ್ದಾನೆ (ಪ. ೮೩). ೮೯ ಮತ್ತು ೯೦ನೆಯ ಪದ್ಯಗಳಲ್ಲಿ ತತ್ಸಮ ಪದಾಂತಗಳಲ್ಲಿ ಸಪ್ತ ವಿಭಕ್ತಿಗಳನ್ನು ನಿರೂಪಿಸಲಾಗಿದೆ. ಅನಂತರ ಮುಕಾರಾಂತ ಪದಗಳಿಗೆ (ಮು ಜೊತೆಗೆಂಬು ಕೂಡ) ವಿಭಕ್ತಿ ಪ್ರತ್ಯಯಗಳು ಬರುವುದನ್ನು ಹೇಳಿದೆ. ಆಮೇಲೆ ಲಕಾರಾಂತ ಏಕವಚನ ಮತ್ತು ಬಹುವಚನ ಪದಗಳು 'ರಿ' ಕಾರಾಂತ ಪದಗಳು ಸ್ವೀಕರಿಸಿದ್ದಾನೆ. ಹೀಗೆ ಬೇರೆ ಬೇರೆ ರೀತಿಯ ಪದಗಳಿಗೆ ವಿಭಕ್ತಿ ಪ್ರತ್ಯಯಗಳು ಬರುವುದನ್ನು ನಿರೂಪಿಸಿಲಾಗಿದೆ.

ಅನಂತರ ಸರ್ವನಾಮಗಳಿಗೆ ವಿಭಕ್ತಿ ಪ್ರತ್ಯಯಗಳು ಬರುವುದನ್ನು ಕೂಡ ಪದ್ಯ ೧೦೭, ೧೦೮, ೧೦೯ ರಲ್ಲಿ ನಿರೂಪಿಸಲಾಗಿದೆ.

ಇತರ ಪ್ರಕ್ರಿಯೆಗಳಂತೆಯೇ ಈ ಪ್ರಕ್ರಿಯೆಯನ್ನು ನಿರೂಪಿಸುವಾಗ ಕೂಡ ತೆಲುಗು ವೈಯಾಕರಣರು ಸಂಸ್ಕೃತವನ್ನೇ ಆಧರಿಸಿದರು. ಅದಕ್ಕೆ ಕೇತನನು ಹೊರತಲ್ಲ. ಕೇತನನ ವಿಭಕ್ತಿ ಪ್ರಕರಣ ಸಂಸ್ಕೃತದ ಪಾಣಿನೀಯ ಸಂಪ್ರದಾಯದಿಂದ ಪ್ರಭಾವಿತವಾಗಿದೆ.

**ವಚನ ಪ್ರತ್ಯಯಗಳು:**

ಕೇತನನು ಏಕವಚನಗಳ ಮೇಲೆ ಬಹುವಚನ ಪ್ರತ್ಯಯಗಳು ಸೇರುವ ಪದ್ಧತಿಯನ್ನು (ನಿಯಮ) ಕುರಿತು ಭಾ.ಭೂ.ದ. ಪದ್ಯ ೬೯ ರಿಂದ ೮೧ರ ವರೆಗೆ ತಿಳಿಸಿರುತ್ತಾನೆ. ಸಾರಾಂಶವಾಗಿ ಅವುಗಳ ಬಗ್ಗೆ ಹೀಗೆ ತಿಳಿಸಬಹುದು.

ಪ್ರಥಮ ಏಕವಚನ ರೂಪಗಳು ಪ್ರಥಮ ಬಹುವಚನಾದಿ ರೂಪಗಳು ಆಗುವ ರೀತಿಯನ್ನು ಪದ್ಯ ೬೯ರಲ್ಲಿ ತಿಳಿಯಪಡಿಸಿದ್ದಾನೆ. ಆದರೆ 'ಡು' ಕಾರಾಂತ ಶಬ್ದಗಳಿಗೆ ಮಾತ್ರ ಇಂಥ ಪ್ರಕ್ರಿಯೆ ಇಲ್ಲ. ಪದಾಂತ 'ಡು' ನಿಲ್ಲದು. ಆದುದರಿಂದಲೇ ಕೇತನ 'ಡುಲ ನೆಲ್ಲಯೆಡಲ ದ್ರೋಚುನು' ಎಂದು ಪ್ರಥಮಾ ಬಹುವಚನಾದಿ ರೂಪಗಳಲ್ಲಿ 'ಡು' ಲೋಪವನ್ನು ಕುರಿತು ಆಂ.ಭಾ.ಭೂ.ದ ಪದ್ಯ ೭೦ರಲ್ಲಿ ಹೇಳಿದ್ದಾನೆ.

ಬಲವಂತುಪು ಬಲವಂತುಲು, ಧನವಂತುಪು > ಧನವಂತುಲು; ಹಾಗೆಯೇ ಕುಲಜುಲು ನಯವಿದುಲು, ಭಾವುಕುಲು- ಇತ್ಯಾದಿ ಪ್ರಾತಿಪದಿಕದಲ್ಲಿ ಲಕಾರ ಇದ್ದಾಗ ಅವರ ಮೇಲಿನ ಬಹುವಚನದ 'ಲು' ಗೆ 'ರು' ಆಗುವುದು. ಬಹುವಚನದಲ್ಲಿ ವೀಡು >ವೀಂಡ್ರು, ವೀರು, ವೀರುಲು- ಎಂದಾಗುವುದು. ಬಾಲುರು, ಮಹೀಪಾಲುರು, ಲಲಿತದಯಾಳುರು ನು >ಕುಲುವಾಗುತ್ತದೆ. ಕೊಜನು, ನೆಜನು, ಕೊಲನು, ಕೆಲನು -ಇವುಗಳು ಕೊಜಕುಲು, ನೆಜಕುಲು, ಕೊಲಕುಲು, ಕೆಲಕುಲು- ಎಂದಾಗುವುವು (ಪದ್ಯ ೭೩-೭೪).

**ಲ್ಲು >ಂಡ್ಲು:** ಇಲ್ಲು, ಕಲ್ಲು, ಮುಲ್ಲು, ಪಲ್ಲು-ಎಂಬ ಈ ಪದಗಳು ಬಿಂದುವೆರಸು ಡ್ಲು (ಂಡ್ಲು) ಪಡೆಯುವುವು. ಉದಾ. ಇಂಡ್ಲು, ಕಂಡ್ಲು, ಮುಂಡ್ಲು, ಪಂಡ್ಲು -ಎಂಬಂತೆ (ಪ.೭೫).

**ನು > ಲು:** ಪೇನು, ಜೇನು- ಎಂಬಿವುಗಳು ಪೇಲು, ಜೇಲುಗಾಳಾಗುವುವು. ಚೇಯಿ, ತಾಯಿ, ನೇಯಿ- ಇವು ಚೇತುಲು, ತಾತುಲು, ನೇತುಲು- ಎಂಬಂತೆ ವರ್ತಿಸುವುವು (ಪದ್ಯ ೭೬-೭೭). ಚೇಯಿ +ಲು-ಚೇಯಿಲು; ಇಲ್ಲಿಯ 'ಚೇ-ಯಿಲು' ಎಂಬುದು ಚೇತುಲು ಆಗಿದೆ. ಉ,ಲು, ಡು ಅಂತ್ಯದಲ್ಲಿದ್ದಾಗ 'ಳು' ಬರುವುದು' ಕೊನವೇಳ್ಳು, ಕನಗುಳ್ಳು, ವೇಳ್ಳು- ಇತ್ಯಾದಿ ಉದಾಹರಣೆಗಳು. ಬಹುವಚನದಲ್ಲಿ ಪದಾಂತದ 'ಇ' 'ಉ' ಆಗುವುದು. ಮಣಿ +ಲು =ಮಣುಲು, ಸುದತಿ +ಲು = ಸುದತುಲು; ಸಖಿ +ಲು = ಸಖುಲು, ಸುಕವಿ +ಲು = ಸುಕವುಲು.

ಕೆಲವು ನಿತ್ಯ ಬಹುವಚನಗಳು. ಉದಾ: ನೀಳ್ಳು, ಗೋಧುಮಲು, ವಟ್ಲು ಜೊನ್ನಲು, ಅನುಮುಲು, ಪೆಸಲು.

ಜಿಲಿಯಲು, ಆಲು, ಮರದಲು, ಕೋಡಲು-ಮುತಾದವುಗಳಲ್ಲಿರುವ 'ಲು' ಬಹುವಚನದಲ್ಲಿ 'ಡ್ರು' ಆಗುವುದು. ಉದಾ: ಆಂಡ್ರು, ಮರದಂಡ್ರು, ಕೋಡಂಡ್ರು ಇತ್ಯಾದಿ. ವಿವಿಧ ವಿಭಕ್ತಿಗಳನ್ನು ನಿರೂಪಿಸುವಾಗಲೂ ಏಕವಚನ ಮತ್ತು ಬಹುವಚನಗಳೆರಡನ್ನು ಕೇತನ ಹೇಳಿರುವುದು ಗಮನಾರ್ಹ.

**ತೌಲನಿಕ ಸಮೀಕ್ಷೆ:**

ವಿಭಕ್ತಿ ಪ್ರತ್ಯಯ - ಇವು ಸಂಸ್ಕೃತ ವ್ಯಾಕರಣದ ಪಾರಿಭಾಷಿಕ ಪದಗಳು. ಕನ್ನಡ ಮತ್ತು ತೆಲುಗು ವೈಯಾಕರಣರು ಸಂಸ್ಕೃತದ ಈ ಪಾರಿಭಾಷಿಕ ಪದಗಳನ್ನೇ ಯಥಾಪ್ರಕಾರ ಸ್ವೀಕರಿಸಿರುತ್ತಾರೆ. ಅಷ್ಟಾಧ್ಯಾಯಿ, ಕಾತಂತ್ರ, ಜೈನೇಂದ್ರ- ಈ ಮೊದಲಾದ ವ್ಯಾಕರಣಗಳು ಎರಡೂ ಭಾಷೆಗಳಿಗೆ ವಿಭಕ್ತಿಯೆಂಬ ಸಂಜ್ಞೆ ಮತ್ತು ವಿವರಣೆಗಳಲ್ಲಿ ಸಹಾಯಕವಾಗಿವೆ. ಕನ್ನಡ ಮತ್ತು ತೆಲುಗು ವಿಭಕ್ತಿ ಪ್ರತ್ಯಯಗಳ ವಿಷಯದಲ್ಲಿ ಸ್ವಲ್ಪಮಟ್ಟಿಗೆ ಹೋಲಿಕೆ, ಬಹುಮಟ್ಟಿಗೆ ವ್ಯತ್ಯಾಸ ಕಾಣಬರುತ್ತದೆ.

೧. ನಾಗವರ್ಮನು ವಿವರಿಸಿದ ಪ್ರತ್ಯಯಗಳಲ್ಲಿ ಸಂಸ್ಕೃತದ ಅಷ್ಟಾಧ್ಯಾಯಿ ಮತ್ತು ಕಾತಂತ್ರಗಳ ಪ್ರಭಾವ ಎದ್ದು ಕಾಣುತ್ತದೆ. ಅಲ್ಲದೆ ಐಂದ್ರ, ಆಪಶಲಿ, ಭೋಜ, ಹೇಮಚಂದ್ರ- ಈ ಮೊದಲಾದ ವ್ಯಾಕರಣಗಳ ಛಾಯೆ ಇದೆ. ಕೇತನನ ವಿಭಕ್ತಿ ಪ್ರಕರಣದಲ್ಲಿ ಅಷ್ಟಾಧ್ಯಾಯಿಯ ಪ್ರಭಾವವೇ ಹೆಚ್ಚು.

೨. ಕ.ಭಾ.ಭೂ.ವು 'ವಿಭಕ್ತಿ ವಿಧಾನಂ' ಮತ್ತು 'ಕಾರಕ ವಿಧಾನಂ' ಎಂಬ ಎರಡು ಪ್ರಕರಣಗಳನ್ನು ಹೇಳಿದೆ. ಕೇತನನಲ್ಲಿ ಇಂಥ ಪ್ರಕರಣಗಳಿಲ್ಲ. ಕಾರಕದ ಹಿನ್ನೆಲೆಯಲ್ಲಿ ಕೇತನ ವಿಭಕ್ತಿ ಪ್ರತ್ಯಯಗಳನ್ನು ವಿವರಿಸಿದ್ದಾನೆ.

೩. ಮಮಿಂಕೆಯದದೊಳ್- ಎಂಬ ಸೂತ್ರದಲ್ಲಿ ನಾಗವರ್ಮಾದಿ ವೈಯಾಕರಣರು ಸಪ್ತ ವಿಭಕ್ತಿ ಪ್ರತ್ಯಯಗಳನ್ನು ನಿರ್ದೇಶಿಸಿದ್ದಾರೆ. ಭಾ. ಭೂ. ದ ಸೂತ್ರ ೩೭ರಿಂದ ೬೯ರವರೆಗೆ ಸಪ್ತ ವಿಭಕ್ತಿಗಳ ಪರಿಚಯ, ಪ್ರಯೋಗಗಳಿವೆ. ಅನಂತರ 'ಆಮಂತ್ರಣ' ಅಥವಾ ಸಂಬೋಧನೆಯನ್ನು ವಿವರಿಸಲಾಗಿದೆ. ತೆಲುಗಿನಲ್ಲೂ ಸಪ್ತ ವಿಭಕ್ತಿಗಳನ್ನು ಹೇಳಿದ ಮೇಲೆ ಸಂಬೋಧನೆಯನ್ನು ನಿರೂಪಿಸಲಾಗಿದೆ.

೪. ವಿಭಕ್ತಿಗೆ ಸಂಬಂಧಿಸಿದ 'ಕಾರಕ ವಿಧಾನಂ' ಎಂಬುದು ಪ್ರತ್ಯೇಕ ಪ್ರಕರಣ. ಕಾರಕ ವಶದಿಂದ ವಿಭಕ್ತಿ ಪ್ರತ್ಯಯಗಳು ಹೇಗೆ ಹತ್ತುತ್ತವೆ ಎಂಬುದರ ಬಗ್ಗೆ ನಾಗವರ್ಮನ ಕೃತಿ ತುಂಬ ವಿವರಣೆ ನೀಡಿದೆ. ಕೇತನನ ಕೃತಿಯಲ್ಲಿ ಕಾರಕ ವಿಧಾನದ ಪರಿಚಯ ಮಾತ್ರವಿದ್ದು, ಅಲ್ಲಿ ವಿವರಣೆ ಸಾಲದು.

೫. ಪ್ರಥಮೆಗೆ ಪ್ರತ್ಯೇಕವಾದ ವಿಭಕ್ತಿ ಪ್ರತ್ಯಯವಿಲ್ಲ. ನಾಮ ಪ್ರಕೃತಿಗಳು ಇದ್ದ ರೀತಿಯಲ್ಲಿಯೇ ಪ್ರಥಮಾ ವಿಭಕ್ತಿಯನ್ನು ಸೂಚಿಸುತ್ತವೆ.[೧೫(ಎ)] ಆದರೆ ವ್ಯಾಕರಣಗಳು ಸಂಸ್ಕೃತ ಪ್ರಭಾವದಿಂದ ಪ್ರಕೃತಿ, ಪ್ರತ್ಯಯವನ್ನು ಸಾಧಿಸಿವೆ. ಕನ್ನಡದ ಪ್ರ.ವಿ.ಪ್ರತ್ಯಯ 'ಮ್' ಎಂದು ಹೇಳಿದ್ದರೆ, ತೆಲುಗಿನಲ್ಲಿ ಡು, ಮು, ವು ಗಳಾಗಿವೆ.

೬. ಪ್ರಕೃತಿಗೆ ಮತ್ತೊಂದು ಹೆಸರು 'ಲಿಂಗ' ವೆಂದು. ನಾಮಲಿಂಗದ ಪ್ರಸ್ತಾವನೆ ನಾಗವರ್ಮನಲ್ಲಿ ಕಾಣಬರುತ್ತದೆ. ಲಿಂಗದ ಕಲ್ಪನೆ ಕೇತನನಲ್ಲಿ ಇಲ್ಲ.

೭. 'ವಿಭಕ್ತಿ ವಿಧಾನಂ' ಎಂಬಲ್ಲಿ ವಿಭಕ್ತಿ ಪ್ರತ್ಯಯಗಳನ್ನು, ವಚನ ಪ್ರತ್ಯಯಗಳನ್ನು ಹಾಗು ಸರ್ವನಾಮಗಳನ್ನು ತಿಳಿಸಲಾಗಿದೆ.

೮. ಕನ್ನಡದಲ್ಲಿ ವಸ್ತುತಃ ಪಂಚಮೀ ವಿಭಕ್ತಿ ಇಲ್ಲ. ತೃತೀಯೆಯೇ ಪಂಚಮಿಯ ಕೆಲಸವನ್ನು ನಿರ್ವಹಿಸುವುದು. ಆದರೆ ತೆಲುಗಿನಲ್ಲಿ ಇಂಥ ಪ್ರಸಂಗ ಕಾಣದು. ಅಲ್ಲಿ ತೃತೀಯ ಮತ್ತು ಪಂಚಮಿ ಬೇರೆ ಬೇರೆ ಪ್ರತ್ಯಯಗಳು. ತೆಲುಗಿನಲ್ಲಿ ಒಂದು ವಿಭಕ್ತಿಯ ಕೆಲಸವನ್ನು ಇನ್ನೊಂದು ವಿಭಕ್ತಿ ನಿರ್ವಹಿಸುವ ಪ್ರಕ್ರಿಯೆ ಇದೆ ಎನ್ನುವುದನ್ನು ಕೇತನ ತೋರಿಸಿಕೊಟ್ಟಿದ್ದಾನೆ. (ಪದ್ಯ ೮೨, ೮೩).

೯. ಪ್ರತ್ಯಯಗಳ ಹಿನ್ನೆಲೆಯಲ್ಲಿ ವಿವಿಧ ಆಗಮಗಳಾದ ಇನಾಗಮ, ಇರಾಗಮ, ಅಣಾಗಮ, ಅಲ್ ಪ್ರತ್ಯಯ- ಇವುಗಳ ಬಗ್ಗೆ ವಿವರಣೆಯನ್ನು ಕನ್ನಡ ವ್ಯಾಕರಣಗಳು ತಿಳಿಸುತ್ತವೆ. ಆದರೆ ಇಂಥ ಆಗಮಗಳೆಲ್ಲ ಸಂಧಿ ಪ್ರಕರಣದಲ್ಲಿ ಹೇಳಿರುವಂತೆಯೇ ಬರುವುದರಿಂದ ಪ್ರತ್ಯೇಕವಾಗಿ ಹೇಳಬೇಕಾಗಿಲ್ಲವೆಂದೇನೋ ಕೇತನ ಇವನ್ನು ಹೇಳಿಲ್ಲ.

೧೦. ನಾಗವರ್ಮನು ಷಷ್ಠಿಗೆ ದೀರ್ಘಾದೇಶವನ್ನು ಹೇಳಿದ್ದಾನೆ. ತೆಲುಗಿನಲ್ಲಿ ಅದಿಲ್ಲ.

**ಕಾರಕ ವಿಧಾನಂ:**

'ಕ್ರಿಯಾ ನಿಮಿತ್ತಂ ಕಾರಕಂ, ಲೋಕತಃ ಸಿದ್ಧಮ್', ಎಂದೂ, 'ಕ್ರಿಯಾಂ ಕರೋತೀತೇ ಕಾರಕಮ್: ಕ್ರಿಯಾನ್ವಿತತ್ವಂ ಕಾರಕತ್ವಮ್' ಎಂದೂ ಹೇಳಲಾಗಿದೆ. ಕಾರಕವೆಂದರೆ 'ಮಾಡುವುದು' ಅಥವಾ 'ಕರ್ತೃ'. ಕರ್ತೃ ಮುಂತಾದವುಗಳನ್ನು ಕುರಿತು ಹೇಳುವ ವ್ಯಾಕರಣ ವಿಭಾಗಕ್ಕೂ ಕಾರಕವೆಂಬ ಸಂಜ್ಞೆ. ಒಟ್ಟಿನಲ್ಲಿ ನಾಮಪದ ಮತ್ತು ಕ್ರಿಯೆಗೆ ಇರುವ ಸಂಬಂಧವನ್ನು ಹೇಳುವುದು ಕಾರಕ.

ಭೂಷಣದ ಪ್ರಕಾರ ಮುಖ್ಯ ಕಾರಕಗಳೆಂದರೆ ೧. ಕರ್ತೃಕಾರಕ; ೨. ಕರ್ಮಕಾರಕ; ೩. ಕರಣಕಾರಕ; ೪. ಸಂಪ್ರದಾನ ಕಾರಕ; ೫. ಅಪಾದಾನಕಾರಕ; ೬. ಸ್ವಾಮ್ಯ ಕಾರಕ; ೭. ಅಧಿಕರಣ ಕಾರಕ. ಆರನೆಯದಾದ ಸ್ವಾಮ್ಯ ಕಾರಕ ಅಥವಾ ಸಂಬಂಧ ಕಾರಕವನ್ನು ಅನೇಕರು ಕಾರಕವೆಂದು ಒಪ್ಪುವುದಿಲ್ಲ. ಇದು ಪರೋಕ್ಷವಾಗಿ ಕ್ರಿಯೆಗೆ ಸಂಬಂಧಿಸಿದ್ದರೂ ಸಾಂಪ್ರದಾಯಕವಾಗಿ ಆರು ಕಾರಕಗಳಲ್ಲಿ ಸೇರುವುದಿಲ್ಲ. ಅದಕ್ಕೆ 'ಶೇಷ ಷಷ್ಠಿ' ಎಂದು ಹೆಸರು.

ಕ.ಭಾ.ಭೂ ಕರ್ತೃ ಕಾರಕವಾದ ಸೂತ್ರಗಳನ್ನು ಆರಂಭಿಸಿದೆ. ಸೂತ್ರ ೭೪ರಲ್ಲಿ "ಲಿಂಗಾರ್ಥ, ವಚನ ಮಾತ್ರೇ ಪ್ರಥಮಾ" ಎಂದಿರುವುದರಿಂದ ಪ್ರಥಮಾ ವಿಭಕ್ತಿಯು ಲಿಂಗದಲ್ಲಿಯೂ ಅರ್ಥದಲ್ಲಿಯೂ ವಚನದಲ್ಲಿಯೂ ಬರುವುದು. ಲಿಂಗದಲ್ಲಿ ದೇವಂ, ನೃಪಂ, ನಾರಿ, ನಲ್ಲಳ್ ಎಂದು ಪ್ರಥಮೆ ಹತ್ತುವುದು. ದೇವಂ ನೃಪಂ- ಎಂಬಲ್ಲಿ ಪ್ರಥಮ 'ಮ್' ಹತ್ತಿದೆ. ನಾರಿ ನಲ್ಲಳ್ ಎಂಬಲ್ಲಿ ಪ್ರತ್ಯಯವಿಲ್ಲ. ಅರ್ಥದಲ್ಲಿ ಉಚ್ಚಂ ನೀಚಂ ಎಂಬಲ್ಲಿಯೂ 'ಮ್' ಹತ್ತಿದೆ. ವಚನದಲ್ಲಿ ಒಂದಾನುಂ, ಎರಡಾನುಂ ಎಂಬಲ್ಲಿ ಕೂಡ 'ಮ್' ಬಿಂದು ಸ್ವರೂಪದಿಂದ ಕೂಡಿದೆ.

ಸೂತ್ರ ೭೫ರಲ್ಲಿ ಸಂಬೋಧನೆಯಲ್ಲಿ ಪ್ರಥಮ ಬರುವುದಾಗಿ ತಿಳಿಸಿ, 'ಸಂಬೋಧನೇ ಚ' ಎಂದಿದ್ದಾನೆ, ನಾಗವರ್ಮ. ಉದಾ: ನೃಪೇಂದ್ರ, ಕಾಂತೆ, ಕೊಳನೆ, ವನಮೆ, ವಸಂತನೆ- ಮೊದಲಾದುವು. ಸಂಬೋಧನೆಯೆಂದರೆ ಎದುರುಗಡೆ ಇರುವ ವ್ಯಕ್ತಿಯನ್ನು ಕುರಿತು ನಿರ್ದೇಶಿಸಿ ಕರೆಯುವುದು ಎಂದು ನಾಗವರ್ಮನ ಇಂಗಿತ.

ಅಲ್ಲಿ ಪ್ರಥಮೆ ಬರುವುದು ಈ ವೃಷ್ಟಿಯಿಂದ ಸಂಬೋಧಿಸುವಲ್ಲಿ ಪ್ರತ್ಯೇಕ ಪ್ರತ್ಯಯವಿಲ್ಲ. ಪ್ರಥಮಾ ವಿಭಕ್ತಿಯೇ ಸಂಬೋಧನಾ ವಿಭಕ್ತಿಯಾಗಿರುತ್ತದೆ.

ಮುಂದಿನ ಸೂತ್ರ ೭೬ರಲ್ಲಿ ಕರ್ಮಕಾರಕದಿಂದ ದ್ವಿತೀಯಾ ವಿಭಕ್ತಿ ಹತ್ತುವುದರ ಬಗ್ಗೆ ಹೇಳಿದೆ. "ಕರ್ಮಣಿ ದ್ವಿತೀಯಾ" (ಸೂತ್ರ ೭೬) ಯಾವುದು ಮಾಡಲ್ಪಡುವುದೋ ಅದು ಕರ್ಮ. ಕರ್ಮಾರ್ಥದಲ್ಲಿ ದ್ವಿತೀಯಾ ವಿಭಕ್ತಿ ಬರುವುದು. ಆ ಕರ್ಮವು ನಿರ್ವರ್ತ್ಯವೆಂದು, ವಿಕಾರ್ಯವೆಂದು, ಪ್ರಾಪ್ಯವೆಂದು, ವೈಷಯಿಕವೆಂದು ನಾಲ್ಕು ತೆರ. ಮತ್ತೆ ಅದು ಇಷ್ಟವೆಂದು, ಅನಿಷ್ಟವೆಂದು ಇರ್ತೆರ. ಉದಾಹರಣೆಗಳು-

**ನಿರ್ವರ್ತ್ಯೇ:**

ಮನೆಯಂ ಮಾಡಿದಂ; ವಿಕಾರ್ಯಕ್ಕೆ: ಪಡುವಂ ಕಡಿದಂ (ಕಾಡನ್ನು ಕಡಿದನು); ಪ್ರಾಪ್ಯೇ: ಊರನೆಯ್ದಿದಂ (ಊರನ್ನು ಸೇರಿದನು); ವೈಷಯಿಕೇ: ನೇಸರಂ ನೋಡಿದಂ (ಸೂರ್ಯನನ್ನು ನೋಡಿದನು); ಇಷ್ಟಕ್ಕೆ: ಕೂಳನಟ್ಟಂ (ಅಡಿಗೆಯನ್ನು ಮಾಡಿದನು): ಅನಿಷ್ಟ: ಪಾವಂ ದಾಟಿದಂ.

"ಕಾಲಾಧ್ವ ನೋರ ವಿಚ್ಛೇದೇ" -ಎಂಬ ಸೂತ್ರ ೭೭ರ ಪ್ರಕಾರ "ಕಾಲದಲ್ಲಿ ಮತ್ತೆ ದಾರಿಯಲ್ಲಿ ಕ್ರಿಯಾ ವ್ಯಾಪ್ತಿಗೆ ತಕ್ಕಂತೆ ದ್ವಿತೀಯಾ ವಿಭಕ್ತಿ ಬರುವುದು."ಉದಾ: ಕಾಲ: ಅರೆಜಾವಮಂ ನಿದ್ದೆಗೆಯ್ದಂ; ದಾರಿ: ನಾಲ್ಗಾವುದಮಂ ನಡೆದಂ.

ಕರ್ತೃ ಕರಣಾರ್ಥದಲ್ಲಿ ತೃತೀಯಾ ವಿಭಕ್ತಿ ಬರುವುದಾಗಿ ಸೂತ್ರ ೭೮ರಲ್ಲಿ ತಿಳಿಸಿದೆ. "ಕರ್ತೃ ಕರಣಯೋಸ್ತೃತೀಯಾ" (ಸೂತ್ರ ೭೮) ಕರ್ತೃ ಕರಣಗಳೆಂದರೆ ಮಾಡುವಾತ ಕರ್ತೃ, ಸಾಧಿಸುವುದೇ ಕರಣಂ, ಉದಾ: ಕರ್ತೃವಿಗೆ: ದೇವದತ್ತನಿಂ ಮಾಡಲ್ಪಟ್ಟುದು; ಕರಣ: ಕುಡುಗೋಲಂ ಕೊಯ್ದಂ -ಇತ್ಯಾದಿ.

ಸೂತ್ರ ೭೯ರಲ್ಲಿ: 'ಹೇತಾವಪಿ' ಎಂದಿರುವುದರಿಂದ ಕಾರಣಾರ್ಥದೊಳಗೆ ತೃತೀಯಾ ವಿಭಕ್ತಿ ಬರುವುದು. ಉದಾ: ಓಲಗದಿಂದಿರ್ದಂ, ಓಲಗದಿಂ ಬಟ್ಟಿಂ.

"ಸಂಪ್ರದಾನೇ ಚತುರ್ಥೀ" (ಸೂತ್ರ ೮೦) ಎಂದಿರುವುದರಿಂದ, ಸಂಪ್ರದಾನ ಕಾರಕದಲ್ಲಿ ಚತುರ್ಥಿ ವಿಭಕ್ತಿ ಬರುವುದು. ಸಂಪ್ರದಾನವೆಂದರೆ 'ಕರ್ಮದೊಡನೆ ಕೂಡಿದುದು' ಎಂದರ್ಥ. ಉದಾ: ಉಪಾಧ್ಯಾಯರಿಗೆ ದಕ್ಷಿಣೆ ಕೊಟ್ಟಂ; ಬ್ರಾಹ್ಮಣಂಗೆ ಗೋವನಿತ್ತಂ ಇತ್ಯಾದಿ.

ಸಂಪ್ರದಾನವು ರುಚಿ, ಹಿತ, ಈರ್ಷ್ಯೆ, ಭೀತಿ- ಇವುಗಳಲ್ಲಿ ಕೂಡ ಚತುರ್ಥಿ ವಿಭಕ್ತಿ ಬರುವುದುಂಟು.

ರುಚಿಗೆ: ಸೂತ್ರ ೮೧ರಲ್ಲಿ 'ರುಚಿ ಹಿತೇರ್ಷ್ಯಾಭಯೇಷು ಚ' ಎಂದಿದೆ.ಉದಾ:

ದೇವದತ್ತಂಗೆ ರುಚಿಯಾಯ್ತು ಮೋದಕಂ

ಹಿತಕ್ಕೆ: ಪಶುವಿಂಗೆ ಹಿತಂ ತೃಣಂ

ಈರ್ಷ್ಯೆ: ಆರ್ಯಂಗೆ ಸೆಣಸುಗುಂ ದುರ್ಜನಂ.

ಭಯಕ್ಕೆ : ಪಾಪಕ್ಕಂಜುಗುಂ

ಸೂತ್ರ ೮೨ರಲ್ಲಿ "ಮನ್ಯ ಕರ್ಮಣಿ ಚಾ ನಾದರೇ" ಎಂದಿರುವುದರಿಂದ, ಆದರಣೆ ಇಲ್ಲದಿರುವಾಗ "ಧಾತುವಿನ ಕರ್ಮದಲ್ಲಿ ಚತುರ್ಥೀ ವಿಭಕ್ತಿ ಬರುವುದು."

ಉದಾ: ಅವನಂ ಪುಲ್ಗೆ ಕಷ್ಟಮಾಗೆ ಬಗೆದಂ

ಆತನ ಮಾತನೊಂದಡಕೆಗೆ ಕೊಳ್ಳಂ

ಸೂತ್ರ ೮೩ರಲ್ಲಿ "ನಮಸ್ಕ್ರಿಯಾಯಾಂ ಸ್ವಸ್ತ್ಯಾದಿಷು ಚ" ಎಂದಿರುವುದರಿಂದ ನಾಮಸ್ಕಾರದಲ್ಲಿ ಸ್ವಸ್ತಿ ಮೊದಲಾದ ಶಬ್ದಗಳಲ್ಲಿ ಮೇಲಿನ ಚತುರ್ಥೀ ಬರುವುದು.

ಉದಾ: ದೇವಂಗೆ ನಮಸ್ಕಾರಂಗೆಯ್ದಂ; ಅರಸಂಗೆರಗಿದಂ (ನಮಸ್ಕಾರದಲ್ಲಿ)

ಪ್ರಜೆಗೆಲ್ಲಂ ಸ್ವಸ್ತಿಯಕ್ಕೆ (ಸ್ವಸ್ತಿಯಲ್ಲಿ)
ಭದ್ರಂಜಿನ ಶಾಸನಕ್ಕೆ (ಸ್ವಸ್ತಿಯಲ್ಲಿ)

"ಅಪಾದಾನೇ ಪಂಚಮೀ" ಎಂದು ಸೂತ್ರ ೮೪ರಲ್ಲಿ ತಿಳಿಸಿದೆ. ಕಾರಣ ಪಂಚಮೀ ವಿಭಕ್ತಿಯು ಅಪಾದಾನ ಕಾರಕದಲ್ಲಿ ಬರುತ್ತದೆ. ಉದಾ: ಊರನತ್ತಣಿಂ ಬಂದಂ ಇತ್ಯಾದಿ.

ಸೂತ್ರ ೮೫ರಲ್ಲಿ "ಸಂಬಂಧೇ ಷಷ್ಠೀ" ಎಂದಿರುವುದರಿಂಧ ಸಂಬಂಧಕಾರಕದಲ್ಲಿ ಷಷ್ಠೀ ವಿಭಕ್ತಿ ಬರುವುದು. ಸಂಬಂಧವು ಸ್ವ ಸ್ವಾಮಿಭಾವ ಮತ್ತು ವಸ್ತು ಸಂಬಂಧವಾಗಿರಬಹುದು.[೧೬]

ಉದಾ: ನಾಡೆಜುಿಯಂ (ಸ್ವ ಸ್ವಾಮಿ ಭಾವ)
ಮರದಕೊಂಬು (ಅವಯವ ಸಂಬಂಧ)
ಪೊನ್ನಗೆಜ್ಜೆ (ವಸ್ತು ಸಂಬಂಧ)

"ಅಧಿಕರಣೇ ಸಪ್ತಮೀ" ಎಂದು ಸೂತ್ರ ೮೬ರಲ್ಲಿ ತಿಳಿಸಿದೆ. ಕಾರಣ ಅಧಿಕರಣ ಕಾರಕದಲ್ಲಿ ಸಪ್ತಮೀ ವಿಭಕ್ತಿ ಬರುತ್ತದೆ. ಅಧಿಕರಣ ಕಾರಕವೆಂದರೆ ಆಧಾರ ಕಾರಕವೆಂದರ್ಥ.

ಉದಾ: ನೆಲದೊಳ್ ಪಟ್ಟಂ; ತೊಱೆಯಲ್ ಬಿಟ್ಟಿ; ಪೂವಿನೊಳ್ ಕಂಪು- ಇತ್ಯಾದಿ. ಇದಾದಮೇಲೆ ಸಪ್ತಮಿಯ ಬಗ್ಗೆ ಮುಂದುವರಿಸಲಾಗಿದೆ.

ಜಾತಿ, ಕ್ರಿಯೆ, ಗುಣ, ದ್ರವ್ಯ- ಎಂಬಿವುಗಳಿಂದ ವಸ್ತುವನ್ನು ಬೇರ್ಪಡಿಸುವುದು ನಿರ್ಧಾರಣವೆನಿಸಿಕೊಳ್ಳುತ್ತದೆ.ಆ ನಿರ್ಧಾರಣದಲ್ಲಿಯೂ ಸಪ್ತಮಿ ಬರುವುದು. ಅದಕ್ಕೆ ಸೂತ್ರ ೮೭ರಲ್ಲಿ "ನಿರ್ಧಾರಣೇ ಚ" ಎಂದಿದೆ. ಉದಾ: ಪುರುಷರೊಳ್ ಕ್ಷತ್ರಿಯಂ ಶೂರಂ; ನುಡಿವರೊಳ್ ಕಡುಜಾಣಂ, ನರರೊಳುತ್ತಮಂ.

ಮುಂದಿನ ಸೂತ್ರಗಳು ವಿಭಕ್ತಿ ಪಲ್ಲಟಕ್ಕೆ ಸಂಬಂಧಿಸಿವೆ.

ಮೇಲಿನ ವಿಭಕ್ತಿಗಳು ವಿಕಲ್ಪದಿಂದ "ಎಂತಾನುಂ" ಪಲ್ಲಟಗೊಳ್ಳುವವುಂ.

ಸಪ್ತಮಿಯ ಅರ್ಥದಲ್ಲಿ ಷಷ್ಠೀ ವಿಭಕ್ತಿ ಬರುವುದು. ಪಂಚಮಿಯ ಅರ್ಥದಲ್ಲಿ ತೃತೀಯ ಬರುವುದು. ಷಷ್ಠಿಯ ಅರ್ಥದಲ್ಲಿ ಚತುರ್ಥೀ ಬರುವುದು. ದ್ವಿತೀಯಾರ್ಥದಲ್ಲಿ ಚತುರ್ಥೀ; ಪ್ರಥಮಾರ್ಥದಲ್ಲಿ ಷಷ್ಠಿ, ತೃತೀಯಾರ್ಥದಲ್ಲಿ ಸಪ್ತಮೀ- ಹೀಗೆ ಬರುವುವು. ಅದನ್ನೇ ಸೂತ್ರ ೮೮ರಲ್ಲಿ ನಾಗವರ್ಮ ಹೇಳಿದ್ದಾನೆ.

ಸೂತ್ರ: "ಆ ಸಾಂ ವ್ಯತ್ಯಯೋ ಬಹುಳಂ" (ಸೂತ್ರ ೮೮)

೧. ಸಪ್ತಮಿಯ ಅರ್ಥದಲ್ಲಿ ಷಷ್ಠೀ: ಬಾಗಿಗಳ ಬಲ್ಲಹಂ

೨. ಪಂಚಮಿಯ ಅರ್ಥದಲ್ಲಿ ತೃತೀಯ: ಒಱೆಯಿಂದುರ್ಚಿದಂ

೩. ಷಷ್ಠ್ಯರ್ಥದಲ್ಲಿ ಚತುರ್ಥಿ: ನೆಲಕ್ಕೆಱೆಯಂ ಶ್ರೀ ಜಗದೀಶ್ವರಂ

೪. ಪ್ರಥಮಾರ್ಥದಲ್ಲಿ ಷಷ್ಠೀ: ನಿನ್ನ ಪೋಪುದುಂ

೫. ತೃತೀಯಾರ್ಥದಲ್ಲಿ ಸಪ್ತಮಿ: ಕೊಡಲಿಯೊಳ್ ಕಡಿದಂ

ಮುಂದಿನ ಸೂತ್ರಗಳಲ್ಲಿ ವಚನ ಪಲ್ಲಟವನ್ನು ಕುರಿತು ತಿಳಿಸಾಲಾಗಿದೆ.

"ಜಾತಿರೇಕ ವದ್ವಹ್ವಾಖ್ಯಾಯಂ ಬಹುಳಂ" ಎಂದು ಸೂತ್ರ ೮೯ರಲ್ಲಿ ತಿಳಿಸಿರುವುದರಿಂದ "ಜಾತಿಯನ್ನು ಕುರಿತು ಹೇಳುವ ಶಬ್ದ ಬಹುವಚನವನ್ನು ನುಡಿಯುತ್ತಿದ್ದರೂ ಅದು ವಿಕಲ್ಪದಿಂದ ಏಕವಚನವಾಗಿಯೇ ಇರುವುದು." ಉದಾ:

ಕರಿಯಿವು; ಕರಿಗಳಿವು, ಕೆಯ್‌ಬೆಳೆದುವು, ಕೆಯ್ಗಳ್ ಬೆಳೆದುವು

**ಸೂತ್ರ:** "ಸಂಖ್ಯೇಯೇ ಸಂಖ್ಯಾಸು ಚ"- ಎಂದು ಸೂತ್ರ ೯೦ರಲ್ಲಿ ತಿಳಿಸುತ್ತದೆ. ಈ ಕಾರಣ ಸಂಖ್ಯಾವಸ್ತುವಿನಲ್ಲಿ, ಸಂಖ್ಯೆಗಳಲ್ಲಿಯೂ ಬಹುಳವಾಗಿ ಬಹುವಚನವು ಏಕವಚನ ರೂಪದಿಂದಲೇ ಇರುವುದು. ಉದಾ: ಪತ್ತುದೆಸೆ: ಪತ್ತುದೆಸೆಗಳ್

ಭಾವಸೂಚಿ ಶಬ್ದಗಳು ಕೂಡ ಅವುಗಳು ಬಹುವಚನವಿದ್ದರೂ ವಿಕಲ್ಪದಿಂದ ಏಕವಚನ ರೂಪವನ್ನೇ ತಾಳುತ್ತವೆ ಎನ್ನಲು ಈ ಪ್ರಕರಣದ ಕೊನೆಯ ಸೂತ್ರವು-

"ಭಾವ ವಚನನೇಪಿ" (ಸೂತ್ರ ೯೧) ಎಂದು ತಿಳಿಸಿದೆ. ಅದರ ಪ್ರಕಾರ ಕರ್ಪು, ಬೆಳ್ಪು ತಣ್ಪು, ತಿಣ್ಪು, ಕೂರ್ಮೆ, ಪೆರ್ಮೆ, ಎಂಬಿವು ಉದಾಹರಣೆಗಳು.

ಸೂತ್ರ ೭೪ರಿಂದ ೯೧ರ ವರೆಗೆ ಎಂದರೆ ಒಟ್ಟು ೧೮ ಸೂತ್ರಗಳು 'ಕಾರಕ ವಿಧಾನಂ' ಎಂಬ ಪ್ರಕರಣಕ್ಕೆ ಮೀಸಲಾಗಿವೆ. ಕೇತನನಲ್ಲಿ ಈ ತರಹ ಪ್ರತ್ಯೇಕ ವಿಧಾನವಿಲ್ಲ. ಅದರೂ ಕಾರಕದ ಕಲ್ಪನೆಯನ್ನು ಅವನು ಸೂಕ್ಷ್ಮವಾಗಿ ವಿವರಿಸಿದ್ದಾನೆ. ಪದ್ಯ ೭೭ರ ವಚನದಲ್ಲಿ- "ಚೇಯುವಾಡು ಪ್ರಥಮ; ಚೇಯಬಡಿನದಿ ದ್ವಿತೀಯ; ಉಪಕರಣಂಬು ತೃತೀಯ, ಚೇಯಿಂಚು ಕೊನುವಾಡು ಚತುರ್ಥಿ, ಜೇಯುಟುಕು ಸ್ಪಟ್ಟಯಿನದಿ ಪಂಚಮಿ, ನೊಡೆಯಂದು ಷಷ್ಠಿ; ನು ನಿಕಿ ಪಟ್ಟು ಸಪ್ತಮಿ, ಸಮ್ಮುಖಂಬು ಸೇಯುವದಿ ಸಂಬೋಧನಂಬುನುನಗು" ಎಂದು ನಾಗವರ್ಮನ ಅಭಿಪ್ರಾಯವನ್ನೇ ತಿಳಿಸಿರುತ್ತಾನೆ.

ಸಂಸ್ಕೃತ ಕನ್ನಡ ವ್ಯಾಕರಣಗಳಲ್ಲಿರುವ ಕಾರಕ ವಿಧಾನವನ್ನು ಕೇತನ ನೇರವಾಗಿ ಸ್ವೀಕರಿಸದೆ ಅಲ್ಲಿಯ ಅಂಶಗಳು ಬರುವಂತೆ ವ್ಯಾಖ್ಯಾನಿಸಿದ್ದಾನೆ. ಅದಕ್ಕಾಗಿ ಒಂದು ಪ್ರತ್ಯೇಕ ಪ್ರಕರಣ ಅವನಲ್ಲಿ ಇಲ್ಲ. ಆದರೂ ಅವನು ಹೇಳಿದ ರೀತಿಯಿಂದ ಕರ್ತೃ, ಕರ್ಮ, ಸಂಪ್ರದಾನ, ಅಪಾದಾನ, ಅಧಿಕರಣ- ಎಂಬೀ ಕಾರಕ ವಿಧಾನಗಳಿಂದಲೇ ವಿಭಕ್ತಿ ಪ್ರತ್ಯಯಗಳು ಹತ್ತುತ್ತವೆ ಎಂಬುದು ತಿಳಿದುಬರುತ್ತದೆ.

ಕೇತನನು ನಿರೂಪಿಸಿದ "ಚೇಯುವಾಡು ಪ್ರಥಮ" ಎಂಬುದು ನಾಗವರ್ಮನ "ಮಾಡುವಾತಂ ಕರ್ತೃ" ಅಲ್ಲಿ ಪ್ರಥಮ ಬರುತ್ತದೆ- ಎಂಬುದಕ್ಕೆ ಸಮವಾಗಿದೆ. ಇವೆರಡಕ್ಕೆ ಮೂಲ "ಯಃ ಕರೋತಿ ಸಕರ್ತಾ" ಎಂಬ ಕಾತಂತ್ರದ ಮಾತಾಗಿದೆ. ಕಾತಂತ್ರದಲ್ಲಿ 'ಮಾಡುವ ಆತನೆ ಕರ್ತೃ' ಎಂಬ ಅರ್ಥವಿದೆ. ನಾಗವರ್ಮ ಹಾಗೂ ಕೇತನ ಇದನ್ನು ಪ್ರಥಮವೆಂದೇ ಸ್ವೀಕರಿಸಿದ್ದಾರೆ. ಅವರು ಈ ವಿಷಯಗಳಲ್ಲಿ ಸ್ವಲ್ಪ ಕಾತಂತ್ರವನ್ನು, ಮತ್ತೆ ಸ್ವಲ್ಪ ಸ್ವಾತಂತ್ರ್ಯವನ್ನು ವಹಿಸಿ 'ಕಾರಕ ವಿಧಾನಂ'ವನ್ನು ಮುಗಿಸಿದ್ದಾರೆ.

## ಅಡಿಟಿಪ್ಪಣಿ

೧. Separatin of the base i.e. that factor which shows the base separately, A Dictionary of Sanskrit Grammar

೨. ಡಾ.ವಿ. ಶಿವಾನಂದ, ಶಬ್ದಮಣಿದರ್ಪಣ ವಿಳಾಸ, ಪು. ೧೨೫

೩. ಕನ್ನಡ ಕೈಪಿಡಿ, ಭಾಗ-೧, ಪು ೪೧೨.

೪. ಅದೇ ಪು. ೪೧೨

೫. ಎಂ.ವಿ.ಸೀತಾರಾಮಯ್ಯ, ಪ್ರಾಚೀನ ಕನ್ನಡ ವ್ಯಾಕರಣಗಳು, ಪು. ೧೫೦

೬. ಕನ್ನಡ ಕೈಪಿಡಿ, ಮೈಸೂರು ವಿಶ್ವವಿದ್ಯಾನಿಲಯದ ಪ್ರಕಟಣೆ, ಪುಟ ೧೪೪

೭. ಡಾ. ಎಲ್. ಬಸವರಾಜು, ಶಬ್ದಮಣಿದರ್ಪಣಂ, ಪು. ೧೩೫

೮. ಡಾ.ವಿ.ಶಿವಾನಂದ: ಶಬ್ದಮಣಿದರ್ಪಣ ವಿಳಾಸಂ; ಪು. ೧೩೦

೯. ಶಬ್ದಮಣಿ ದರ್ಪಣಂ (ಕಿಟ್ಟೆಲ್) - ಸೂತ್ರ ೬೬.

೧೦. ಡಾ. ಎಲ್. ಬಸವರಾಜು 'ಶಬ್ದಮಣಿ ದರ್ಪಣಂ' ಪು. ೧೪೮

೧೧. ಕೆ. ಅನಂತರಾಮು, ಕ.ಅ.ಸಂ. ಕನ್ನಡ ಸಾಹಿತ್ಯ ಚರಿತ್ರೆ ಸಂ. ೩. ಪು.೧೭೩.

೧೨. ಡಾ.ವಿ.ಶಿವಾನಂದ, ಶಬ್ದಮಣಿದರ್ಪಣ ವಿಳಾಸಂ, ಪು. ೧೩೨.

೧೩. ಕೆ. ಅನಂತರಾಮು, ಪೂರ್ವೋಕ್ತ, ಪು. ೧೭೪.

೧೪. ಡಾ. ಎ. ರಾಜೇಶ್ವರ ಶರ್ಮ, ಆಂಧ್ರ ವ್ಯಾಕರಣ ವಿಕಾಸಮು, ಪು. ೨೯೧.

೧೫. ಅದೇ, ಪು. ೩೦೦.

೧೫(ಎ) ಡಾ. ಕೆ. ಕುಶಾಲಪ್ಪ ಗೌಡ, ಕನ್ನಡ ಭಾಷೆ ಮತ್ತು ವ್ಯಾಕರಣಗಳ ಒಂದು ಅಧ್ಯಯನ, ಪು. ೧೪೩.

೧೬. ಅದು ಸ್ವಾಮಿ ಸಂಬಂಧ, ಕುಲ ಸಂಬಂಧ, ಜಾತಿ ಸಂಬಂಧ, ಅವಯವ ಸಂಬಂಧ, ಲಕ್ಷಣ ಸಂಬಂಧ, ಸನ್ನಿಧಾನ ಸಂಬಂಧ, ಸಂ. ಸ್ಪರ್ಶ ಸಂಬಂಧ, ಸಂಬಂಧ ಸಂಬಂಧವೆಂಬಿನಿತಱುೊಳವಕ್ಕುಂ-ಶ.ಮ.ದ ಪದ ೧೪೩ರ ವೃತ್ತಿ.

# ಶಬ್ದ ರೀತಿ

ಕ.ಭಾ.ಭೂ.ದ ಐದನೆಯ ಅಧ್ಯಾಯಕ್ಕೆ "ಯುಷ್ಮದಾದಿ ವಿಧಾನಂ" ಎಂಬ ಹೆಸರಿದೆ. ಪಾಠಾಂತರಗಳಲ್ಲಿ 'ಯುಷದಸ್ಮತ್ಪ್ರಕರಣಂ', 'ಶಬ್ದರೀತಿ ವಿಧಾನಂ' ಎಂಬ ಹೆಸರುಗಳೂ ಇವೆ. ಇಲ್ಲಿ ಸರ್ವನಾಮಗಳ ಜೊತೆಗೆ ತತ್ಸಮ, ತದ್ಭವಗಳ ವಿಷಯವೂ ಬರುವುದರಿಂದ, ತೆಲುಗಿನ ಶಬ್ದರೀತಿಯನ್ನೂ ಹೇಳಬೇಕಾಗಿರುವುದರಿಂದ, 'ಶಬ್ದರೀತಿ' ಎಂದು ಈ ಅಧ್ಯಾಯವನ್ನು ಕರೆಯಲಾಗಿದೆ.

**ಕನ್ನಡದ ಸರ್ವನಾಮಗಳು:**

ನಾಗವರ್ಮನು ತನ್ನ ಕ. ಭಾ.ಭೂ.ದ ಸೂತ್ರ ೯೨, ೯೩, ೯೪, ೯೫, ೯೬, ೯೭ಗಳಲ್ಲಿ ಸರ್ವನಾಮಗಳನ್ನು ಕುರಿತು ಹೇಳಿರುವನು. ಆದರೆ ಅದಕ್ಕೆ 'ಸರ್ವನಾಮ' ಎಂಬ ಸಂಜ್ಞೆಯನ್ನು ಬಳಸಿಲ್ಲ. ವಿಭಕ್ತಿ ಪ್ರಕರಣದ ೪೧ನೆಯ ಸೂತ್ರದಲ್ಲಿ ಮಾತ್ರ ಈ ಸಂಜ್ಞೆ ಇದೆ. ಆದರೆ ಅಲ್ಲಿ 'ಎಲ್ಲವು' (ಸರ್ವ) ಎಂಬುದನ್ನು ಹೇಳಿ 'ನೀಂಗಳ್' ಎಂಬ ಒಂದು ಉದಾಹರಣೆಯನ್ನು ಮಾತ್ರ ಸೇರಿಸಿದ್ದಾನೆ. "ನೀಂ, ಆಂ, ತಾಂ"ಗಳಿಗೆ "ಸರ್ವನಾಮ" ಎಂಬ ಸಂಜ್ಞೆಯನ್ನು ಕನ್ನಡ ವ್ಯಾಕರಣಗಳು ಕೊಡದಿರುವುದು ಆಶ್ಚರ್ಯವನ್ನುಂಟು ಮಾಡುತ್ತದೆ. ಈ ವಿಚಾರದಲ್ಲಿ ಅದೇಕೋ ಅವು ಸಂಸ್ಕೃತ ವ್ಯಾಕರಣಗಳನ್ನು ಅನುಸರಿಸಿಲ್ಲ. ಸ್ಮೃತಿ, ಭೂಷಣಗಳಲ್ಲಿ ಉದಾಹರಣೆಗಳ ಮೂಲಕ "ನೀಂ ಎಂಬುದನ್ನು ಸರ್ವನಾಮವೆಂದು ಧ್ವನಿಸಲಾಗಿದೆ"[೧]

"ಯುಷ್ಮದಾದಿ ವಿಧಾನಂ" -ಎಂಬುದು ಕೃತಿಯ ೫ನೆಯ ಭಾಗ. ಅಲ್ಲಿ ಸರ್ವನಾಮಗಳನ್ನು ಕುರಿತು ತಿಳಿಸುವ ಸೂತ್ರಗಳು ಆರು.

ಒಂದು ಭಾಷೆಯಲ್ಲಿ ಸ್ಥಿರವಾಗಿ ನಿಲ್ಲಬಲ್ಲ ಶಬ್ದಗಳೆಂದರೆ ಸರ್ವನಾಮಗಳು. ಭಾಷೆಯ ಯಾವುದೇ ಅಂಗ ಬದಲಾಗಬಹುದು. ಆದರೆ ಸರ್ವನಾಮಗಳು ಮಾತ್ರ ಬದಲಾಗುವುದಿಲ್ಲ. ಅಲ್ಲದೆ ಎರಡು ಭಾಷೆಗಳ ಪರಸ್ಪರ ಸಂಬಂಧವನ್ನು ಕಲ್ಪಿಸುವ ಶಕ್ತಿ ಈ ಸರ್ವನಾಮಗಳಿಗಿದೆ. ಈ ದೃಷ್ಟಿಯಿಂದ "ಸರ್ವನಾಮಗಳು ಭಾಷೆಯ ಅಚಲವಾದ ಅಭೇದ್ಯವಾದ ಭಾಗಗಳು."[೨]

'ಸರ್ವಾದೀನಿ ಸರ್ವನಾಮಾನಿ' ಎಂದಿರುವುದರಿಂದ 'ಸರ್ವ'ದಿಂದ ಪ್ರಾರಂಭವಾಗುವ ಶಬ್ದಗಳು ಸರ್ವನಾಮಗಳು. 'ಸರ್ವೇಷಾಮ್ ನಾಮಾನಿ ಸರ್ವನಾಮಾನಿ' ಎಂಬ ಇನ್ನೊಂದು ವ್ಯಾಖ್ಯಾಯಿಂದ ನಾಮಪದಗಳಿಗೆ ಬದಲಾಗಿ ಸರ್ವನಾಮಗಳು ಬಳಕೆಯಾಗುತ್ತವೆಂಬರ್ಥ. ಇಂಗ್ಲೀಷಿನಲ್ಲಿ ಸರ್ವನಾಮವೆಂದರೆ, "ನಾಮಪದಗಳಿಗೆ ಬದಲಾಗಿ ಉಪಯೋಗಿಸುವ ಪದಗಳು" ಎಂದರ್ಥ.

"A Pronoun is commonly defined as a word used instead of a Noun"[3] ಅವು ನಾಮಪದಗಳಿಗೆ ಲಿಂಗ, ವಚನ, ವಿ.ಪ್ರ.ಗಳನ್ನು ಪಡೆದುಕೊಳ್ಳ ಬಲ್ಲ ಒಂದು ವರ್ಗಕ್ಕೆ ಸೇರಿದ ಶಬ್ದಗಳೇ. ಇಂಗ್ಲಿಷ್ ಭಾಷೆಯ ಸರ್ವನಾಮಗಳಿಗೆ ಲಿಂಗ ವಿವಕ್ಷೆ ಇಲ್ಲ. ಇದನ್ನೇ "Pronouns agree in gender, number and person, with the nouns for which they stand but may or may not do so in case"[4] ಎಂದಿರುವುದು ಸೂಕ್ತವೇ.

ತಮಿಳು ಗ್ರಂಥವಾದ ತೋಲ್‌ಕ್ಕಾಪ್ಪಿಯಂ ಯೆಂಬಲ್ಲಿ ಸರ್ವನಾಮವೆಂಬ ಪ್ರತ್ಯೇಕ ಭಾಗವಿರದೆ 'ಪೆಯರ್‌ಚ್ಚೊಲ್' ಎನ್ನುವಲ್ಲಿಯೇ ನಾಮಗಳು, ಸರ್ವನಾಮಗಳು, ಸಂಖ್ಯಾವಾಚಿಗಳೂ ಸೇರಿವೆ.

ಈಗ ಕ.ಭಾ.ಭೂ.ದಲ್ಲಿ ಯುಷ್ಮದಾದಿ ವಿಧಾನದ ಹೆಸರಿನಲ್ಲಿ ಹೇಳಿರುವ ಸರ್ವ ನಾಮಗಳನ್ನು ಪರಿಶೀಲಿಸಬಹುದು.

**ಸೂತ್ರ:** " ನೀನಾನ್ ತಾನಃ ಪ್ರಥಮಾ ವಿಭಕ್ತೌ ನಿನೆನ್‌ತಾನಾಂ" (ಸೂತ್ರ ೯೨) (ನಿನ್, ಎನ್, ತನ್-ಎಂಬಿವುಗಳಿಗ ಪ್ರಥಮಾ ವಿಭಕ್ತಿ ಪರವಾದರೆ ಅವು ಕ್ರಮವಾಗಿ ನೀನು, ಆನು, ತಾನು-ಎಂಬ ಸರ್ವನಾಮ ರೂಪ ತಾಳುತ್ತವೆ). ಉದಾ ನಿನ್ > ನೀನ್ (ನೀಂ); ಎನ್ > ಆನ್ (ಆಂ), ತನ್ > ತಾನ್ (ತಾಂ). ನೀನ್, ಆನ್, ತಾನ್ ಎಂಬ ಹಳಗನ್ನಡ ಸರ್ವನಾಮಗಳು ಹೊಸಗನ್ನಡದಲ್ಲಿ ನೀನು, ನಾನು, ತಾನು- ಎಂದಾಗಿದೆ.

ಉದಾ: ನೀನಿರ್ದಯ್, ಆಂ ಪೋದೆಂ; ತಾಂ ಬಂದಂ; ಕಾವ್ಯಾವಲೋಕನದಲ್ಲಿಯೂ ಇಂಥ ಉದಾಹರಣೆಗಳಿವೆ.

**ಸೂತ್ರ:** "ನಿನಎನತನಾಶ್ಚ ತುರ್ಥ್ಯಾಂ ತೃತೀಯತ್ವಚಾಸ್ಯಃ" (ಸೂತ್ರ ೯೩) 'ನಿನ್, ಎನ್, ತನ್- ಎಂಬಿವುಗಳಿಗೆ ಚತುರ್ಥಿಯಲ್ಲಿ ನಿನ, ಎನ, ತನ ಎಂದಾಗಿ ಮುಂದೆ ಚ.ವಿ.ಪ್ರ.ಗಳಾದ, ಕೆ,ಗೆ, ಪಡೆದು ನಿನಗೆ, ಎನಗೆ, ತನಗೆ ಎಂಬ ರೂಪವನ್ನು ಪಡೆಯುತ್ತವೆ.

ನಿನ್ > ನಿನ > ನಿನಗೆ          ನಿನಗೆ ಕೂರನ್ (ಕಾವ್ಯಾವಲೋಕನ)

ಎನ್ >ಎನ > ಎನಗೆ          ಎನಗೆ ಕೂರ್ಪುದನ್ (ಕಾವ್ಯಾವಲೋಕನ)

ತನ್ > ತನ > ತನಗೆ          ತನಗೆ ಮೇಗಿನಿಸುಂ (ಕಾವ್ಯಾವಲೋಕನ)

ಸೂತ್ರ: "ದ್ವಿ ಬಹುತ್ವೋರ್ನಸ್ಯ ಮಃ" (ಸೂತ್ರ ೯೪)

(ನಿನ್, ಎನ್, ತನ್- ಎಂಬಿವುಗಳಿಗೆ ದ್ವಿ, ಬಹುವಚನಗಳಲ್ಲಿ ನಕಾರಕ್ಕೆ ಮಕಾರ ಬರುತ್ತದೆ).

**ಏಕವಚನ:** ನೀನ್, ಆನ್, ತಾನ್ > ನೀನು, ನಾನು, ತಾನು

**ಬಹುವಚನ:** ನೀಮ್, ಆಮ್, ತಾಮ್ > ನೀವು, ನಾವು, ತಾವು

ಚ.ವಿ.ಪ್ರ.'ಗೆ' ಪರವಾದಾಗ: ನಿಮಗೆ, ತಮಗೆ, ಎಮಗೆ; ನಿನ್, ಎನ್, ತನ್‌ಗಳಿಗೆ 'ಗೆ' ಪರವಾಗಿದೆ.

ಷ.ವಿ.ಪ್ರ. 'ಅ' ಕಾರ ಪರವಾದಾಗ: ನಿಮ್ಮ, ಎಮ್ಮ, ತಮ್ಮ

ಸ.ವಿ.ಪ್ರ 'ಒಳ್' ಪರವಾದಾಗ: ನಿಮ್ಮೊಳ್, ಎಮ್ಮೊಳ್, ತಮ್ಮೊಳ್ ನಿನ್, ಎನ್, ತನ್- ಇವುಗಳಿಗೆ ಬಹುವಚನದಲ್ಲಿ 'ಮ್' ಪ್ರತ್ಯಯ ಬರುವುದು. 'ನ್' ಏಕವಚನವಾದರೆ 'ಮ್' ಬಹುವಚನವೆಂದು ತಿಳಿಯುವುದು.

"ದ್ರಾವಿಡ ಭಾಷೆಯ ಎಲ್ಲ ಸರ್ವನಾಮಗಳನ್ನು ೧. ಸರಳ (ಸಾಮಾನ್ಯ), ಸರ್ವನಾಮಗಳೆಂದು, ೨. ಸಾಧಿತ ಸರ್ವನಾಮಗಳೆಂದು ಎರಡು ವರ್ಗಗಳಲ್ಲಿ ವರ್ಗೀಕರಿಸಬಹುದು. ಸರಳ ಸರ್ವನಾಮಗಳನ್ನು ಮತ್ತೆ ಪುರುಷವಾಚಕ, ಆತ್ಮವಾಚಕ ಮತ್ತು ಪ್ರಶ್ನಾರ್ಥಕ ಸರ್ವನಾಮಗಳೆಂದು ಮೂರು ಉಪವರ್ಗಗಳಲ್ಲಿಯೂ, ಪುರುಷವಾಚಕಗಳನ್ನು ಮತ್ತೆ ಉತ್ತಮ, ಮಧ್ಯಮ, ಪ್ರಥಮ ಎಂದು ಮೂರು ಒಳ ವರ್ಗಗಳಲ್ಲಿ ವರ್ಗೀಕರಿಸಿಕೊಳ್ಳಬಹುದು."[೫]

**ಉತ್ತಮ ಪುರುಷ:** (ಎನ್, ಎಮ್)

ಎನ್, ಆನ್, ನಾನ್, ನಾನು- ಎಂಬಿವುಗಳು ಏಕವಚನದ ಉತ್ತಮ ಪುರುಷದ ಸರ್ವನಾಮಗಳು. ಇವು ಪ್ರಥಮೆಯಲ್ಲಿವೆ. ಇವುಗಳು ಎನ್ನ > ಎನ; ನನ್ನ > ನನ; ಎಂದು ಚ.ವಿ.ಪ್ರ.ದಲ್ಲಿ ವರ್ತಿಸುವುವು. ಪರ್ಯಾಯವಾಗಿ ಎನಗೆ, ಎನ್ನಗೆ, ನನಗೆ, ನನ್ನಗೆ- ಎಂದೂ ಆಗುವುವು. ಹ.ಗ. ಭಾಷೆಯಲ್ಲಿ ಇದಕ್ಕೆ 'ಆನ್' ಎಂಬ ರೂಪವಿದೆ. "ಪುರುಷಾರ್ಥ ಸರ್ವನಾಮಗಳು ಅದರಲ್ಲೂ ಉತ್ತಮ ಪುರುಷದ ಪ್ರತ್ಯಯಗಳೇ ಅತ್ಯಂತ ಪ್ರಾಚೀನವೆಂದು ಪ್ರಾಜ್ಞರು ತಿಳಿಸಿರುತ್ತಾರೆ."[೬]

ಉತ್ತಮ ಪುರುಷ ಬ.ವ. ಸರ್ವನಾಮವು ಆಮ್ > ಆಂ ಎಂಬುದು. ಏಕವಚನದಲ್ಲಿ 'ನ್' ಬಹುವಚನದಲ್ಲಿ 'ಮ್' ಆಗಿ ಕಾಣಿಸಿಕೊಂಡಿದೆ. ಆಮ್> ಆಂ ಗಳೇ ಬಹುವಚನವಾಗಿದ್ದಲ್ಲಿ ಕೆಲವೊಮ್ಮೆ ಇದಕ್ಕೆ 'ಗಳ್' ಎಂಬ ಮತ್ತೊಂದು ಬ.ವ. ಪ್ರ.ಸೇರಿಸಿಕೊಂಡು ಹೇಳುವುದುಂಟು. ಉದಾ: ಆಂಗಳ್ > ನಾವುಗಳು ಎಂಬಂತೆ.

**ಪ್ರಥಮ ಪುರುಷ:** (ಅದು, ಇದು, ಉದು)

**ಸೂತ್ರ:** "ಅದು ಇದು ಉದೂ ನಾಮಂತೇ ವತೌ ಪುಂಸಿ" (ಸೂತ್ರ ೯೫) (ಅದು, ಇದು, ಉದು- ಎಂಬಿವುಗಳಿಗೆ ಪುಲ್ಲಿಂಗದಲ್ಲಿ ವಿಭಕ್ತಿಗಳು ಪರವಾದರೆ, ಅಲ್ಲಿ 'ದು' ಕಾರಕ್ಕೆ 'ವ' ಕಾರ, 'ತ' ಕಾರಗಳು ಆದೇಶವಾಗುವುವು).

ಅದು > ಅ (ದು ಲೋಪ)+ ವ (ಆದೇಶ) > ಅವ + ನ್ = ಅವನ್ (ಪುಲ್ಲಿಂಗ ಏಕವಚನ) ಅವನಿಂ, ಅವಂಗೆ, ಅವನತ್ತಣಿಂ, ಅವನ, ಅವನೊಳ್- ಎಂದು ಸಪ್ತ ವಿಧ ವಿಭಕ್ತಿಗಳನ್ನು ಪಡೆಯುವುವು.

ವ > ತ ಆದೇಶವಾದಾಗ 'ಅತಂ' ಎಂದಾಗುವುದು. ಹ್ರಸ್ವ ಸ್ವರ 'ಅ' ತಕಾರಾದೇಶವಾದಾಗ ದೀರ್ಘವಾಗುವುದು (ಸೂ. ೯೭). ಅದು ಎಂಬ ನಪುಂಸಕಲಿಂಗ ಸರ್ವನಾಮದಿಂದ ಪುಲ್ಲಿಂಗವಲ್ಲಿ 'ಅವನ್' ಮತ್ತು 'ಆತಂ'- ಎಂಬ ಸರ್ವನಾಮಗಳು ಸಿದ್ಧಿಸಿವೆ, ಎಂದಿರುವುದು ಗಮನಾರ್ಹ. ಅಂತೆ 'ಇದು' ವಿನಿಂದ ಇವನ್, ಈತಂ, 'ಉದು' ವಿನಿಂದ ಉವನ್ ಮತ್ತು ಊತಂ. ಅದು, ಇದು, ಉದುಗಳಿಗೆ ಹ್ರಸ್ವ ಸ್ವರಗಳಾದ ಅ, ಇ, ಉ ಗಳೇ ಮೂಲವಾಗಿದ್ದು 'ದ' ಪ್ರತ್ಯಯ ಪಡೆದಾಗ ಅವು ನಪುಂಸಕಲಿಂಗ ಸರ್ವನಾಮ ಪದಗಳಾಗುತ್ತವೆ ಎಂಬುದು ಗಮನಿಸಬೇಕಾದ ಸಂಗತಿ.

ಕನ್ನಡ ಭಾಷೆಯಲ್ಲಿ ಬಹುವಚನ ಸರ್ವನಾಮಗಳಲ್ಲಿ ಪುಲ್ಲಿಂಗ ಮತ್ತು ನಪುಂಸಕಲಿಂಗ ಎಂಬ ಎರಡು ಬಗೆಯ ಲಿಂಗ ಸೂಚಕಗಳಾಗಿರುತ್ತವೆ. ಸ್ತ್ರೀಲಿಂಗದಲ್ಲಿ ಬಹುವಚನಕ್ಕೆ ಪ್ರತ್ಯೇಕ ಪ್ರತ್ಯಯ ಕಾಣದು. ಪುಲ್ಲಿಂಗ ಬ.ವ.ವೇ ಸ್ತ್ರೀಲಿಂಗದಲ್ಲಿ ಕೂಡ ಅನ್ವಯಿಸುವುದು. ನಾಗವರ್ಮನು ಮೇಲೆ ಹೇಳಿದ ಆತಂ, ಈತಂ, ಊತಂ-ಗಳು ಕೂಡ ಪ್ರಥಮ ಪುರುಷ ಏಕವಚನ ಸರ್ವನಾಮಗಳೇ ಆಗಿವೆ. ಉದಾ: ಆತಂ ದ್ರೋಣಂ, ಈತಂ ಕುರುರಾಯಂ, ಊತಂ ಅಶ್ವತ್ಥಾಮಂ.

**ಸೂತ್ರ:** "ವಳ್ ಕೇಚ ಸ್ತ್ರೀಯಾಂ" (ಸೂತ್ರ ೯೬) (ಮೇಲಿನಂತೆ ಅದು, ಇದು, ಉದು- ಎಂಬಿವುಗಳಿಗೆ ಸ್ತ್ರೀಲಿಂಗದಲ್ಲಿ 'ದು' ಕಾರಕ್ಕೆ 'ವಳ್' 'ವಳ್' ಗೆ 'ಕೆ' ಎಂಬೆರಡು ಆದೇಶವಾಗುವುವು).

ನಪುಂಸಕಲಿಂಗ ಅದು, ಇದು, ಉದುಗಳಿಂದ ಸ್ತ್ರೀಲಿಂಗದಲ್ಲಿ ಅವಳ್, ಇವಳ್, ಉವಳ್- ಎಂದು ಆಗುವುವು. ಅಲ್ಲದೆ ಅದೇ ಸ್ತ್ರೀಲಿಂಗದಲ್ಲಿ ಆಕೆ, ಈಕೆ, ಊಕೆ- ಎಂಬೀ ಪ್ರಯೋಗಗಳೂ ಉಂಟು.

ಅದು >(ದು ಕಾರಕ್ಕೆ ವಳ್) ಅ + ವಳ್ = ಅವಳ್; ಅಂತೆ ಇವಳ್, ಉವಳ್.

'ವಳ್'ಗೆ ಕೆಲವೊಮ್ಮೆ 'ಕೆ' ಆದೇಶವಾಗುವುದು. ಆಗ ಅ + (ವಳ್)ಕೆ = ಆಕೆ. ಹ್ರಸ್ವ ಅ ದೀರ್ಘ 'ಆ' ಆಗಿದೆ. ಆಕೆ, ಈಕೆ, ಊಕೆ- ಎಂಬಂತೆ. ಅಂತೆ ಪುಲ್ಲಿಂಗದಲ್ಲಿ ಆತ, ಈತ, ಊತ ಪುಲ್ಲಿಂಗದಲ್ಲಿ 'ದು' ಗೆ ಪರವಾಗಿ 'ತ' ಬಂದಿದೆ.

ಕನ್ನಡ ಭಾಷೆಯಲ್ಲಿ ನಾಗವರ್ಮನು ಮೇಲೆ ನಿರೂಪಿಸಿದಂತೆ ಮೂರು ಬಗೆಯ ಪ್ರಥಮ ಪುರುಷ ಸರ್ವನಾಮಗಳು ಇದ್ದಂತೆ ಕಂಡು ಬರುತ್ತದೆ. ಅವುಗಳಲ್ಲಿ ಸಮೀಪವರ್ತಿ, ಮಧ್ಯವರ್ತಿ, ದೂರವರ್ತಿ- ಎಂದು ಮೂರು ರೂಪ. ಅವುಗಳಿಗೆ ನಿರ್ದೇಶಕ ಸರ್ವನಾಮಗಳೆಂದು ಹೆಸರು. ಸಮೀಪವರ್ತಿ, ಸರ್ವನಾಮಗಳನ್ನು, 'ಈ' ಎಂಬ ನಿರ್ದೇಶಕ ಸ್ವರದಿಂದಲೂ ಮಧ್ಯವರ್ತಿ ಸರ್ವನಾಮಗಳನ್ನು 'ಊ' ಎಂಬ ನಿರ್ದೇಶಕ ಸ್ವರದಿಂದಲೂ, ದೂರವರ್ತಿ ಸರ್ವನಾಮಗಳನ್ನು 'ಆ' ಎಂಬ ನಿರ್ದೇಶಕ ಸ್ವರದಿಂದಲೂ ಗುರುತಿಸಿದಂತೆ ತಿಳಿದುಬರುತ್ತದೆ.

ಕನ್ನಡದಲ್ಲಿ ಇವನ್, ಇವಳ್, ಇದು, ಅವನ್, ಅವಳ್, ಅದುಗಳ ಜತೆಗೆ ಉವನ್, ಉವಳ್, ಉದು ಎಂಬುವು ಬಳಕೆಯಾಗಿರುವ ಹಾಗೆ ಬೇರೆ ದ್ರಾವಿಡ ಭಾಷೆಗಳಲ್ಲಿ ಬಳಕೆಯಾಗಿಲ್ಲ. ಆದರೆ ಮೂಲಭೂತವಾಗಿ 'ಉ' ಅಂದರೆ 'ಅನತಿದೂರ' ಅಥವಾ ಮಧ್ಯ ಎನ್ನುವ ಅರ್ಥ- ತಮಿಳು ಮತ್ತು ತೆಲುಗುಗಳಲ್ಲಿದೆ. 'ಉ' ಎಂಬುದರ ವಿವರಣೆಯಲ್ಲಿ ಡ್ರವಿಡಿಯನ್ ಎಟಿಮೊಲಾಜಿಕಲ್ ಡಿಕ್ಷನರಿ ತಮಿಳಿನಲ್ಲೂ ಇದಕ್ಕೆ "base expressing a person, place, or thing occupying an intermediate position neither far nor near" ಎಂಬ ಅರ್ಥವನ್ನು ಕೊಟ್ಟಿದೆ. ತೆಲುಗಿನಲ್ಲೂ 'ಉಲ್ಲಿ' (ಅನತಿದೂರ) ಎಂಬುದಕ್ಕೆ ಪ್ರಾಚೀನ ಕಾವ್ಯ ಪ್ರಯೋಗಗಳಿವೆ. ಆದರೆ ವ್ಯಕ್ತಿನಾಮಗಳಿಗೆ ಪ್ರಯೋಗಗಳಿಲ್ಲ.

ಉದು, ಉವು- ಎಂಬಿವುಗಳು ಸ್ವತಂತ್ರ ಸರ್ವನಾಮಗಳೋ ಅಥವಾ ಅದು, ಅವುಗಳಿಂದ ರೂಪಾಂತರಗೊಂಡವೋ ಎಂಬುದನ್ನು ಹೇಳುವುದು ಕಷ್ಟವೆಂದು ಕನ್ನಡ ಕೈಪಿಡಿಕಾರರು ಸಂಶಯ ಪಟ್ಟಿದ್ದಾರೆ.[೭] ಇದರಬಗ್ಗೆ ಡಾ. ಶಿವಾನಂದರು "ಅದು, ಇದು ಹೇಗೆ ಸ್ವತಂತ್ರವೋ ಹಾಗೆಯೇ ಉದು, ಉವು ಎಂಬಿವು ಕೂಡ ಸ್ವತಂತ್ರ ಸರ್ವನಾಮಗಳೆಂದು ನಿಸ್ಸಂದೇಹವಾಗಿ ಹೇಳಬಹುದು"[೮] ಎಂದಿದ್ದಾರೆ.

ಕಾಲ್ಡ್‌ವೆಲ್‌ರವರು ತಮಿಳು ಮೂಲದ 'ಯಾನ್' ರೂಪವೇ ದ್ರಾವಿಡ ಸರ್ವನಾಮಗಳಿಗೆ ಮೂಲವೆಂದು ಅಭಿಪ್ರಾಯ ಪಟ್ಟಿರುತ್ತಾರೆ.

ಒಟ್ಟಾರೆ ದೂರ, ಸಮೀಪ, ಮಧ್ಯವರ್ತಿ ಸರ್ವನಾಮಗಳಾದ ಅದು, ಇದು, ಉದು ಎಂಬ ಸರ್ವನಾಮಗಳಿಗೆ ಮೂಲತಃ ಅ, ಇ, ಉ ಗಳೇ ಕಾರಣವೆಂದು ತಿಳಿಯಬಹುದು. ಮೂಲದಲ್ಲಿ ಅ,ಇ, ಉ ಸ್ವತಂತ್ರ ಸರ್ವನಾಮಗಳಾಗಿದ್ದವು ಎಂದೂ ಊಹಿಸಲಾಗಿದೆ. ಇವು ಗೌರವ ಸೂಚಕ ಸರ್ವನಾಮಗಳೆಂದು ಇವೇ ಲಿಂಗ ಮತ್ತು ವಚನಗಳಿಗೆ ಅನುಗುಣವಾಗಿ ಬಂದಿವೆ ಎಂದೂ ಊಹಿಸಲಾಗಿದೆ. ಇವು ಕ್ರಮವಾಗಿ ಪುಲ್ಲಿಂಗ ಸೂಚಿ 'ನ್' ಪ್ರತ್ಯಯ ಹಾಗು ಸ್ತ್ರೀಲಿಂಗ ಸೂಚಿ 'ಳ್' ಪ್ರತ್ಯಯ, ಬ.ವ.ದಲ್ಲಿ ಅರ್ ಪ್ರತ್ಯಯ ಬಂದು ಪುರುಷಬೋಧಕ ಸರ್ವನಾಮಗಳಾಗಿರಬೇಕೆಂದು ಊಹಿಸಬಹುದಾಗಿದೆ. ಎಲ್ಲ ದ್ರಾವಿಡ ಭಾಷೆಗಳ ಪರಿಶೀಲನೆಯಿಂದಾಗಿ ಈ ಮಾತನ್ನು ದೃಢೀಕರಿಸಬಹುದು. ಮಧ್ಯವರ್ತಿ ನಿರ್ದೇಶಕ ಸರ್ವನಾಮಗಳ ಬಗ್ಗೆ ಸಂಶೋಧನೆ ಅಗತ್ಯ.

"ನಾಗವರ್ಮನು ತನ್ನ ಸರ್ವನಾಮಗಳ ಪಟ್ಟಿಯಲ್ಲಿ ಆವುದು, ಎಲ್ಲದು, ಪೆಱದು, ಪೆಱತು, ಏನ್ -ಎಂಬಿವುಗಳನ್ನು ಕೊಟ್ಟಿದ್ದರೂ ಇವುಗಳನ್ನು ಕುರಿತು ವಿವರವನ್ನು ಕೊಟ್ಟಿಲ್ಲ."[೯]

ಸರ್ವನಾಮಗಳನ್ನು ಸ್ಥೂಲವಾಗಿ ಹೀಗೆ ವಿಂಗಡಿಸಬಹುದು:

೧. ಪುರುಷ ಬೋಧಕಸರ್ವನಾಮ; ೨. ಸಂಬಂಧ ಸರ್ವನಾಮ; ೩. ಪ್ರಶ್ನಾರ್ಥಕ ಸರ್ವನಾಮ ಮತ್ತು ೪. ವಿಶೇಷ ಸರ್ವನಾಮಗಳು.

ಪುರುಷ ಸರ್ವನಾಮಗಳನ್ನು ಪುನಃ ಹೀಗೆ ವಿಂಗಡಿಸಬಹುದು:

೧. ಸ್ವ- ಪರ ನಿರ್ದೇಶಕ ಸರ್ವನಾಮಗಳು (ನೀನ್, ನಾನ್); ೨. ಪರಗತ ಸರ್ವನಾಮಗಳು (ತಾನ್, ತಾಮ್); ೩. ವಸ್ತು ನಿರ್ದೇಶಕ ಸರ್ವನಾಮಗಳು (ಅದು, ಇದು, ಉದು); ೪. ಪ್ರಶ್ನಾರ್ಥಕ ಸರ್ವನಾಮಗಳು (ಆವಂ, ಏನ್, ಯಾವುದು) ೫. ಸ್ವಾಯತ್ತ ಸರ್ವನಾಮಗಳು (ಎನ್ನದು, ಎನ್ನವು).

ತಾನ್, ತಾಮ್ - ಎಂಬಿವು ಆತ್ಮಾರ್ಥಕ ಸರ್ವನಾಮಗಳು. ಇವುಗಳು ಬಹುಮಟ್ಟಿಗೆ ಪ್ರಥಮ ಪುರುಷದಲ್ಲಿ ಬಳಕೆಯಾಗುವುದನ್ನು ನೋಡುತ್ತೇವೆ. ಉದಾ: ತಾನೇ ತಂದಳು (ಅವಳೇ ಎಂಬ ವತ್ತು). ತಾನೇ ಕಳ್ಳನು (ಅವನೇ ಕಳ್ಳನು), 'ಅವನೇ' ಎಂಬುದು ನಿರ್ದಿಷ್ಟವನ್ನು ತಿಳಿಸುತ್ತದೆ.

ಪ್ರಶ್ನಾರ್ಥಕ ಸರ್ವನಾಮಗಳ ಮೂಲ 'ಯಾ' ದಿಂದ ಬಂದಿರಬೇಕೆಂದು ಕಾಲ್ಡ್‌ವೆಲ್‌ರು ನಿರ್ಣಯಿಸಿದ್ದಾರೆ. ಮೂಲ 'ಯಾ' ಅನೇಕ ಕಡೆ 'ಎ' ಆಗಿ ಪರಿವರ್ತನೆಗೊಂಡಿವೆ.

**ತೆಲುಗು ಸರ್ವನಾಮಗಳು:**

ಕೇತನನು ತನ್ನ ಕೃತಿಯಲ್ಲಿ ಸರ್ವನಾಮಗಳಿಗೆ ಪ್ರತ್ಯೇಕ ಪ್ರಕರಣವನ್ನು ಕಲ್ಪಿಸಲಿಲ್ಲ. ವಿಭಕ್ತಿ ಪ್ರತ್ಯಯಗಳನ್ನು ತಿಳಿಸುವ ಸಂದರ್ಭದಲ್ಲಿಯೇ ಸರ್ವನಾಮಗಳನ್ನು ಪರಿಚಯಿಸಿ ಅನಂತರ ಅವುಗಳ ಮೇಲೆ ಪ್ರತ್ಯಯಗಳನ್ನು ಹತ್ತುವ ಪದ್ಧತಿಯನ್ನು ಹೇಳಿದ್ದಾನೆ. "ಯುಷ್ಮದಸ್ಮತ್ಪದಂಬು ಲೆಱಿಂಗಿಂಚೆದ" ಎಂದು ಪ್ರಾರಂಭಿಸಿ, ಮುಂದಿನ ಪದ್ಯ ೧೦೪ರಿಂದ ೧೦೮ರ ವರೆಗೆ ಎಂದರೆ ಒಟ್ಟು ೫ ಪದ್ಯಗಳಲ್ಲಿ ಸರ್ವನಾಮಗಳ ಬಗ್ಗೆ ವಿವರಿಸಿರುತ್ತಾನೆ. ಕೇತನನಲ್ಲಿ ಸರ್ವನಾಮಗಳ ಸಂಗತಿ ಸಂಕ್ಷಿಪ್ತವಾಗಿ ಬಂದಿದೆ. ಕೆಲವು ಸರ್ವನಾಮಗಳಿಗೆ ಉದಾಹರಣೆಗಳೇ ಇಲ್ಲ. ವಿವರಣೆ ಸಾಲದು. ಅವನು ನಿರೂಪಿಸಿದ ಸರ್ವನಾಮಗಳು ಅದೆಷ್ಟೋ ಬದಲಾವಣೆಯನ್ನು ಹೊಂದಿವೆ. ಇಂದು ಅವುಗಳನ್ನು ಗುರುತಿಸುವಂತಿಲ್ಲ.

ಪದ್ಯ ೧೦೬ರಲ್ಲಿ-

ಎಲಮಿ ನೀವು ಮೀರು ನೇ ನೇಮು ಪ್ರಥಮುಲು
ನಿನ್ನು ಮಿಮ್ಮನಂಗ ನನ್ನು ಮಮ್ಮು
ನನ ದ್ವಿತೀಯ ಲಯ್ಯೆನನಿ ಯುಷ್ಮದಸ್ಮತ್ಪ
ದಮುಲು ದೆಲಿಯ ನೂತ್ನದಂಡಿ ಸೆಪ್ಪೆ.

ಎಂದಿರುವುದರಿಂದ ನೀವು (ನೀನು), ಮೀರು (ನೀವು), ಏನು (ಆನ್> ನಾನು), ಏಮು (ಆಂ>ನಾವು) ಪ್ರಥಮೆಯಲ್ಲಿ ಸರ್ವನಾಮಗಳು. ಅವು ಮಧ್ಯಮ ಪುರುಷ ಮತ್ತು ಉತ್ತಮ ಪುರುಷ ಏಕ ಮತ್ತು ಬಹುವಚನಗಳು. ಅಂತೆ ನಿನ್ನು (ನಿನ್ನ), ಮಿಮ್ಮು (ನಿಮ್ಮ) ಎಂಬಿವು ದ್ವಿತೀಯೆಯಲ್ಲಿ ವರ್ತಿಸುವುವು (ಮಧ್ಯಮ ಪುರುಷ). ಅಂತೆ ನನ್ನು (ನನ್ನನ್ನು), ಮಮ್ಮು (ನಮ್ಮನ್ನು) (ಉತ್ತಮ ಪುರುಷ) ಎಂಬಿವು ಕೂಡ ದ್ವಿತೀಯಾ ವಿಭಕ್ತಿ ಪ್ರತ್ಯಯಗಳನ್ನು ಪಡೆದ ಸರ್ವನಾಮಗಳು.

೧೦೭ನೆಯ ಪದ್ಯದಲ್ಲಿ ತೃತೀಯಾದಿ ವಿಭಕ್ತಿಗಳಲ್ಲಿ ಸರ್ವನಾಮಗಳು ನೀ, ಮೀ ಎಂದು ನಾ, ಮಾ ಎಂದು ಮಾರ್ಪಾಟಾಗುವುದನ್ನು ಕೇತನ ಹೇಳಿದ್ದಾನೆ.

ನೀ ಮೀ ಲಕು ನಾ ಮಾಲಕು
ಧೀ ಮಹಿತಾ ವರುಸತೋ ದೃತೀಯಾದುಲಯಂ

ದೇ ಮಜಿಕ ಚೇತನಾದಿ
ಸ್ತೋಮಂಬಿಡ ನೇಕ ಬಹುವಚೋನಿಯತಿಯಗುನ್.

ಉದಾ: ನೀಚೇ, ನೀಕುನ್, ನೀ ವಲನ್, ನೀ ಧನಂಬು, ನೀ ಯಂದು

ಮೀಚೇ, ಮೀ ಕುನ್, ಮೀವಲನ್, ಮೀ ಧನಂಬು, ಮೀಯಂದು

ಇದೇರೀತಿ ನಾಚೇ, ನಾಕುನ್ ಇತ್ಯಾದಿ
ಮಾಚೇ, ಮಾಕುನ್ ಇತ್ಯಾದಿ

ಕೇತನನು ನಿರೂಪಿಸಿರುವ ಒಟ್ಟು ಯುಷ್ಮದಸ್ಮದರ್ಥಗಳನ್ನು (ವಿಭಕ್ತಿಸಮೇತ) ಹೀಗೆ ಪಟ್ಟಿಮಾಡಬಹುದು:

| ಯುಷ್ಮದರ್ಥಕಗಳು | ಅಸ್ಮದರ್ಥಕಗಳು |
|---|---|
| ನೀವು - ನೀನು (ಕ) | ಏನು - ನಾನು (ಕ) |
| ಮೀರು - ನೀವು | ಏಮು - ನಾವು |
| ನಿನ್ನು - ನಿನ್ನನ್ನು | ನನ್ನು - ನನ್ನನ್ನು |
| ಮಿಮ್ಮು - ನಿಮ್ಮನ್ನು | ಮಮ್ಮು - ನಮ್ಮನ್ನು |
| ನೀಚೇ - ನಿನ್ನಿಂದ | ನಾಚೆ - ನನ್ನಿಂದ |
| ಮೀಚೇ - ನಿಮ್ಮಿಂದ | ಮಾಚೇ - ನಮ್ಮಿಂದ |
| ನೀಕುನ್ - ನಿನಗೆ | ನಾಕುನ್ - ನನಗೆ |
| ಮೀಕುನ್ - ನಿಮಗೆ | ಮಾಕುನ್ - ನಮಗೆ |
| ನೀವಲನನ್ - ನಿನ್ನ ದೆಸೆಯಿಂದ | ನಾವಲನನ್ - ನನ್ನ ದೆಸೆಯಿಂದ |
| ಮೀ ವಲನನ್ - ನಿಮ್ಮ ದೆಸೆಯಿಂದ | ಮಾ ವಲನನ್ - ನಮ್ಮ ದೆಸೆಯಿಂದ |
| ನೀ ಧನಂಬು - ನಿನ್ನ ಧನ | ನಾ ಧನಂಬು - ನನ್ನಧನ |
| ಮೀ ಧನಂಬು - ನಿಮ್ಮ ಧನ | ಮಾ ಧನಂಬು - ನಮ್ಮ ಧನ |
| ನೀಯಂದು - ನಿನ್ನಲ್ಲಿ | ನಾಯಂದು - ನನ್ನಲ್ಲಿ |
| ಮೀಯಂದು - ನಿಮ್ಮಲ್ಲಿ | ಮಾಯಂದು - ನಮ್ಮಲ್ಲಿ |

ಇಲ್ಲಿ ಏನು (ಆನ್ - ನಾನು), ಏಮು (ಆಂ, ನಾವು) ಎಂಬ ರೂಪಗಳಿವೆಯೇ ಹೊರತು ನೇನು (ನಾನು), ಮೇಮು (ನಾವು) ಎಂಬ ರೂಪಗಳಿಲ್ಲ. ಆದರೆ ಉಳಿದ ವಿಭಕ್ತಿಗಳಲ್ಲಿ ನನ್ನು, ಮಮ್ಮು ನಾಚೇ, ಮಾಚೇ ಎಂದು ನೇನು, ಮೇಮುಗಳಿಂದಾದ

ರೂಪಗಳನ್ನು ಕೊಡಲಾಗಿದೆ. ಇವುಗಳ ಜೊತೆಗೆ 'ಮನಮು' (ನೀವು ನಾವು ಸೇರಿದ ಉಭಯಾರ್ಥಕ) ತೆಲುಗಿನಲ್ಲಿದೆ. (ನಾವು ಹೋಗುತ್ತೇವೆ ಎಂದಾಗ 'ಮೇಮು' 'ನಾವು ಹೋಗೋಣ' ಎಂದಾಗ ಮನಮು). ಇದನ್ನು ಕೇತನ ನಿರೂಪಿಸಿಲ್ಲ. ಈ ಸಂದರ್ಭದಲ್ಲೇ ಆತ್ಮಾರ್ಥಕವಾದ 'ತಾನು' ಎಂಬುದನ್ನೂ ಹೇಳಬೇಕಾಗಿತ್ತು. ಅದನ್ನೂ ಕೇತನ ತೆಗೆದುಕೊಂಡಿಲ್ಲ. ಯುಷ್ಮದಸ್ಮದೆಂಬ ಶಬ್ದಕ್ಕೆ ಸರಿಯಾಗಿ ಮಧ್ಯಮಪುರುಷ ಮತ್ತು ಉತ್ತಮ ಪುರುಷಗಳನ್ನು ಮಾತ್ರ ಸ್ವೀಕರಿಸಿದ್ದಾನೆ.

ಕೇತನನ ಕೃತಿಯಲ್ಲಿ ಪ್ರಥಮ ಪುರುಷ ಸರ್ವನಾಮಗಳನ್ನು ಕುರಿತು ಈ ಸಂದರ್ಭದಲ್ಲಿ ವಿವರಣೆ ಇಲ್ಲ. ಆದರೆ ಅಹೋಬಲ ಪಂಡಿತ ಮತ್ತು ಚಿನ್ನಯ ಸೂರಿಯಂಥ ಲಾಕ್ಷಣಿಕರು ಇದನ್ನು ಕುರಿತು ಹೇಳಿರುತ್ತಾರೆ. ವಾಡು, ವೀಡು, ವಾರು, ವೀರು, ಎವರು ಇವು ಪ್ರಥಮೆಯ ಸರ್ವನಾಮಗಳು. ಕನ್ನಡದಲ್ಲಿ ಅವನು, ಇವನು, ಅವರು, ಇವರು, ಯಾರು - ಎಂಬಂತೆ.

ವಾಡು, ವಾರು, ವೀಡು, ವೀರು- ಎಂಬಲ್ಲಿ ಏಕವಚನಕ್ಕೆ 'ಡು' ಮತ್ತು ಬಹುವಚನಕ್ಕೆ 'ರು' ಬಂದಿರುವುದನ್ನು ಗಮನಿಸಬಹುದು. ಇವು ಪ್ರಥಮ ಪುರುಷದ ಏಕ ಮತ್ತು ಬಹುವಚನದ ಪ್ರತ್ಯಯಗಳು.

ಎವಡು, ಎವ್ವಡು, ಎವರು - ಇವು ತೆಲುಗಿನ ಪ್ರಶ್ನಾರ್ಥಕ ಸರ್ವನಾಮಗಳು. ಅಲ್ಲದೆ ಕೊನ್ನಿ, ಅನ್ನಿ, ಎನ್ನಿ, ಇನ್ನಿ- ಎಂಬ ಇಕಾರಾಂತದ ಮತ್ತು ಪೆಕ್ಕು, ಪಲು ಎಂಬ ಉಕಾರಾಂತದ ಸರ್ವನಾಮಗಳು ಸಂಖ್ಯಾವಾಚಕಗಳು. ಅವುಗಳಿಗೆ ಆ -ಈ-ಏ- ನಾ-ನೀ-ಮಾ-ತಾ ಗಳೇ ಮೂಲವಾಗಿರಬೇಕೆಂದು 'ಬಾಲ ವ್ಯಾಕರಣ'ದಲ್ಲಿ ತಿಳಿಸಿದೆ.

ಕೇತನ ಇಲ್ಲಿ ವಿಭಕ್ತಿಗಳನ್ನು ಹೇಳುವಾಗ ಆನುಷಂಗಿಕವಾಗಿ ಯುಷ್ಮದ್ರಾದಿಗಳಿಗೆ ಸೇರುವ ಪ್ರತ್ಯಯಗಳನ್ನು ಹೇಳಿದ್ದಾನೆಯೇ ಹೊರತು, ಸರ್ವನಾಮಗಳನ್ನು ಪ್ರತ್ಯೇಕವಾಗಿ ನಿರೂಪಿಸಲೇ ಬೇಕೆಂಬ ಉದ್ದೇಶ ಅವನಿಗಿಲ್ಲ. ಆದುದರಿಂದ ಈ ಸಂದರ್ಭದಲ್ಲಿ ಪ್ರಥಮ ಪುರುಷದ ನಿರೂಪಣೆ ಇಲ್ಲ. ತತ್ಸಮ ಶಬ್ದಗಳ ವಿಷಯದಲ್ಲಿ ಮತ್ತೆ ಕೆಲವು ತೆಲುಗು ಪದಗಳ ವಿಷಯದಲ್ಲಿ ಪ್ರಥಮೈಕ ವಚನ ಮತ್ತು ಬಹುವಚನ ಹೇಗಿರುತ್ತವೆಂಬುದನ್ನು ನಿರೂಪಿಸುವುದರಿಂದ ಯುಷ್ಮದಸ್ಮದ್ರಾದಿಗಳನ್ನು ಮಾತ್ರ ೧೦೬, ೧೦೭, ೧೦೮, ೧೦೯ ಪದ್ಯಗಳಲ್ಲಿ ವಿವರಿಸಿದ್ದಾನೆ. ಆದರೆ ಬೇರೆ ಸಂದರ್ಭಗಳಲ್ಲಿ ಪ್ರಥಮ ಪುರುಷ ಮತ್ತು ಆತ್ಮಾರ್ಥಕಗಳಿಗೂ ಸ್ವಲ್ಪಮಟ್ಟಿಗೆ ಅವಕಾಶ ಕಲ್ಪಿಸಿಕೊಟ್ಟಿದ್ದಾನೆ.

ಪದ್ಯ ೫೫ರಲ್ಲಿ ಸಂಧಿಗಳನ್ನು ಹೇಳುವಾಗ-

ವಾನಿಗನಿಯೆ ವಾನಿ ಡಕ್ಕರಿ ಜೇಸೆ ಮುಂತಾದ ಸಂದರ್ಭವಲ್ಲಿ 'ವಾಡು' ಎಂಬುದು 'ವಾನಿ' ಆಗುವುದೆಂಬುದು ಸ್ಪಷ್ಟವಾಗದೆ, ಪದ್ಯ ೫೭ರಲ್ಲಿ

ನನುಗನು, ನನ್ನುಂಗನು, ತಾ ಘನುಡು ಮುಂತಾದ ಉದಾಹರಣೆಗಳಲ್ಲಿ ನನು, ನನ್ನು ಮಾತ್ರವಲ್ಲದೆ ತಾನು + ಘನುಡು = ತಾ ಘನುಡು ಆಗುವ ವಿಷಯವನ್ನು ಹೇಳಿದಂತಾಗಿದೆ.

ಪದ್ಯ ೫೯ರಲ್ಲಿ: ನನ್ನುನು, ನಿನ್ನುನು, ತನ್ನುನು ಎಂಬ ಮೂರು ರೂಪಗಳನ್ನು ಕೊಟ್ಟಿದ್ದಾನೆ. 'ತಾನು' ಎಂಬ ದ್ವಿ.ವಿ.ಯಲ್ಲಿ 'ತನ್ನುನು' ಆಗುವುದೆಂದು ಈ ಪದ್ಯದಿಂದ ತಿಳಿದು ಬರುತ್ತದೆ.

ಪದ್ಯ ೬೦, ೬೧ಗಳಿಂದ ತನ್ನೆರುಗು, ತನ್ನುನೆರುಗು, ತನಕೆನಯೆ, ತನಕುನೆನಯ ಮುಂತಾದ ರೂಪಗಳಿರುವುದು ಕಾಣುತ್ತದೆ.

ಪದ್ಯ ೭೦ರಲ್ಲಿ ಪ್ರಥಮ ಪುರುಷ 'ವೀಡು' (ಇವನು) ಎಂಬುದು ಬಹುವಚನವಲ್ಲಿ 'ವೀಂಡ್ರು' 'ವೀರು' 'ವೀರುಲು' ಎಂಬ ಮೂರು ರೂಪಗಳನ್ನು ಪಡೆಯುವುದಾಗಿ ಹೇಳಿದ್ದಾನೆ.

ಇವಲ್ಲದೆ ಆತಡು (ಆತ), ಇಟ್ಟಿವಾಡು (ಇಂಥವನು), ಎಟ್ಟಿವಾಡು (ಎಂಥವನು), ಅಟ್ಟಿವಾಡು (ಅಂಥವನು) ಎಂಬ ಶಬ್ದಗಳನ್ನು (ಪದ್ಯ ೧೭೦) ಹೇಳಿದ್ದಾನೆ. ಇಟ್ಟಿಡು (ಇಂಥವನು), ಎಟ್ಟಿಡು (ಎಂಥವನು), ಅಟ್ಟಿಡು (ಅಂಥವನು) ಎಂಬ ಮೂರು ರೂಪಗಳು ಕೂಡ ಇರುವುದಾಗಿ ಹೇಳಿದ್ದಾನೆ (ಪದ್ಯ ೧೭೦).

ಹೀಗೆ ಇನ್ನು ಕೆಲವು ಸರ್ವನಾಮಗಳನ್ನು ಕೇತನ ಬೇರೆ ಬೇರೆ ಸಂದರ್ಭಗಳಲ್ಲಿ ನಿರೂಪಿಸಿರುವುದು ಗಮನಾರ್ಹ.

**ತೌಲನಿಕ ಸಮೀಕ್ಷೆ:**

೧. ನಾಗವರ್ಮನು 'ಯುಷ್ಮದಾದಿ ವಿಧಾನಂ' ಎಂಬಲ್ಲಿ ಸರ್ವನಾಮಗಳನ್ನು ನಿರೂಪಿಸಿದ್ದಾನೆ. ಅಲ್ಲಿಯ ಸೂತ್ರ ೯೨, ೯೩, ೯೪, ೯೫, ೯೬, ೯೭ರಲ್ಲಿ ಸರ್ವನಾಮಗಳ ಸಮೀಕ್ಷೆ ಇದೆ. ಕೇತನನ ಕೃತಿಯಲ್ಲಿ ಸರ್ವನಾಮಗಳಿಗೆ ಒಂದು ಪ್ರತ್ಯೇಕ ಪ್ರಕರಣವಿಲ್ಲ. ವಿಭಕ್ತಿ ಪ್ರತ್ಯಯಗಳನ್ನು ಕುರಿತು ತಿಳಿಸುವಾಗಲೇ "ಯುಷ್ಮದಸ್ಮತ್ವದಂಬು ಲೆಱಿಂಗಿಂಚೆದ" ಎಂದು ಹೇಳಿ ಯುಷ್ಮದಸ್ಮದರ್ಥಕಗಳನ್ನು ಪರಿಚಯಿಸಿದ್ದಾನೆ. ಅದಕ್ಕಾಗಿ ಅವನು ಬಳಸಿಕೊಂಡ ಒಟ್ಟು ಕಂದ ಪದ್ಯಗಳು ಕೇವಲ ೪.

೨. ನಾಗವರ್ಮ 'ಸರ್ವನಾಮ' ಎಂಬ ಸಂಜ್ಞೆಯನ್ನು ಬಳಸಿದ್ದಾನಾದರೂ (ಸೂತ್ರ ೪೧) ಎಲ್ಲವೂ ಇತ್ಯಾದಿ ಉದಾಹರಣೆಗಳನ್ನು ಕೊಟ್ಟಿದ್ದಾನೆ. 'ನೀಂಗಳ್' ಎಂಬುದು ಮಾತ್ರ ಪುರುಷ ಸರ್ವನಾಮಗಳಲ್ಲಿ ಬಂದಿದೆ. ಯುಷ್ಮದಾದಿ

ಪ್ರಕರಣದಲ್ಲಿ ನಾಗವರ್ಮ ಪುರುಷ ಸರ್ವನಾಮಗಳಿಗೆ ವಿಭಕ್ತಿ ಏರ್ಪಡುವ ರೀತಿಯನ್ನು ಹೇಳಿದ್ದಾನೆ. ಕನ್ನಡಕ್ಕೂ ತೆಲುಗಿಗೂ ಈ ವಿಷಯದಲ್ಲಿ ಹೋಲಿಕೆ ಇದೆ.

೩. ಅದು, ಇದು, ಉದು- ಎಂಬ ನಪುಂಸಕ ಲಿಂಗ ಸರ್ವನಾಮಗಳಿಂದ ಉತ್ತಮ ಪುರುಷ ಮತ್ತು ಮಧ್ಯಮ ಪುರುಷ ಸರ್ವನಾಮಗಳಾದ ನಿನ್, ಎನ್, ತನ್ ಗಳನ್ನು ಸಾಧಿಸಿಕೊಳ್ಳಬಹುದೆಂದು, ಅವು ವಿವಿಧ ವಿಭಕ್ತಿ ಪ್ರತ್ಯಯಗಳನ್ನು ಪಡೆದು ಬೇರೆ ಬೇರೆ ಲಿಂಗ, ವಚನಗಳಿಗನುಗುಣವಾಗಿ ವರ್ತಿಸುವುದಾಗಿ ನಾಗವರ್ಮನು ನಿರೂಪಿಸಿದ್ದಾನೆ. ಕೇತನನು ಹೀಗೆ ಸರ್ವನಾಮಗಳನ್ನು ಸಾಧಿಸುವ ಬಗ್ಗೆ ಏನೂ ಹೇಳಿಲ್ಲ.

೪. ಕನ್ನಡ ಸರ್ವನಾಮಗಳಲ್ಲಿ ವ್ಯಕ್ತಿಯ ನಿರ್ದೇಶನಕ್ಕೆ ಸಮೀಪವರ್ತಿ, ಮಧ್ಯಮವರ್ತಿ, ದೂರವರ್ತಿ ಎಂದು ಮೂರು ರೀತಿಯ ಸರ್ವನಾಮಗಳಿವೆ. ಉದಾ. ಅವನು, ಇವನು ಉವನು; ಆಕೆ, ಈಕೆ, ಊಕೆ; ಅದು, ಇದು, ಉದು - ಎಂಬಂತೆ. ಆದರೆ ತೆಲಗು ಭಾಷೆಯಲ್ಲಿ ಇಂಥ ನಿದರ್ಶನಗಳಿಲ್ಲ. ಅಲ್ಲ ( ಅಲ್ಲಿ-ಕ), ಇಲ್ಲ (ಇಲ್ಲಿ-ಕ), ಉಲ್ಲಿ (ಉಲ್ಲಿ-ಕ) ಎಂಬ ಸ್ಥಾನ ನಿರ್ದೇಶನದಲ್ಲಿ ಮಾತ್ರ ಇಂಥ ನಿರ್ದೇಶಕ ಸರ್ವನಾಮಗಳನ್ನು ಕಾಣುತ್ತೇವೆ. ಉಳಿದ ಕಡೆ ಎಲ್ಲೂ ಕನ್ನಡದಂತೆ ಕಾಣದು. ಇದನ್ನು ಕೇತನನೂ ಹೇಳಿಲ್ಲ.

೫. ಕನ್ನಡದ ಪುರುಷತ್ರಯ ಸರ್ವನಾಮಗಳು ಮತ್ತು ತೆಲುಗಿನ ಸರ್ವನಾಮಗಳು ಹೀಗಿವೆ:

| ಕನ್ನಡ | | ತೆಲುಗು | |
|---|---|---|---|
| ನಾನು<br>ನಾವು | ಉ.ಪುರುಷ | ನೇನು<br>ಮೇಮು | ಉ. ಪುರುಷ |
| ನೀನು<br>ನೀವು | ಮ.ಪುರುಷ | ನೀವು<br>ಮೀರು | ಮ. ಪುರುಷ |
| ಅವನು<br>ಅವರು | ಪ್ರ.ಪುರುಷ | ವಾಡು<br>ವಾರು | ಪ್ರ. ಪುರುಷ |

ಕೇತನನ ಪ್ರಕಾರ ಇವುಗಳಿಗೆ ಏನು, ಏಮು, ವಾರಲು, ವಾಂಡ್ರು- ಎಂಬುವನ್ನು ಸೇರಿಸಿಕೊಳ್ಳಬಹುದು.

೬. ನಿನ್, ಎನ್, ತನ್ ಗಳೇ ಬಹುತೇಕ ಏಕ್ಕ ಸರ್ವನಾಮಗಳ ಮೂಲವೆಂದು ಕನ್ನಡ ವ್ಯಾಕರಣ ತಿಳಿಸಿದರೆ, ತೆಲುಗು ವ್ಯಾಕರಣವು ಕೂಡ ನೀ-ನಾ-ಮೊ-ಮೇಗಳಿಂದ ಉಳಿದ ಸರ್ವನಾಮಗಳನ್ನು ಸಾಧಿಸಿಕೊಳ್ಳುವ ವಿಷಯ ತಿಳಿಸಿವೆ. ಈ ವಿಷಯದಲ್ಲಿ ಹೆಚ್ಚು ಕಡಿಮೆ ಇಬ್ಬರ ನಿಲುವು ಒಂದೇ ಆಗಿದೆ.

೭. ಕನ್ನಡಾದಿ ದ್ರಾವಿಡ ಭಾಷೆಗಳಲ್ಲಿ ಏಕವಚನ ಪುಲ್ಲಿಂಗ, ಸ್ತ್ರೀಲಿಂಗ, ನಪುಂಸಕಲಿಂಗ ಎಂಬ ಮೂರು ಬಗೆಯ ಲಿಂಗ ಸೂಚಕ ಪ್ರತ್ಯಯಗಳಿದ್ದಂತೆ ತೆಲುಗು ಭಾಷೆಯಲ್ಲಿಲ್ಲ. ತೆಲುಗಿನಲ್ಲಿ ಸ್ತ್ರೀಲಿಂಗಕ್ಕೆ ನಪುಂಸಕದ ಅದಿ (ಅದು), ಇದಿ (ಇದು) ಎಂಬುದನ್ನೇ ಬಳಸಲಾಗಿದೆ. ಇದರ ಬಗ್ಗೆ ಕೇತನ ಏನೂ ಹೇಳಿಲ್ಲ.

೮. ನಾಗವರ್ಮನಲ್ಲಿ ಪ್ರಥಮ ಪುರುಷ ನಪುಂಸಕಲಿಂಗ ಹಾಗೂ ಪ್ರಶ್ನಾರ್ಥಕ ಸರ್ವನಾಮಗಳ ವಿವರಣೆ ಇದ್ದರೆ, ಕೇತನನಲ್ಲಿ ಕಾಣದು. ಕೆಲವು ಉದಾಹರಣೆಗಳಿಂದ ಮಾತ್ರ ಅವನ್ನು ತಿಳಿದುಕೊಳ್ಳಬೇಕಾಗಿದೆ.

೯. "ಪ್ರಥಮ ಪುರುಷ ಸರ್ವನಾಮಗಳು ಸ್ಥಾನ ಸೂಚಕಗಳಾದ ಅ, ಇ, ಉ ಎಂಬ ಸ್ವರಗಳಿಂದ ನಿಷ್ಪನ್ನವಾದವು"[೧೦] ಎಂದು ಕಾಲ್ಡ್‌ವೆಲ್ ಸೂಚಿಸಿದ್ದಾನೆ. ವೆಂಕಟಸುಬ್ಬಯ್ಯನವರು "ಅವ್, ಇವ್, ಉವ್, ಎವ್- ಎಂಬಿವು ದ್ರಾವಿಡ ಸರ್ವನಾಮಗಳಿಗೆ ಮೂಲ"[೧೧] ಎಂದು ಹೇಳಿರುತ್ತಾರೆ.

ಒಟ್ಟಿನಲ್ಲಿ ಅ, ಇ, ಉ ಎಂಬ ಸ್ಥಾನ ಸೂಚಕಗಳೇ ಕೆಲವು ಬದಲಾವಣೆಗಳನ್ನು ಪಡೆದು ದ್ರಾವಿಡ ಭಾಷೆಗಳಲ್ಲಿ ಸರ್ವನಾಮಗಳಾಗಿವೆ ಎಂಬುದನ್ನು ತೆಲುಗು, ಕನ್ನಡ ಮತ್ತಿತರ ದ್ರಾವಿಡ ಭಾಷೆಗಳನ್ನು ಅಧ್ಯಯನ ಮಾಡಿದ ವಿದ್ವಾಂಸರ ಅಭಿಪ್ರಾಯವಿದ್ದಂತೆ ತೋರುತ್ತದೆ.

**ತತ್ಸಮ, ತದ್ಭವಾದಿಗಳು** : ಶಬ್ದರೀತಿ ವಿಧಾನವನ್ನು ಹೇಳುವಲ್ಲಿ ಸಂಸ್ಕೃತ ಶಬ್ದಗಳು ಕನ್ನಡದಲ್ಲಿ ಯಾವ ರೂಪವನ್ನು ತಾಳುತ್ತವೆ ಎಂಬುದನ್ನು ನಾಗವರ್ಮ ವಿವರಿಸಿದ್ದಾನೆ.

"ಸ್ತ್ರೀ ಪುಂಸಯೋರ್ವ್ಯತ್ಯಾಸಃ ಕ್ವಚಿತ್" (ಸೂತ್ರ ೯೮) (ಸಂಸ್ಕೃತ ಶಬ್ದಗಳಾದ ಕರುಣಾ, ಅಭಿಲಾಷಾದಿ ಶಬ್ದಗಳು ಕನ್ನಡಕ್ಕೆ ಬರುವಲ್ಲಿ ತಮ್ಮ ಲಿಂಗವನ್ನು ಬದಲಾಯಿಸಿಕೊಳ್ಳುವುವು).

ಉದಾ: ಕರುಣಾ, ಕರುಣಂ, ಪ್ರಯೋಗ: ಕರುಣವಿಲ್ಲದ ಸಿಂಗಮಂ (ಕಾವ್ಯಾ. ಪದ್ಯ ೧೬೪). ಅಂತೆ ಅಭಿಲಾಷೆ, ಉಪತ್ಯಕಂ. ಕಾವ್ಯಾಂ. 'ವಧಾ' ಶಬ್ದವನ್ನು ಸೇರಿಸಿದೆ. ಗ್ರೀವಾದಿಶಬ್ದಗಳು ವಿಕಲ್ಪವೆಂದು ಗ್ರೀವಂ, ಗ್ರೀವೆ ಎಂಬ ಉದಾಹರಣೆಗಳನ್ನು ಕಾವ್ಯಾ. ಕೊಟ್ಟಿದೆ.

"ನಿತ್ಯ ಕಳತ್ರಾಪಾ ನಪುಂಸಕತ್ವ" (ಸೂತ್ರ ೯೯)

(ಕಳತ್ರ ಮೊದಲಾದ ಶಬ್ದಗಳಲ್ಲಿ ನಪುಂಸಕ ಲಿಂಗವೇ ನಿತ್ಯವಾಗಿ ಆಗುತ್ತದೆ)

ಉದಾ: ಇದು ಧರ್ಮ ಕಳತ್ರಂ; ಇದು ಅಪತ್ಯಂ, ಇದು ಕೂಸು

"ಆತೋ ಲಘರೇತ್" (ಸೂತ್ರ ೧೦೦)

ಸಂಸ್ಕೃತದ ಆಕಾರಾಂತ ಪದಗಳು ಕನ್ನಡದಲ್ಲಿ ಹ್ರಸ್ವ ಎಕಾರವನ್ನು ಪಡೆಯುತ್ತವೆ. ಕೆಲವೊಮ್ಮೆ ಹ್ರಸ್ವ ಅಕಾರವು ಕೂಡ ಎತ್ವವನ್ನು ಪಡೆಯುತ್ತದೆ ಎಂಬುದನ್ನು ಶ.ಮ.ದ (ಸೂತ್ರ ೯೩) ಹೇಳುತ್ತದೆ.

೧. ಆ > ಎ ವಸುಧಾ- ವಸುಧೆ

ವನಿತಾ - ವನಿತೆ

ದಯಾ - ದಯೆ

ಚಂದ್ರಿಕಾ - ಚಂದ್ರಿಕೆ

೨. ಅ > ಎ ಅಭಿಲಾಷ - ಅಭಿಲಾಷೆ

ದರ್ಭ - ದರ್ಭೆ

ಉದಾಹರಣ - ಉದಾಹರಣೆ

ಅಂತೆ ಮಾಲೆ, ಶಾಲಾ, ಧಾರಾ, ದ್ರಾಕ್ಷಾ- ಇವುಗಳು ಮಾಲೆ, ಶಾಲೆ, ಧಾರೆ, ದ್ರಾಕ್ಷೆ ಎಂದಾಗುವುವು. ಕಾವ್ಯಾ. ಇದನ್ನು ಬಹುಳವೆಂದಿದೆ. "ಆ ಕಾರಕ್ಕೆ ಲಘೂಕೃತಂ ಮೇಕಾರಂ ಬಹುಳಂ" (ಸೂ. ೩೯).

"ಸಾಮಾನ್ಯವಾಗಿ ಸಂಸ್ಕೃತದಲ್ಲಿ ಆಕಾರಾಂತ ಶಬ್ದಗಳು ಸ್ತ್ರೀಲಿಂಗಗಳಾಗುತ್ತವೆ. ಇವು ಕನ್ನಡಕ್ಕೆ ಬಂದಾಗ ಎಕಾರಾತಗಳಾಗಿಯೋ ಅಕಾರಾಂತವಾಗಿಯೋ ಪರಿವರ್ತನೆ ಗೊಳ್ಳುತ್ತದೆ. ಹೀಗೆ ಪರಿವರ್ತನೆಗೊಳ್ಳುವಾಗ ಕಲವು ಶಬ್ದಗಳು ತಮ್ಮ ಲಿಂಗವನ್ನು ಬದಲಾಯಿಸಿಕೊಳ್ಳುತ್ತವೆ."[೨]

**ಈದೂತೋ ಹ್ರಸ್ವಃ (ಸೂತ್ರ. ೧೦೧)**

(ದೀರ್ಘ ಈಕಾರಾಂತ ಶಬ್ದಗಳಿಗೆ ಹ್ರಸ್ವ ಇಕಾರ ಬರುತ್ತದೆ.) ಉದಾ. ಲಕ್ಷ್ಮೀ- ಲಕ್ಷ್ಮಿ, ನದೀ- ನದಿ, ಸರಸ್ವತೀ- ಸರಸ್ವತಿ. ಅಂತೆ ಊಕಾರಗಳಿಗೆ ಉಕಾರ. ಸರಯೂ- ಸರಯು, ಕುಹೂ- ಕುಹು.

"ನೈಕಾಕ್ಷರ ಪದೇ" (ಸೂತ್ರ ೧೦೨)

(ದೀರ್ಘ ಆ, ಈ, ಊ- ಕಾರಗಳು ಏಕಾಕ್ಷರ ಪದಗಳಾಗಿದ್ದರೆ, ಅವು ಕನ್ನಡದಲ್ಲಿ ಇದ್ದಂತೆ ಇರುವುವು. ಉದಾ ಶ್ರೀ, ಸ್ತ್ರೀ, ಭೂ, ಭ್ರೂ -ಇತ್ಯಾದಿ.

"ಧಾತೋಸ್ತ್ರೃ ಶಬ್ದಸ್ಯ ವಾರಃ" (ಸೂತ್ರ ೧೦೩)

(ಧಾತುವಿನ 'ತೃ' ಶಬ್ದಕ್ಕೆ ವಿಕಲ್ಪದಿಂದ ಆರಾದೇಶವಾಗುತ್ತದೆ.)

ಉದಾ: ಕರ್ತೃ - ಕರ್ತಾರಂ; ಧಾತೃ - ಧಾತಾರಂ, ಭರ್ತೃ- ಭರ್ತಾರಂ, ಹೋತೃ -ಹೋತಾರಂ

"ರಾಂತೋವೇಧಸಿ ವಿಧಾತುಃ" (ಸೂತ್ರ ೧೦೪)

(ಬ್ರಹ್ಮ ಎಂಬ ಅರ್ಥದಲ್ಲಿ ವಿಧಾತೃ ಎಂಬ ಶಬ್ದವು ರಾಂತವಾಗುವುದು).

ಉದಾ: ವಿಧಾತೃ -ವಿಧಾತ್ರಂ.

ಕನ್ನಡ ಭಾಷೆಯಲ್ಲಿ ಋಕಾರವಿಲ್ಲವೆಂದು, ಅದು 'ರು' ಕಾರವನ್ನು ಸ್ವೀಕರಿಸಿ ತದ್ಭವ ಮಾಡಿಕೊಂಡಿರುವುದಾದರೂ ನಾಗವರ್ಮನ ಉದಾಹರಣೆಗಳಲ್ಲಿ ಅನೇಕ ಸ್ಥಿತ್ಯಂತರಗಳನ್ನು ಕಾಣುತ್ತೇವೆ. ಈ ದೃಷ್ಟಿಯಿಂದ ಸಂಸ್ಕೃತದ ಋಕಾರಕ್ಕೆ ಕನ್ನಡದಲ್ಲಿ ಅರ್ ಆದೇಶವಾಗುವುದರ ಬಗ್ಗೆ ಕೆಳಗಿನ ಸೂತ್ರ ಹೇಳುತ್ತದೆ:

"ಅರೋಽ ನ್ಯತ್ರ" (ಸೂತ್ರ ೧೦೫)

ಉದಾ: ಪಿತೃ -ಪಿತರಂ, ಭ್ರಾತೃ - ಭ್ರಾತರಂ

"ಶ್ವಯುವಾಧ್ವನಾಮಾನಃ" (ಸೂತ್ರ ೧೦೬)

(ಶ್ವನ್, ಯುವನ್, ಅಧ್ವನ್ - ಎಂಬೀ ಸಂಸ್ಕೃತದ ವ್ಯಂಜನಾಂತ ಶಬ್ದಗಳು ಕನ್ನಡಕ್ಕೆ ಬರುವಲ್ಲಿ 'ಆ ನ' ಎಂಬುದನ್ನು ಪಡೆಯುತ್ತವೆ.)

ಉದಾ: ಶ್ವನ್- ಶ್ವಾನಂ; ಯುವಾನ್ - ಯುವಾನಂ, ಅಧ್ವನ್ -ಅಧ್ವಾನಂ- ಎಂಬಂತೆ.

**ಪ್ರಯೋಗ:** "ನಾಗವರ್ಮನ ಗುಣವರ್ಮನ ಶಂಖವರ್ಮನಧ್ವಾನಂಗಳ್" (ಕಾವ್ಯಾ. ಪದ್ಯ ೧೮೫)

"ಸಖ್ಯುರಾಯಃ" (ಸೂತ್ರ ೧೦೭)

(ಸಖಿ ಶಬ್ದಕ್ಕೆ 'ಆಯ' ಪ್ರತ್ಯಯ ಬರುವುದು.)

ಉದಾ: ಸಖಿ- ಸಖಾಯಂ. ಆಯ ಪ್ರತ್ಯಯ ಬಂದಿದೆ.

ಮೇಲಿನ ಸೂತ್ರ ೧೦೭ರಲ್ಲಿ ಶ್ವಾನ್, ಯುವಾನ್, ಅಧ್ವನ್ -ಎಂಬಲ್ಲಿ ನಾಗವರ್ಮನ ವಿವರಣೆ ಕೇಶಿರಾಜನಿಗೆ ಭಿನ್ನವಾಗಿದೆ. ಕೇಶಿರಾಜನಾದರೂ "ಶ್ವಾನಃ ಯುವಾಸಿಃ' ಎಂಬ ಸಂಸ್ಕೃತದ ಪ್ರಥಮೆಗಳು ತಮ್ಮ ಕೊನೆಯ ವಿಸರ್ಗವನ್ನು ಕನ್ನಡಕ್ಕೆ ಬರುವಲ್ಲಿ ಕಳೆದು ಕೊಳ್ಳುತ್ತವೆ" ಎಂದಿದ್ದಾನೆ. (ಸೂ. ೯೭)

ಊದಾ: ಶ್ವಾನಃ ಶಾನ; ಯುವಾನಃ -ಯುವಾನ; ಅಧ್ವಾನಃ- ಅಧ್ವಾನ ಎಂದಾಗಿವೆ. ಸಖಿ ಶಬ್ದ ಶ.ಮ.ದ ಪ್ರಕಾರ 'ಸಖ' ಎಂದು ಕೂಡ ಆಗುತ್ತದೆ. "ವನ್ಸ್ಯಯನ್ಸೋರುಪಾಂತ್ಯಸ್ಯ ದೀರ್ಘೋ ವಾ" (ಸೂತ್ರ ೧೦೮) (ವನ್ಸ್, ಯನ್ಸ್ ಪ್ರತ್ಯಯಾಂತಗಳ ಉಪಾಂತಕ್ಕೆ ವಿಕಲ್ಪದಿಂದ ದೀರ್ಘ ಬರುತ್ತದೆ.) ಇದಕ್ಕೆ ಉದಾಹರಣೆಗಳನ್ನು ಮುಂದಿನ ಸೂತ್ರದಲ್ಲಿ ಕೊಡಲಾಗಿದೆ. "ಅದಂತ ತಾ ಚ" (ಸೂತ್ರ ೧೦೯) ಎಂದಿರುವುದರಿಂದ (ವನ್ಸ್ ಯನ್ಸ್ ಪ್ರತ್ಯಯಾಂತಗಳ ಉಪಾಂತಕ್ಕೆ ದೀರ್ಘವಾಗುವಾಗ ಅಕಾರಾಂತತೆಯು ಆಗುತ್ತದೆ).

ಉದಾ: ವಿದ್ವಾಂಸಂ, ಕನೀಯಾಂಸಂ. ೧೦೮ನೆಯ ಸೂತ್ರದಲ್ಲಿ 'ವಾ' ಎಂದಿರುವುದರಿಂದ ಇದು ವಿಕಲ್ಪ.

ಉದಾ: ಜ್ಯಾಯಾಂಸಂ, ಜಾಯಂ; ಶ್ರೇಯಾಂಸಂ, ಶ್ರೇಯಂ

"ವಿರಾಮೇ ವ್ಯಂಜನಸ್ಯ" (ಸೂತ್ರ ೧೧೦)

(ವ್ಯಂಜನಾಂತ ಸಂಸ್ಕೃತದ ಶಬ್ದಗಳಿಗೆ ಕನ್ನಡವಲ್ಲಿ ಅಕಾರ ಬರುವುದು.)

ಉದಾ: ಸಂಪದ್ - ಸಂಪದಂ

ಮರುತ್ - ಮರುತಂ

ವಿಹಾಯಸ್ - ವಿಹಾಯಸಂ

ಕಕುಭ್, ಪಯಸ್, ದಿವ್- ಎಂಬಿವುಗಳು ಕೂಡ ಮೇಲಿನಂತೆ ಕಕುಭ, ಪಯಸ್, ದಿವ ಎಂದು ರೂಪ ತಾಳುವುವು. ಕೆಲವೊಮ್ಮೆ ಅಂತ್ಯ ವ್ಯಂಜನಕ್ಕೆ ಲೋಪಬರುವುದು. ಅದನ್ನು ಮುಂದಿನ ಸೂತ್ರ ಹೇಳುತ್ತದೆ.

"ಲೋಪೋ ವಿಭಾಷಯಾ" (ಸೂತ್ರ ೧೧೧)

ಉದಾ: ಮನಸ್- ಮನಂ; ದಿವಸ್ - ದಿವಂ; ನಭಸ್ -ನಭಂ ಎಂಬಂತೆ ತಿಳಿಯುವುದು.

ಕೆಲವು ವ್ಯಂಜನಾಂತ ಶಬ್ದಗಳು ಉತ್ವದ ದ್ವಿತ್ವವನ್ನು ಪಡೆಯುವುದುಂಟು.

ಉದಾ: ವಾಕ್ - ವಾಕ್ಕು; ದಿಕ್- ದಿಕ್ಕು; ವೀರುತ್ - ವೀರುತ್ತು; ಪರಿಷತ್- ಪರಿಷತ್ತು - ಹೀಗೆ ಸಂಸ್ಕೃತದ ಸ್ವರಾಂತ ಮತ್ತು ವ್ಯಂಜನಾಂತ ಶಬ್ದಗಳು ಕನ್ನಡಕ್ಕೆ ಬರುವಾಗ ಯಾವ ಯಾವ ರೂಪವನ್ನು ತಾಳುತ್ತವೆ ಎಂಬುದರ ಬಗ್ಗೆ ನಾಗವರ್ಮನಂತೆ ಉಳಿದ ಕನ್ನಡದ ವೈಯಾಕರಣರಾದ ಕೇಶಿರಾಜ ಮತ್ತು ಭಟ್ಟಾಕಳಂಕರು ತಿಳಿಸಿರುತ್ತಾರೆ. ಈ ವಿಷಯದಲ್ಲಿ ಎಲ್ಲರ ನಿಲುವು ಹೆಚ್ಚು ಕಡಮೆ ಒಂದೇ. ಸಂಸ್ಕೃತದಿಂದ ಕನ್ನಡಕ್ಕೆ ಬರುವ ಇಂಥ ಶಬ್ದಗಳಿಗಾಗಿ ನಾಗವರ್ಮನು ಬಳಸಿಕೊಂಡಿರುವ ಒಟ್ಟು ಸೂತ್ರಗಳು ೧೪. ಅವು ಸೂತ್ರ ೯೮ ರಿಂದ ೧೧೧ರ ವರೆಗೆ ಹಮ್ಮಿಕೊಂಡಿವೆ.

**ತದ್ಭವಗಳು:**

ಶಬ್ದಗಳ ರೂಪಾಂತರ ವಿಧಾನವು ತದ್ಭವದೊಂದಿಗೆ ಮುಂದುವರಿಯುತ್ತದೆ. ಅನೇಕ ಸಂಸ್ಕೃತ ಶಬ್ದಗಳು ಕನ್ನಡಕ್ಕೆ ಬರುವಾಗ ಅವು ಆದಿ ಅಂತ್ಯಾಕ್ಷರಗಳನ್ನು ಹೇಗೆ ಬದಲಾಯಿಸಿಕೊಳ್ಳುವುವು ಎಂಬುದೇ ತದ್ಭವದ ಮುಖ್ಯ ವಿಷಯವಾಗಿದೆ.

ನಾಗವರ್ಮನು ಕೇಶಿರಾಜನಂತೆ ತದ್ಭವವೆಂದಾಗಲಿ, ಅಪಭ್ರಂಶವೆಂದಾಗಲಿ ಎಲ್ಲೂ ಹೆಸರಿಸಿಲ್ಲ. ಆದರೆ ಅವನು ವಿವರಿಸಿದ ರೀತಿಯನ್ನು ನೋಡಿದರೆ ತದ್ಭವದ ಕಲ್ಪನೆ ಅವನಲ್ಲಿತ್ತು ಎಂದು ತಿಳಿದುಬರುತ್ತದೆ. ತದ್ಭವ ಶಬ್ದದ ಬಳಕೆ ತೀರಾ ಇತ್ತೀಚಿನದು. ಕೇಶಿರಾಜನಿಂದಲೇ ಆ ಶಬ್ದದ ಹೆಸರು ಅಸ್ತಿತ್ವಕ್ಕೆ ಬಂದಿತ್ತೆನ್ನಬಹುದು.

"ಶಷಯೋಃ ಸಃ" (ಸೂತ್ರ ೧೧೬)

(ಸಂಸ್ಕೃತ ಶಬ್ದಗಳ ಶ,ಷ ಕಾರಗಳಿಗೆ ಕನ್ನಡದಲ್ಲಿ ಸಕಾರವು ಬರುವುದು.) ಉದಾ: ಶಶಿ- ಸಸಿ; ಶೇಷ-ಸೇಸ; ಶಿಶು-ಸಿಸು; ಮಷಿ-ಮಸಿ, ಎಂಬಂತೆ. ಶ.ಷಕಾರಗಳು ಸಂಸ್ಕೃತಾಕ್ಷರಗಳು. ಅವು ಕನ್ನಡ ಜಾಯಮಾನಕ್ಕೆ ಒಗ್ಗವು. ಕಾರಣ ವೈಯಾಕರಣರು ಅವುಗಳನ್ನು ಬಿಟ್ಟು ವ್ಯವಹರಿಸಬಹುದೆಂದು, ಶ, ಷಕಾರಗಳಿಗೆ ಬದಲಾಗಿ 'ಸ' ಕಾರವು ಸಾಕೆಂದು ಅಭಿಪ್ರಾಯಪಟ್ಟಿದ್ದಾರೆ. ಇದು ಜನ ವ್ಯವಹಾರದ ಆಧಾರದ ಮೇಲೆ ರೂಪುಗೊಂಡ ಸೂತ್ರವೆನಿಸುತ್ತದೆ.

"ರೇಫ ಸಂಯೋಗೇ ತದಂತರೇ ತ್ವಿಃ" (ಸೂತ್ರ ೧೧೭)

ರೇಫ ರಕಾರವು ಕ್ಷಕಾರದಿಂದ ಕೂಡಿದ್ದು ಅದು ಸಂಯುಕ್ತಾಕ್ಷರವಾಗಿದ್ದರೆ, ಆ ರಕಾರ ಮತ್ತು ಕ್ಷಕಾರಗಳ ಮಧ್ಯದಲ್ಲಿ ಇತ್ವ ಪ್ರಾಪ್ತಿಸುವುದು. ಉದಾ: ಪರಿಸಂ, ಸಿರಿ, ಹರಿಸಂ, ಬರಿಸಂ, ಸರಿಸಪಂ.

ಮೇಲಿನ ಶ್ರೀ, ಹರ್ಷ, ವರ್ಷ- ಎಂಬಲ್ಲಿ ರೇಫೆ ಮತ್ತು ಷಕಾರದಿಂದ ಕೂಡಿದ್ದು ಸಂಯುಕ್ತಾಕ್ಷರವಾಗಿದೆ. ಅವು ಕನ್ನಡದಲ್ಲಿ 'ಸ' ಕಾರವನ್ನು ಪಡೆದಿವೆ.

"ಹತಾರಸ್ನೇಃ" (ಸೂತ್ರ ೧೧೮)

(ರ ಕಾರ ಹಕಾರ ಸೇರಿದ ಸಂಯುಕ್ತಾಕ್ಷರವಾಗಿದ್ದರೆ, ಆ ರ, ಹ ಕಾರಗಳಿಗೆ ಮಧ್ಯದಲ್ಲಿ ಉಕಾರ ಪ್ರಸ್ತಾಪಿಸುತ್ತದೆ.) ಉದಾ: ಅರ್ಹಂ - ಅರುಹಂ; ಬರ್ಹಂ-ಬರುಹಂ; ಅರ್ಹತಂ- ಅರುಹಂತಂ; ಗಾರ್ಹಪತ್ಯಂ- ಗಾರುಹಪತ್ಯಂ- ಈ ಮೊದಲಾದುವು.

ೞ ಕಾರ: "ಪದವಿಧೌಡಸ್ಯ ವ್ಯಂಜನೇಷು" (ಸೂತ್ರ ೧೧೯)

(ಸಮಾಸ ಪದಗಳಲ್ಲಿ ವ್ಯಂಜನಗಳು ಪರವಾದರೆ ಡಕಾರಕ್ಕೆ ೞಕಾರವು ಬರುವುದು.)

ಉದಾ: ಕಾೞ್ಪುರಂ, ಕಾೞ್ಕಿಚ್ಚು, ನಾೞ್ಗಿರಣಂ, ನಾೞ್ಕಡೆ, ಕೋೞ್ಕುಟ್ಟು

"ಅತಿಟಃ" (ಸೂತ್ರ ೧೨೦)

(ಆ ಡ ಕಾರಕ್ಕೆ 'ಅ' ಪ್ರತ್ಯಯ ಪರವಾದಾಗ 'ಟ'ಕಾರವಾಗುವುದು.)

ಉದಾ: ಆಡು- ಆಟಂ; ಅಂತೆ ನೋಟಂ, ಮಾಟಂ, ಬೇಟಂ, ಕೂಟಂ, ಊಟಂ ಕಾಟಂ, ಪಾಟಂ - ಈ ಮೊದಲಾದುವು.

"ೞ ಕಾರಸ್ಯ ರೇಫಃ" (ಸೂತ್ರ ೧೨೧)

(ೞ ಕಾರಕ್ಕೆ ವ್ಯಂಜನ ಪರವಾದರೆ ರ ಕಾರ ಬರುವುದು.)

ಉದಾ: ಮಾರ್ಕಣೆ, ಮಾರ್ಕೊರಲ್, ಮಾರ್ದನಿ, ಮಾರ್ಪಡೆ, ಸೂರ್ಮಡಿ

"ಆದೇ ರೂರಿಃ" (ಸೂತ್ರ ೧೨೨)

ಶಬ್ದದ ಆದಿಯಲ್ಲಿ ಋ ಕಾರವಿದ್ದರೆ ಅದು ಕನ್ನಡದಲ್ಲಿ 'ರಿ' ಕಾರವಾಗುತ್ತದೆ.)

ಉದಾ: ಋಣ - ರಿಣಂ; ಋಷಿ-ರಿಸಿ; ಋತು-ರಿತು ಮೊದಲಾದುವು.

"ಯವಯೋರನಾದಿಸ್ಥಯೋರೈ ಔ ಸ್ವರೇಣ ವಾ" (ಸೂತ್ರ ೧೨೩)

ಆದಿಯಲ್ಲಿಲ್ಲದ ಯಕಾರ, ವಕಾರಗಳು ಸ್ವರದೊಡನೆ ಬೆರೆತಾಗ ವಿಕಲ್ಪದಿಂದ ಐ ಮತ್ತು ಔಗಳು ಬರುತ್ತವೆ).

ಉದಾ: ಕೆಯ್ವಾರಂ, ಕೈವಾರಂ

ಕವುಂಗು, ಕೌಂಗು

ಪಾರಯಿಸಿದಂ, ಪಾರೈಸಿದಂ

ಹೀಗೆ ನಾಗವರ್ಮನ ಸೂತ್ರ ೧೧೬ರಿಂದ ೧೨೩ರ ವರೆಗೆ ತಪ್ಪ
ನಿರೂಪಣೆಯಿದೆ.

ಬಿಂದು ಮೊದಲಾದುವು: "ಮನಯೋರ್ಬಿಂದುಃ" (ಸೂತ್ರ ೧
(ವಿರಾಮದಲ್ಲಿ) ಕೊನೆಯಲ್ಲಿ ಬರುವ ಮ, ನ ಗಳಿಗೆ ಬಿಂದು ಪ್ರಾಪ್ತಿಸುವು

ಉದಾ : ಕುಲಮ್ > ಕುಲಂ; ಜಲಮ್ > ಜಲಂ; ನೀನ್ > ನೀಂ; ಆ
ಆಂ; ತಾನ್> ತಾಂ

ಮಕಾರ ನ ಕಾರಗಳು ಬಿಂದುವನ್ನು ಪಡೆಯುವುದು ತೆಲುಗಿನಲ್ಲೂ ಕೇ
ಕಂಡು ಬಂದಿದೆ. ಇಲ್ಲಿಯ ಉದಾಹರಣೆಗಳನ್ನು ನೋಡಿದರೆ ಅಕಾರಾಂತ ನಪ
ಹಾಗೂ ಪುಲ್ಲಿಂಗ ಶಬ್ದಗಳಲ್ಲಿ ಮಾತ್ರ ಈ ಪ್ರಕ್ರಿಯೆ ಆಗುವಂತಿದೆ. ಬಿಂದು
ಸ್ವತಂತ್ರ ಉಚ್ಚಾರಣೆ ಇಲ್ಲ. ಅದು ಸ್ವರವನ್ನೋ ವ್ಯಂಜನವ
ಆಶ್ರಯಿಸಿಕೊಂಡಿರುತ್ತದೆ.

"ವರ್ಗೇ ತದ್ವರ್ಗಾಂತ್ಯಃ" (ಸೂತ್ರ ೧೧೩)

(ಮ,ನ ಕಾರಗಳಿಗೆ ವರ್ಗೀಯ ವ್ಯಂಜನಾಕ್ಷರಗಳು ಪರವಾದರೆ ಅವು ಸಜಾತಿ
ಪಂಚಮಾಕ್ಷರವನ್ನು ಪಡೆಯುತ್ತವೆ.

ಮ,ನ ಗಳಿಗೆ ವರ್ಗ ಪಂಚಮಾಕ್ಷರ ಬರುವುದು. ಉದಾ:

ಬಿಂಕಂ + ಕೆಟ್ಟಿಂ = ಬಿಂಕ ಙ್ಗೆಟ್ಟಿಂ

ಬಲ್ಪಂ + ಬಿಸುಟಂ = ಬಲ್ಪಮ್ಬಿಸುಟಂ

"ಣೋ ನಸ್ಯ ಣೇನ" (ಸೂತ್ರ ೧೧೪)

(ಣ ಕಾರಕ್ಕೆ ನ ಕಾರ ಪರವಾಗಲು ಆ ನಕಾರ ಣ ಕಾರವಾಗುವುದು).

ಉದಾ : ತಣ್ + ನೆಟಿಲ್ = ತಣ್ಣೆಟಿಲ್. ಅಂತೆ ತಣ್ಣೀರು, ಕಣ್ಣೀರು- ಮೊದಲಾದ

"ಮೇ ಹೋ ವಾ" (ಸೂತ್ರ ೧೧೫)

(ಪ ಕಾರ ಸ್ಥಾನದಲ್ಲಿ ವಿಕಲ್ಪವಾಗಿ ಹಕಾರ ಬರುವುದು.)

ಉದಾ: ಪಲಗೆ -ಹಲಗೆ; ಕಾಪು- ಕಾಹು;

ಪಕಾರ ಹಕಾರವಾಗಿರಲು ನಿಶ್ಚಯ ಕಾರಣವನ್ನು ಹೇಳಲು ಸಾಧ್ಯವಿ
"ಪ್ರಾಕೃತದ ಪ್ರಭಾವದಿಂದಲೇ ಕನ್ನಡದಲ್ಲಿ ಈ ಪರಿವರ್ತನೆ ಪ್ರಾರಂಭವಾಗಿರಬೇಕೆಂ
ಪಂಡಿತರು ತರ್ಕಿಸುತ್ತಾರೆ."[೧೩]

**ತೆಲುಗು ಭಾಷೆಯ ತತ್ಸಮ ತದ್ಭವಗಳು;** ಸಂಸ್ಕೃತ ಪದಗಳನ್ನು ತೆಲುಗಿಗೆ ತರುವ ಪದ್ಧತಿಯನ್ನು ಕೇತನ ತನ್ನ ಕೃತಿಯ ಪದ್ಯ ೨೦ರಲ್ಲಿ ತಿಳಿಸಿರುತ್ತಾನೆ.

ಮುನು ಸಂಸ್ಕೃತ ಪದಮುಲ ಪೈ
ದೆನುಗು ವಿಭಕ್ತುಲು ಘಟಿಂಚಿ ತೇಟ ಪಡಗ ಜೆ
ಪ್ಪಿನ ನದಿ ತತ್ಸಮ ಮನಜನು
ವನಮು ಧನಮು ಪುರುಷ ಡಟಲ ವಸುಮತಿಯನಗನ್॥ (ಪದ್ಯ ೨೦)

ಮೇಲಿನ ಪದ್ಯದಿಂದ ಸಂಸ್ಕೃತ ಪದಗಳ ಮೇಲೆ ತೆಲುಗು ವಿಭಕ್ತಿ ಪ್ರತ್ಯಯಗಳನ್ನು ಸೇರಿಸಲು ಅವು ತತ್ಸಮವಾಗುವುವು ಎಂದು ತಿಳಿದು ಬರುತ್ತದೆ. ಪದವು ವಿಭಕ್ತ್ಯಂತವೇ ಹೊರತು ಪ್ರಾತಿಪದಿಕವಲ್ಲ. ವಿಭಕ್ತಿ ಪ್ರತ್ಯಯ ಸೇರುವುದು ಪ್ರಾತಿಪದಿಕಕ್ಕೆ ಹೊರತು ಪದಕ್ಕಲ್ಲ. ಉದಾ: ರಾಮ ಶಬ್ದವನ್ನು ನೋಡಬಹುದು. ಸಂಸ್ಕೃತ ಪದದ ಪ್ರಾತಿಪದಿಕವಾದ 'ರಾಮ' ಎಂಬುದಕ್ಕೆ ತೆಲುಗು ಪ್ರತ್ಯಯ ಸೇರಿ 'ರಾಮುಡು' ಆಗುವುದು. ಹೀಗೆ ಸಂಸ್ಕೃತ ಪ್ರಾತಿಪದಿಕಗಳನ್ನು ಸ್ವೀಕರಿಸಿ, ಅವುಗಳ ಮೇಲೆ ತೆಲುಗು ವಿಭಕ್ತಿ ಪ್ರತ್ಯಯಗಳನ್ನು ಸೇರಿಸಿ ತತ್ಸಮಗಳನ್ನು ಸಾಧಿಸಿಕೊಳ್ಳುವುದು ತೆಲುಗು ಭಾಷೆಯಲ್ಲಿ ಸರ್ವೇಸಾಮಾನ್ಯ ಪದ್ಧತಿ. ಕೇತನ ಅದನ್ನೇ ಹೇಳಿದ್ದಾನೆ.

ವೃಕ್ಷೇಣ, ದಕ್ಷಾಯ, ಪಕ್ಷಿಭಿಃ ಪುತ್ರಸ್ಯ -ಮುಂತಾದ ವಿಭಕ್ತಿಗಳು, ಅಸ್ತಿ, ಪ್ರಯಾತಿಗಾಯಂತಿ, ಭುಂಕ್ತೇ, ಸಂತಿ, ನಯತಿ, ಸ್ಮರತಿ- ಮುಂತಾದ ಕ್ರಿಯಾಪದಗಳು ಗತ್ವಾ, ಹಸಿತ್ವಾ, ಪ್ರಕಾಶ್ಯ, ಸಂತ್ಯಜ್ಯ - ಇತ್ಯಾದಿ. ತ್ವಾಂತ, ಯಬಂತಗಳು, ಗಂತುಂ, ಪುರೀಂ, ರಿಪುಂ, ಹಂತುಂ, ಸುತಂ, ಪಾತುಂ -ಮುಂತಾದ ತುಮುನ್ನಂತಗಳು ಅಪಿ, ಚ, ತು, ಹಿ, ವೈ, ನ, ವಾ -ಎಂಬೀ ಅವ್ಯಯಗಳು ಸಂಸ್ಕೃತದಿಂದ ತೆಲುಗಿಗೆ ಪ್ರವೇಶ ಮಾಡಬಾರದಾಗಿ ಕೇತನ ಅವುಗಳನ್ನು ನಿಷೇಧಿಸಿದ್ದಾನೆ. (ಪದ್ಯ ೨೯)

ಸಂಸ್ಕೃತ ಪದಗಳ ವಿಸರ್ಜನೀಯ ಮತ್ತು ಅನುಸ್ವಾರ ತೆಲುಗಿನಲ್ಲಿ ನಿಲ್ಲುವುದಿಲ್ಲವೆಂದು ಕೇತನ ಈ ಪದ್ಯದಿಂದ ತಿಳಿಸಿದ್ದಾನೆ.

ಇಲ್ಲ ಸಂಸ್ಕೃತ ಪದಮುಲ ಪೈ
ನೆಲ ಕೊನಿ ನಿಲ್ಚಿನ ವಿಸರ್ಜನೀಯಂಬುಲು ಸು
ನ್ನಲು ನಿಲುವವು ತೆನುಗುಲಲೋ
ನಲ ವಡಗಾ ಬಲ್ಕು ಚೋಟ ನಭಿನವದಂಡೀ॥

(ಆಂ. ಭಾ. ಭೂ. ಪದ್ಯ ೩೦)

ಸಂಸ್ಕೃತದ ಧನ, ಮನ ಮುಂತಾದವು ತೆಲುಗಿನಲ್ಲಿ ನಪುಂಸಕ ಲಿಂಗಗಳಾದುದರಿಂದ 'ಮು' ಪ್ರತ್ಯಯ ಪಡೆದು ಧನಮು, ಮನಮು ಆಗುತ್ತವೆ. ಸಂಸ್ಕೃತದಂತೆ ಧನಂ, ವನಂ ಎಂದಾಗುವುದಿಲ್ಲ.

ಕೇತನಾದಿ ಲಾಕ್ಷಣಿಕರು ಈ ಸಂಪ್ರದಾಯವನ್ನೇ ಸ್ವೀಕರಿಸಿ ಪನ, ( ಪ್ರಾತಿಪದಿಕವನ್ನಾಗಿ ಮಾಡಿಕೊಂಡು ತೆಲುಗು ಪ್ರತ್ಯಯಗಳನ್ನು ಹಚ್ಚಿ, ಧನಮು ಎಂದು ತತ್ಸಮ ಪದಗಳನ್ನಾಗಿ ಮಾಡಿಕೊಂಡಿರುತ್ತಾರೆ.

೩೧ನೆಯ ಪದ್ಯದಲ್ಲಿ ಕೇತನ, "ಏಕಾಕ್ಷರ ಪದಗಳಲ್ಲಿ ಬಿಟ್ಟು ಉಳಿದ ಕೊನೆಯ ಸ್ವರಗಳು ದೀರ್ಘವಾಗಿದ್ದರೆ ಹ್ರಸ್ವವಾಗುವುವು" ಎಂದಿದ್ದಾ ಕನ್ನಡವನ್ನೇ ಹೋಲುತ್ತದೆ. ೩೨ನೆಯ ಪದ್ಯದಲ್ಲಿ "ಏಕಾಕ್ಷರ ಪದಗಳಾದ ಶ್ರೀ ಮುಂತಾದವಲ್ಲಿ ಹೀಗೆ ಹ್ರಸ್ವ ಬರುವುದಿಲ್ಲ" ಎಂದಿದ್ದಾನೆ.

ಸಂಸ್ಕೃತದ ಉಕಾರಾಂತಕ್ಕೆ ವು, ಅಕಾರಾಂತಕ್ಕೆ ಮು, ಪುಲ್ಲಿಂಗದ ಅಂತಗಳಿಗೂ ಬರುವ ಸಂಗತಿಯನ್ನು ೩೩ನೆಯ ಪದ್ಯ ಹೇಳುತ್ತದೆ.

> ತರುವು ತನುವು ಧನಮರ್ಥಮು
> ಗುರುಡು ಪುರುಷುಡುತ್ತಮುಂಡು ಗುಣವಂತುಡು ಸು
> ಸ್ಥಿರ ಮತಿಮಂತುಡು ಯಶಮುನ
> ನರುಡುಗ ಹನುಮಂತುಡನನುದಾಹರಣಂಬುಲ್ (ಆಂ. ಭಾ.ಭ
> ಪದ್ಯ

ಉದಾ : ತರು-ತರುವು, ತನು-ತನುವು; ಧನ-ಧನಮು; ಅರ್ಥ ಪುರುಷವಾಚಿಗಳಾದರೆ ತೆಲುಗು ಪದಗಳ ಕೊನೆಯಲ್ಲಿ 'ಡು' ವರ್ಣ ಬ

ಉದಾ : ಗುರು-ಗುರುಡು; ರಾಮ - ರಾಮುಡು ಇತ್ಯಾದಿ. ಸಂಸ್ಕೃತದ ತೆಲುಗಿನಲ್ಲಿ ವಂತುಡು ಎಂದೂ, ಮಾನ್ ಎಂಬುದಕ್ಕೆ ಮಂತುಡು ಎಂದೂ ( (ಪದ್ಯ ೩೬).

ಉದಾ: ಗುಣವಾನ್ - ಗುಣವಂತುಡು, ಮತಿಮಾನ್-ಮತಿಮಂತು ಹನುಮಾನ್ -ಹನುಮಂತುಡು ಇತ್ಯಾದಿ. ಇದನ್ನೇ ಕೇತನ-

> ವಾನುನಕುನ್ ವಂತುಂಡುನು
> ಮಾನುನಕುನು ಮಂತುಡುನು ಕ್ರಮಂಬುನ ನಗು ಶ
> ಬ್ದಾನೀಕಾಂತನಕಾರಮು
> ಮಾನಿಂಚಿ ವಿಭಕ್ತು ಲೆಕ್ಕು ಮರಿಯೊಕ್ಕೊಕಚೋನ್ (ಪದ್ಯ ೩

ಎಂದಿದ್ದಾನೆ.

ಮುಕಾರಾಂತ ಪದಗಳಲ್ಲಿ ದ್ವಿತ್ವ ವರ್ಣಗಳಾಗಲಿ ಇಲ್ಲವೆ ಬಿಂದು ಬು ವರ್ಣಕವಾಗಲಿ ತೆಲುಗಿನಲ್ಲಿ ಬರುವುವು. ಉದಾ: ಖಗಮು- ಖಗಮ್ಮು- ೩

ಯಕಾರಾಂತ ಪದಗಳನ್ನು ಬಿಟ್ಟು ಉಳಿದೆಡೆಗಳಲ್ಲಿ ಡು-ಎ ಎಂಬಿವು ಪ್ರಥಮ ವಿಭಕ್ತಿ ಪುಲ್ಲಿಂಗದಲ್ಲಿ ಬರುವ ವಿಷಯವನ್ನು ೩೮ನೆಯ ಪದ್ಯ ಹೇಳುತ್ತದೆ. 'ಋ' ಕಾರಾಂತ ಪದಗಳು ಹೋತ, ಧಾತ, ನೇತ, ದಾತ, ಬ್ರಹ್ಮವೇತ್ತ ಮುಂತಾದ ರೂಪಗಳನ್ನು ಧರಿಸುತ್ತವೆ (ಪದ್ಯ ೩೯).

ಗುರುವು ಪ್ರಭುವು ನಾಗ ಗುರುಡು ಪ್ರಭುಂಡನ
ಶರ್ಮ ವರ್ಮ ನಾಗ ಶರ್ಮುಡನಗ
ವರ್ಮುಡನಗ ಜಿಲ್ಲು ಪಟುವುನು ಮನುವುನು
ಬಟುವು ಹುಲಕು ಬಾಸೆ ಪರಗುಚುಂಡು॥ (ಪದ್ಯ ೪೦)

'ಗುರು ಇತ್ಯಾದಿ ಶಬ್ದಗಳಲ್ಲಿ ಉಕಾರಕ್ಕೆ' 'ವು' ಬರುವುದರ ಜೊತೆಗೆ 'ಡು' ಕೂಡ ಬರುತ್ತದೆ. ಗುರುವು-ಗುರುಡು, ಪ್ರಭುವು- ಪ್ರಭುಡು, ಶರ್ಮ ಮುಂತಾದವು 'ಶರ್ಮುಡು' ಎಂದು ಕೂಡ ಆಗುತ್ತದೆ. ಹಾಗೆಯೇ ವರ್ಮ- ವರ್ಮುಡು.

ದ್ವಿಟ್, ವಿತ್, ಭುಕ್ ಎಂಬ ಸಂಸ್ಕೃತ ವ್ಯಂಜನಾಂತ ಶಬ್ದಗಳು ತೆಲುಗು ಭಾಷೆಯಲ್ಲಿ ಬದಲಾವಣೆ ಪಡೆದು ಕೊನೆಯಲ್ಲಿ 'ಡು' ಪ್ರತ್ಯಯವನ್ನು ಪಡೆದಿವೆ.

ಉದಾ : ದ್ವಿಟ್ - ದ್ವಿಷುಡು; ವಿತ್ - ವಿದುಡು; ಭುಕ್ - ಭುಜುಡು 'ದಿಕ್' ಎಂಬ ಪದವು ಮಾತ್ರ 'ದಿಕ್ಕು' ಎಂದಾಗುತ್ತದೆ.

ದ್ವಿಟ್ಪದಮುನಕು ದ್ವಿಷುಡಗು ವಿದ್ವಿಷುಂಡು
ವಿತ್ಪದಮುನಕು ವಿದುಡಗು ವೇದವಿದುಡು
ಭುಕ್ಪದಮುನಕು ಭುಜುಡಗು ಭೂಭುಜುಂಡು
ದಿಕ್ಪದಮುನಕು ಗು ಜ್ಞಗು ದೆಲಿಯುದಿಕ್ಕು (ಪದ್ಯ ೪೧)

ಎಂದಿದ್ದಾನೆ.

ಹೀಗೆ ಕೇತನ ತತ್ಸಮಗಳನ್ನು ಮಾಡುವಾಗ ಮೇಲಿನ ಪದ್ಧತಿಗಳನ್ನು ಅನುಸರಿಸಬೇಕೆಂದು ಕೆಲವನ್ನು ಮಾತ್ರ ಹೇಳಿ ಇನ್ನು ತಿಳಿಯದೇ ಇರುವ ಅನೇಕ ನಿಯಮಗಳಿವೆಯೆಂದು ಅವುಗಳನ್ನು ಕೂಡ ಗ್ರಹಿಸಿ ವ್ಯವಹರಿಸಬೇಕೆಂದು ತಿಳಿಸಿರುತ್ತಾನೆ. ಕೇತನನ ಈ ತತ್ಸಮ ವಿಧಾನವು ಕೇವಲ ದಿಕ್ ಪ್ರದರ್ಶನವೇ ಹೊರತು ಸಮಗ್ರವಲ್ಲ. ತತ್ಸಮ ವಿಧಾನವು ಪದ್ಯ ೨೯ ರಿಂದ ೪೦ರ ವರೆಗೆ ವ್ಯಾಪಿಸಿದೆ.

**ತದ್ಭವಗಳು:** ಕೇತನನು ಆಂಧ್ರ ಭಾಷಾ ಭೂಷಣದ ಪದ್ಯ ೨೧ ಮತ್ತು ೨೨ರಲ್ಲಿ ತದ್ಭವಗಳ ಉದಾಹರಣೆಗಳನ್ನು ಕೊಟ್ಟಿರುತ್ತಾನೆ. ತದ್ಭವಕ್ಕೆ ಲಕ್ಷಣ ಹೇಳುವುದು ಕಷ್ಟವೆಂಬುದನ್ನರಿತು ಕೇತನ ಕೊಟ್ಟಿರುವ ಉದಾಹರಣೆಗಳಿಂದ ತದ್ಭವಗಳಾಗುವ ರೀತಿಯನ್ನು ತಿಳಿಯಬೇಕಾಗಿದೆ. ಪದ್ಯವೊಂದರಲ್ಲಿ-

ಲಚ್ಚಿಯನ ಲಕ್ಕಿ ಪೇರಗು
ನಚ್ಚಂ ಬನ ನಚ್ಚಮುನಕು ನಭಿಧಾನಮು ವಿ
ವ್ವಚ್ಚುಡು ಬೀಭತ್ಸುಡು ವಿ
ದ್ವಚ್ಚಯ ಮನು ನಿಟ್ಟಿ ತೆನುಗು ತದ್ಭವ ಮಯ್ಯೆನ್॥ (ಪದ್ಯ ೨೧)

ಎಂದು ತದ್ಭವದ ಬಗ್ಗೆ ತಿಳಿಸಿದ್ದಾನೆ.

**ಕೇತನನು ಹೇಳಿದ ಕೆಲವು ತದ್ಭವಗಳು ಹೀಗಿವೆ:**

| **ತತ್ಸಮ** | **ತದ್ಭವ** |
|---|---|
| ಅರ್ಘ್ಯಮು | ಅಗ್ಗುವ |
| ಗುಣಮು | ಗೊನಮು |
| ಸ್ನಿಗ್ಧಮು | ಸಿದ್ದಮು |
| ಭಂಗಮು | ಬನ್ನಮು |
| ಭಾಷ | ಬಾಸ |
| ಯಮುಡು | ಜಮುಡು |
| ಆಜ್ಞ | ಆನ |
| ದೋಷಮು | ದೋಸಮು |
| ಮುಖಮು | ಮೊಗಮು |
| ಯಶಮು | ಜಸಮು |
| ಕಾರ್ಯಮು | ಕಜ್ಜಮು |
| ವೈರಮು | ವೇರಮು |
| ದೀರ್ಘಿಕ | ದಿಗ್ಗಿಯ |
| ಕುಲಮು | ಕೊಲಮು |
| ಶ್ರೀ | ಸಿರಿ |
| ದಿಶ | ದೆಸೆ |
| ಯಕ್ಷುಲು | ಜಕ್ಕುಲು |
| ಆಜ್ಞಪ್ತಿ | ಆನತಿ |
| ದ್ಯೂತಮು | ಜೂದಮು |
| ಮುಗ್ಧುಡು | ಮುಗುದುಡು |

| | |
|---|---|
| ಪ್ರಸಾಧನಮು | ಪಸದನಮು |
| ಚರ್ಮಯಷ್ಟಿ | ಸಮ್ಮೆಟ್ಟ |
| ಈರ್ಷ್ಯ | ಈರಸಮು- ಮುಂತಾದವು |

ತೆಲುಗು ವ್ಯಾಕರಣದಿಂದ ತಿಳಿದು ಬರುವ ಇನ್ನೂ ಕೆಲವು ತದ್ಭವಗಳು ಹೀಗಿವೆ:

| **ತತ್ಸಮ** | **ತದ್ಭವ** |
|---|---|
| ಕನ್ಯಾ | ಕನ್ನಿಯ |
| ಸ್ವತ್ವ | ಸೊತ್ತು |
| ಸಂಭ್ರಮ | ಸಂಬರಮು |
| ಸಂತೋಷ | ಸಂತಸಮು |
| ವೀಟಿಕ | ವೀಡ್ಯಮು |
| ಪ್ರಥ್ಯಾ | ಪೊದ್ದು |
| ಕಂಠಮು | ಗೊಂತು |
| ವ್ರೀಹಿ | ಪೈರು |
| ಯಜ್ಞಮು | ಜನ್ನಮು |
| ಶಯ್ಯಾ | ಸೆಜ್ಜ |
| ಶಂಖಮು | ಸಂಕು |
| ಶಿಖಾ | ಸಿಕ, ಸಿಗ |
| ಕಥಾ | ಕತ |
| ಕಾಕಮು | ಕಾಕಿ |
| ಕುದ್ದಾಲಮು | ಗುದ್ದಲಿ |
| ಅರ್ಘಮು | ಅಗ್ಗಮು |
| ಯುವತಿ | ಉವಿದ |
| ನಿಶ್ರೇಣಿ | ನಿಚ್ಚೆನ |
| ಕುಂತಿ | ಗೊಂತಿ |
| ದ್ವೀಪ | ದೀಪ |
| ಮೃತ್ಯು | ಮಿತ್ತಿ |
| ಋಕ್ಷ | ರಿಕ್ಕ |
| ಕ್ರೌಂಚ | ಕೊಂಚ |

| | |
|---|---|
| ಹಂಸ | ಅಂಚ |
| ಪ್ರವಾಳ | ಪವಾಡ |
| ಪ್ಲವ | ಪಡವ |
| ಪತಾಕ | ಪಡಗ |
| ಪೃಥ್ವಿ | ಪುದಮಿ |
| ವೃದ್ಧಿ | ವಡ್ಡಿ |
| ಜಟ | ಜಡ |
| ಕ್ಷೇಮ | ಸೇಮಮು |
| ಕ್ಷಾರ | ಕಾರಮು |
| ಶಾಣ | ಸಾನ |
| ಸಿಂಹಮು | ಸಿಂಗಮು |
| ಕಂಬಳ | ಗೊಂಗಳಿ |
| ರಾತ್ರಿ | ರೇಯಿ |
| ವಕ್ತ್ರ | ವಾಯಿ |
| ಜ್ಞಾನಿ | ಜಾಣ |
| ವೈಶಾಖ | ವೇಸಂಗಿ |
| ಯಜ್ಞಮು | ಜನ್ನಮು |
| ಸಂಧ್ಯಾ | ಸಂಜ |

ಅಚ್ಚ ತೆನುಗು: ತಲ ನೆಲ ವೇಸವಿ ಗುಡಿ ಮಡಿ
ಪುಲಿ ಚಲಿ ಮಡುಗೂರು ಪೇರು ಬೂರುಗು ಮಗವಾ
ಡಲುಕ ಯನಿ ಯೆಲ್ಲವಾರಿಕಿ
ವೆಲಿಸೆಡಿ ಯಾ ಪಲುಕುಲಚ್ಚ ತೆನುಗನಲರಗುನ್।। (ಪದ್ಯ ೨೩)

ಮೇಲಿನ ಪದ್ಯದಲ್ಲಿ ಕೇತನ ಅಚ್ಚ ತೆನುಗು ಬಗ್ಗೆ ಹೇಳಲು ಕೇವಲ ಶಬ್ದಗಳನ್ನು ಉದಾಹರಿಸುತ್ತಾನೆ. ಅಚ್ಚ ತೆನುಗು ಪದಗಳು ಇವು- ನೆಲ, ತಲ, ವೇಸವಿ, ಗುಡಿ, ಮಡಿ, ಪುಲಿಚಲಿ, ಮಡುಗು, ಊರು, ಪೇರು, ಬೂರುಗು, ಮಗವಾಡು, ಅಲುಕ, ಈ ಮುಂತಾದುವು.

ಅಚ್ಚ ತೆನುಗು ಎಂದರೆ ಎಲ್ಲರಿಗೂ ಅರ್ಥವಾಗುವ ಪದಗಳೆಂದು ಕೇತನ ಈ ಪದ್ಯದಲ್ಲಿ ಹೇಳಿದ್ದಾನೆ. ಅಚ್ಚ ತೆನುಗು ಶಬ್ದಗಳೆಂದರೆ ಮಲಿನವಾಗದೇ ಇರುವ, ನಿರ್ಮಲವಾದ ಶಬ್ದಗಳು ಎಂದರ್ಥ.

ಅಚ್ಚ- ನಚ್ಛಂತಿ ವೃಷ್ಟಿಮ್, Clear Pellucid, Transparent, Pure ಎಂದು ನಿಘಂಟುವಿನಲ್ಲ ಹೇಳಲಾಗಿದೆ. ಒಟ್ಟಾರೆ ಭಾಷಾ ವಿಷಯದಲ್ಲಿ ನಿರ್ಮಲವಾದುದು, ದೇಶೀಯ ಉಚ್ಚಾರಣೆಯಲ್ಲಿ ಅನುಕೂಲಕರವಾದುದು, ಸುಲಭವಾದುದು, ಮೃದುವಾದುದು ಎಂದು ಅಚ್ಚ ತೆನುಗು ಶಬ್ದಕ್ಕೆ ಅರ್ಥ ಹೇಳಬಹುದು. ಈ ವಿಭಾಗವನ್ನು ಮೊದಲಿಗೆ ಕಲ್ಪಿಸಿದವನು ಕೇತನನೇ.[೧೪]

ವೇಸವಿ ಶಬ್ದದ ಬಗ್ಗೆ ಅನುಮಾನವಿದೆ. ವೈಶಾಖ ತತ್ಸಮ ಪದವಾಗಿದ್ದು ಅದಕ್ಕೆ ತದ್ಭವ ವೇಸಗಿಯಾಗಿರುವುದು ಎಲ್ಲರಿಗೂ ತಿಳಿದ ಸಂಗತಿ. ಆದರೆ ಕೇತನ ಅದನ್ನು ಅಚ್ಚ ತೆನುಗಿನಲ್ಲಿ ಸೇರಿಸಿದ್ದಾನೆ. ಇದನ್ನು ಕೇಶಿರಾಜನ ಶ.ಮ.ದ.ದ ಅಪಭ್ರಂಶ ಪ್ರಕರಣದಲ್ಲಿ ಕಾಣಬಹುದು.

**ದೇಶ್ಯ ಶಬ್ದಗಳು:**

"ತೇರನಾಡಿನ ದೇಶ್ಯಂಪು ದೆನುಗಯ್ಯೆ" (ಪದ್ಯ ೨೪) ಎಂಬುದರಲ್ಲಿ ಕೇತನ ದೇಶ್ಯ ಶಬ್ದಗಳ ಬಗ್ಗೆ ಹೇಳಿದ್ದಾನೆ. ದೇಶ್ಯ ಶಬ್ದಗಳ ಒಂದು ಪಟ್ಟಿಯನ್ನೇ ಕೊಟ್ಟಿರುತ್ತಾನೆ. "ತೇರನಾಡುಟ" ಎಂದರೆ ಪ್ರಸನ್ನವಾಗಿ, ಪ್ರಶಾಂತವಾಗಿ, ಮೃದುವಾಗಿ, ನಯವಾಗಿ ಮಾತನಾಡುವುದು ಎಂದರ್ಥ. ದೇಶ್ಯ ಶಬ್ದಗಳಿಗೆ ದೇಶಿತೆನುಗು ಎಂದೂ ಹೆಸರು. ದೇಶೀಯ ಪದಗಳು ಕೇಳಲು ಕಿವಿಗೆ ತುಂಬಾ ಇಂಪು. ಕೇತನ ಕೊಟ್ಟ ದೇಶೀಯ ಪದಗಳು (ಪದ್ಯ ೨೪): ಎಱುಕುವ, ನೆತ್ತಮ್ಮಿ, ಎರಗಲಿ, ಎಸಕಮು, ನೊಸಲು, ಇಂತಿ, ತೇಟಿ, ವೆಕ್ಕಸಮು, ನೆಮ್ಮಿ, ಮಕ್ಕುದ, ಚೆಚ್ಚೆರ, ಮಚ್ಚಿಕ, ಪೊಟ್ಟೆಮು, ಕಡಿಮಿ, ವಿಡ್ತೆಜಿ, ಲಗ್ಗು, ಕಲವಲಮು, ವೆನ್ನು ವಿನ್ನದಮು, ವೀನುಲು, ವೆನ್ನಡಿ, ಎಕ್ಕಲಿ, ತಿವುರುಟ, ಉಕ್ಕು, ಮೇಟಿ, ಬಾಗು, ತೊಯ್ಯಲಿ, ಬೋಟಿ, ಪ್ರಸ್ನನ, ಸರಿಜೋಟಿ, ವೇನಲಿ, ಪೊಲಪಮು, ವಿಸ್ನು, ಮನ್ನು, ಎಲ್ಲಿ, ಕೊಱಲುಟ, ವೀಚೋಪು, ಉಲ್ಲಮು, ಉವಿದ, ವೀಕ, ಕಾಟಿಯ, ಗ್ರದ್ದ, ವೇಟ, ಕ್ರೇಣಿ, ಕಾನು, ಪಾಲಿಂಡ್ಲು, ಒಗಿ, ಬೊಗಿ, ಗನಯಮು ತೆಮ್ಮೆರಲು, ಎಲಮಾವಿ, ತೆಲಿಗಸ್ನು, ಕ್ರೊಸ್ನನ, ವಲರಾಜು, ರೇಱುೀಡು, ವಾಲುಗಂಟಿ, ಅಲರುಲಪಿಂಡು, ತೆಕ್ಕಲಿಕಾಡು, ಕ್ರೋವಿಮ್ಮಂಟು, ಕೆಮ್ಮೋವಿ, ಕೆಂಜಾಯ, ಕಮ್ಮತಾವಿ, ಕಡಲಿ, ತಾಮರಕಂಟಿ, ವೆಡವಿಲ್ತುಡು, ಎಡಕಾಡು, ನಲುವ, ನಲುವಕಂಟಿ, ನಾನ, ಸೆಗ್ಗಮು, ಎಲನಾಗ, ಮುದ್ದಿಯ, ಚೆಲುವ, ಚಿಗುರುಬೋಡಿ, ಪದರು, ವಿಸುವುಟ, ಪರಿ, ಗಮಿ, ಪಸಲು, ಅಸಡು, ಪೊದ್ದು, ರೇಯಂಡ, ತಬ್ಬಿಬ್ಬು, ಪೋಟು, ಮುಟ್ಟು, ತನಿವಿ, ವಲವಂತ, ಚೆಂತ, ಮಂತನಮು - ಇತ್ಯಾದಿ.

ಅಚ್ಚ ತೆನುಗು ಉದಾಹರಣೆಗಳ ಜೊತೆಗೆ ಕೆಲವು ತದ್ಭವಗಳನ್ನು ಸೇರಿಸಿ ಹೇಳಿದ್ದಾನೆ. ಮೇಲಿನ ಪದ್ಯದಲ್ಲಿಯ 'ಗ್ರದ್ದ' ಶಬ್ದ 'ಗೃಧ್ರ' ತದ್ಭವವೇ ಆಗಿದೆ. 'ಬ್ರಧ್ನ' ಶಬ್ದದಿಂದ ಪೊದ್ದು ಹುಟ್ಟಿದೆ. ಹಾಗೆಯೇ ಸಂಸ್ಕೃತವ 'ಮಂತ್ರ' ಶಬ್ದ 'ಮಂತನಮು' ಆಗಿದೆ.

ಒಟ್ಟಾರೆ ಕೇತನನ ಉದಾಹರಣೆಗಳನ್ನು ಗಮನಿಸಿದರೆ, ಅವನು ದೇಶ್ಯ ಶಬ್ದಗಳಿಗೆ ಶ್ರವಣ ಸುಭಗತೆಯನ್ನು ಅಚ್ಚ ತೆನುಗು ಪದಗಳಿಗೆ ಸುಲಭಾರ್ಥ ವಿಧಾನವನ್ನೇ ಲಕ್ಷಣವಾಗಿ ಮಾಡಿಕೊಂಡಿರುವಂತೆ ತಿಳಿದುಬರುತ್ತದೆ.

"ಆಂಧ್ರ ಶಬ್ದ ಚಿಂತಾಮಣಿ ಎಂಬ ಕೃತಿಯಲ್ಲಿ ಅಚ್ಚತೆನುಗು, ದೇಶ್ಯ ಶಬ್ದಗಳನ್ನು ಕೂಡಿಸಿ ಒಂದು ವಿಭಾಗವನ್ನು ಮಾಡಲಾಗಿ, ಕೇತನ ಎರಡನ್ನೂ ಬೇರೆ ಬೇರೆ ಮಾಡಿದ್ದಾನೆ.

**ಗ್ರಾಮ್ಯ:**

ಕೇತನನು ಗ್ರಾಮ್ಯದ ಲಕ್ಷಣವನ್ನು ಕೂಡ ಪ್ರತ್ಯಕವಾಗಿ ಹೇಳಿಲ್ಲ. ಆದರೆ ಅವನು ಕೊಟ್ಟ ಉದಾಹರಣೆಗಳಿಂದ ಗ್ರಾಮ್ಯ ಪದಗಳನ್ನು ಗುರುತಿಸಬಹುದು (ಪ. ೨೬).

ಪಂಚಾಕುಮಯ್ಯ ತೋಪಿಂಚಾಕುಮಯ್ಯ, ತಾ
ಟೀ ಪೆಚ್ಚು ತಾರು, ಮಮ್ಮೂದ್ರಲಂಚಿ
ಯೋಗ ಗೊಂಟೂರಮ್ಮು, ಯೇದಾಲು, ವೋದಾಲು,
ದೊ ಸೇಟಿವಾರಾಸಸೇಸುವಾರು,
ವಾಡಿ ವಿರಾಳಿತೋ ಬಾಡಿಗ ಪೋಕುಮಿೊ
ಯೊಡೇಕದಾ ಮಮ್ಮು ಯಿನುತಿನೇಸೆ,
ಪಂಪೇರು, ತೆಂಪೇರು, ಪಾಡೇರು, ಸೂಸೇರು,
ಯಿಂದಾಮು, ಕಂದಾಮು, ಪೊಂದು ಮಿಸ್ತಿ
ಅಟುಕು ದವ್ವ ಪೆಗಡು, ನಘುವಲೆ, ನಿಘುವಲೆ
ನಾಡ, ನೀಡ, ನೇಡ, ನಚ್ಚ, ನಿಚ್ಚ
ನೋಯ, ಗಾಯ, ವೇಯ, ಕುಂಡಾಡು, ಬಾಮ್ಮಡು
ಗದ್ದ, ಗುದ್ದ, ನಾಗ ಗ್ರಾಮ್ಯಮಯ್ಯೆ.

ಗ್ರಾಮ್ಯಗಳೆಂದರೆ ಹಾಸ್ಯೋಕ್ತಿ ಪದಗಳೆಂದು ಕೇತನ ನಿರೂಪಿಸಿದ್ದರೂ, ಉದಾಹರಣೆಗಳನ್ನು ನೋಡುತ್ತಿದ್ದರೆ ಅವು ಹಾಸ್ಯೋಕ್ತಿ ಪದಗಳಲ್ಲ ಎಂದು ತಿಳಿದು ಬಂದಿದೆ. ಅವನು ಹೇಳಿದ ಗ್ರಾಮ್ಯ ಪದಗಳಾದ ಆಡು, ಈಡ, ಏಡ ಎಂಬಿವು ಆ ಕಡೆ, ಈಕಡೆ ಏಕಡೆ ಎಂಬ ಪ್ರಯೋಗಗಳಂತೆ ಕಾಣಬರುತ್ತವೆ. ಏಡ, ಏಕಡ (ಎಕ್ಕಡ) ಶಬ್ದಗಳು ಪ್ರಶ್ನಾರ್ಥಕ ಸರ್ವನಾಮ ಪದಗಳಂತೆ ಗೋಚರಿಸುತ್ತವೆ. ಏಡ ಶಬ್ದ ಗ್ರಾಮ್ಯವಲ್ಲ ಎಂದು ವಿದ್ವಾಂಸರ ಅಭಿಮತ.

"ಇಂದ್ರಾದುಲೇಡ" ಎಂಬ ನನ್ನಯ ಭಾರತದಲ್ಲಿರುವ ಪ್ರಯೋಗ 'ಏಡ' ಎಂಬುದು ಗ್ರಾಮ್ಯವಲ್ಲವೆಂದು ತಿಳಿಸುತ್ತದೆ. ತೆಲುಗು ಲಾಕ್ಷಣಿಕರು ಕೊಟ್ಟ ಪ್ರಯೋಗಗಳಲ್ಲಿ ಹೆಚ್ಚು ಕ್ರಿಯಾಪದಗಳೇ ಆಗಿ ಕಂಡುಬರುತ್ತವೆ. ಇದು ಸರಿಯಲ್ಲ. ಎಲ್ಲ ಭಾಷಾ ಭಾಗಗಳಲ್ಲೂ ಗ್ರಾಮ್ಯ ಪದಗಳಿವೆ.

ಸಾಮಾನ್ಯವಾಗಿ ತೆಲುಗು ಭಾಷೆಯ ಹೆಚ್ಚಿನ ಲಾಕ್ಷಣಿಕರು ಈ ಗ್ರಾಮ್ಯ ಪದಗಳನ್ನು ನಿಷೇಧಿಸಿದರು. ಕೆಲವರು ಮಾತ್ರ ಮಹಾಕವಿಗಳ ಕೆಲವು ಪ್ರಯೋಗಗಳನ್ನು ಒಪ್ಪಿದರು. ಮತ್ತೆ ಕೆಲವರು ಇವು ಭಾಷೆಯ ಅನಿವಾರ್ಯ ಭಾಗವೆಂದು ಒಪ್ಪಿದರು. ಗ್ರಾಮ್ಯ ಪದಗಳನ್ನು ಪುರಸ್ಕರಿಸಿದವರ ಸಾಲಿನಲ್ಲಿ ಕೇತನನೂ ಒಬ್ಬ. 'ಕವಿಜನಾಶ್ರಯ'ದ ಕರ್ತೃ ಇವುಗಳನ್ನು ಸ್ವೀಕರಿಸಲಿಲ್ಲ. 'ತ್ರಿಲಿಂಗ ಶಬ್ದಾನುಶಾಸನ'ದ ಕರ್ತೃ ಗ್ರಾಮ್ಯವನ್ನು ಪೂರ್ಣವಾಗಿ ನಿಷೇಧಿಸಿದ್ದಾನೆ. ಕೇತನನು ಹೇಳಿರುವ ಆಡ, ಈಡ, ಏಡ ಎಂಬ ಪದಗಳಲ್ಲಿ ಪ್ರಶ್ನಾರ್ಥಕ ಗ್ರಾಮ್ಯವಾದ 'ಏಡ' ಎಂಬುದನ್ನು ಮಾತ್ರ ನನ್ನಯ ಸ್ವೀಕರಿಸಿದ್ದಾನೆ.

ಕೇತನನ ಉದಾಹರಣೆಗಳಿಂದ ಕ್ರಿಯಾಪದಗಳಲ್ಲಿ ದೀರ್ಘವನ್ನು ಬಳಸುವುದರಿಂದ'ಯ' ಬದಲಾಗಿ 'ಸ' ಬಳಸುವುದರಿಂದ ವಿಕೃತ ರೂಪಗಳನ್ನು ಬಳಸುವುದರಿಂದ, 'ಟ' ಕಾರಕ್ಕೆ 'ಷ' ಕಾರ ಬಳಸುವುದರಿಂದ, ಪದಾದಿ ಸಂಯುಕ್ತ ರ ಕಾರವನ್ನು ತೆಗೆದು ಬಿಡುವುದರಿಂದ- ಇನ್ನು ಇಂಥ ಕೆಲವು ಬದಲಾವಣೆಗಳಿಂದ ಗ್ರಾಮ್ಯ ಪದಗಳು ಏರ್ಪಡುತ್ತವೆ ಎಂದು ತಿಳಿಯಬಹುದು.

ತೆಲುಗು ಭಾಷೆಗೆ ವ್ಯಾಕರಣವನ್ನು ರಚಿಸಿದ ಪಾಶ್ಚಿಮಾತ್ಯ ವಿದ್ವಾಂಸರಾದ ಸಿ.ಪಿ. ಬ್ರೌನ್ ಸಂತಹವರು ಇದಕ್ಕೆ Rustic Phare ಎಂದು ಕರೆದರು. ಮತ್ತೆ ಕೆಲವರು "Vulgarism'. ಎಂದರು. ಇನ್ನು ಕೆಲವರು "ವಿದ್ಯಾ ವಿವೇಕವಿಲ್ಲದವರು ಉಚ್ಚರಿಸುವ ಅಸಭ್ಯ ಮಾತುಗಳೇ ಗ್ರಾಮ್ಯ" ಎಂದರು. ಒಟ್ಟಾರೆ ಗ್ರಾಮ್ಯವೆಂದರೆ ಅನಾಗರಿಕರ ಅಸಭ್ಯ ವ್ಯವಹಾರವೆಂದು ತಿಳಿಯಲಾಯಿತು. ಹೀಗೆ ಈ ಗ್ರಾಮ್ಯೋಕ್ತಿಗಳು ಅಸಭ್ಯ ಪದಗಳಾಗಿದ್ದು, ರಮಣೀಯಾರ್ಥ ಪ್ರತಿಪಾದಕಗಳು ಅಲ್ಲವೆಂದು ಅವುಗಳನ್ನು ನಿಷೇಧಿಸಲಾಯಿತು. ಕೂಡು (ಕೂಳು); ಬುವ್ವ (ಅನ್ನ), ಅಚ್ಚಿ, ಅಮ್ಮಿ, ಪೆಂಡ್ಲಾಂ (ಹೆಂಡತಿ), ಕೊಂಪ (ಕೊಂಪೆ); ಗೋಡು (ಗೋಳು) - ಈ ಮೊದಲಾದವು ಕಾವ್ಯ ವ್ಯವಹಾರಕ್ಕೆ ಯೋಗ್ಯವಲ್ಲವೆಂದು ಅಥರ್ವಣಾಚಾರ್ಯರು ಭಾವಿಸಿದರು.

ಪಾಮರರು ಪ್ರಯೋಗಿಸುವ ಶಬ್ದವೇ ಗ್ರಾಮ್ಯವೆನಿಸಿಕೊಂಡಿದೆ. ಗ್ರಾಮ್ಯವೆಂದರೆ ಗ್ರಾಮಭವ. ಗ್ರಾಮದಲ್ಲಿಬೆಳೆದಿರುವುದು, ಅನಾಗರಿಕ ಪದ. ಸಂಸ್ಕೃತ, ಪ್ರಾಕೃತ ವ್ಯಾಕರಣ

ಪರಿಭಾಷೆಯಲ್ಲಿ ಗ್ರಾಮ್ಯ ಪದಗಳಿಲ್ಲ. ಹೀಗೆ ತೆಲುಗಿನಲ್ಲಿ ಗ್ರಾಮ್ಯದ ಬಗ್ಗೆ ಹಲವಾರು ಮಾತುಗಳು ಕಂಡು ಬರುತ್ತವೆ. ಅಲಂಕಾರ ಶಾಸ್ತ್ರದಲ್ಲಿ ಇದನ್ನು ಸಂಜ್ಞೆಯಾಗಿ ಬಳಸಿಕೊಂಡಿದ್ದಾರೆ. ಕನ್ನಡ ಭಾಷೆಯಲ್ಲಿ ಪ್ರಾಚೀನ ಲಾಕ್ಷಣಿಕರು ಗ್ರಾಮ್ಯವನ್ನು ಪ್ರಸ್ತಾಪಮಾಡಿಲ್ಲ.

ಸಂಸ್ಕೃತ, ಪ್ರಾಕೃತ ಅಲ್ಲದೆ ಸಹೋದರ ಭಾಷೆಗಳಾದ ಕನ್ನಡ ಭಾಷೆಯಲ್ಲೂ ಕೂಡ ಇಂಥ ಗ್ರಾಮ್ಯ ಪದಗಳು ವ್ಯಾಕರಣಗಳಲ್ಲಿ ಕಾಣದೆ ಇದ್ದಾಗ, ತೆಲುಗು ಭಾಷೆಯೊಂದರಲ್ಲಿ ಮಾತ್ರ ಇದು ಕಾಣುವುದು ಆಶ್ಚರ್ಯ. ಶಿಷ್ಟ ಗ್ರಂಥಸ್ಥ ಭಾಷೆಯನ್ನು ರೂಪಿಸುವಲ್ಲಿ ಆಡು ನುಡಿಯ ಅನೇಕ ಪದಗಳನ್ನು ನಿಷೇಧಿಸಬೇಕೆಂಬ ಅಭಿಪ್ರಾಯದಿಂದ ತೆಲುಗು ವ್ಯಾಕರಣಕಾರರು ಇಂಥ ಪರಿಭಾಷೆಯನ್ನು ಬಳಸಿರಬಹುದು.

ಕೇತನನು ಆಂಧ್ರ ಭಾಷೆಯಲ್ಲಿರುವ ಒಟ್ಟು ಪದಗಳನ್ನು ಸ್ಥೂಲವಾಗಿ (೧) ತತ್ಸಮ, ೨. ತದ್ಭವ, ೩. ಅಚ್ಚತೆನುಗು, ೪. ದೇಶ್ಯಮು, ೫. ಗ್ರಾಮ್ಯ- ಎಂದು ಐದು ವಿಧವಾಗಿ ವಿಂಗಡಿಸಿದ್ದಾನೆ. ಆದರೆ ತತ್ಸಮ ಪದಗಳನ್ನು ಬಿಟ್ಟು ಉಳಿದ ನಾಲ್ಕನ್ನು ಅಚ್ಚ ತೆನುಗು ಎಂಬ ಹೆಸರಿನಲ್ಲೇ ಕರೆಯುತ್ತಾರೆಂದು ಹೇಳಿದ್ದಾನೆ. ಇದರಿಂದ ಅಚ್ಚ ತೆನುಗು ಎಂಬುದೊಂದು ಪ್ರತ್ಯೇಕ ವಿಭಾಗ (ಎಲ್ಲರಿಗೂ ಅರ್ಥವಾಗುವ ಪದಗಳು) ಇದ್ದರೂ ಅದರ ಜೊತೆಗೆ ತದ್ಭವ, ದೇಶಿ, ಗ್ರಾಮ್ಯ ಸೇರಿದಾಗಲೂ ಅದಕ್ಕೆ ಅಚ್ಚ ತೆನುಗು ಎಂದೇ ವ್ಯವಹಾರವೆಂದಂತಾಯಿತು. ಇವುಗಳಲ್ಲಿ ಗ್ರಾಮ್ಯವನ್ನು ಯಾರೂ ಒಪ್ಪುವುದಿಲ್ಲವೆಂದು, ನಿಂದಿಸುವಾಗ ಮಾತ್ರ ಅದನ್ನು ಬಳಸುತ್ತಾರೆಂದು ಹೇಳಿದ್ದಾನೆ (ಪದ್ಯ ೨೭). ಆದರೆ ಅವನು ಕೊಟ್ಟ ಎಲ್ಲ ಉದಾಹರಣೆಗಳು ನಿಂದಾರ್ಥದಲ್ಲಿಲ್ಲ ಎಂದು ಹೇಳಬಹುದು.

ತೆಲುಗು ಭಾಷೆಗೆ ಪ್ರಾಚೀನ ವ್ಯಾಕರಣಗಳಿದ್ದಂತೆ ಶಬ್ದಕೋಶಗಳಿರಲಿಲ್ಲ. ೧೭ನೆಯ ಶತಮಾನದಿಂದ ಈಚೆಗೆ ಮಾತ್ರ ಕೆಲವು ಶಬ್ದಕೋಶಗಳು ಬಂದಿವೆ. ಆಧುನಿಕ ಕಾಲದಲ್ಲಿ ಮಾಮಿಡಿ ವೆಂಕಯ್ಯ, ವಿಲಿಯಂ ಬ್ರೌನ್, ಕ್ಯಾಂಪ್‌ಬೆಲ್, ಸಿ.ಪಿ.ಬ್ರೌನ್, ಸೀತಾರಾಮಾಚಾರ್ಯುಲು - ಈ ಮೊದಲಾದ ವಿದ್ವಾಂಸರು ಕೆಲವು ನಿಘಂಟುಗಳನ್ನು ತಯಾರು ಮಾಡಿದ್ದಾರೆ. ಈ ನಿಘಂಟುಗಳನ್ನು ಪರಿಶೀಲಿಸಿ, ಒಟ್ಟು ತೆಲುಗು ಪದಗಳನ್ನು ವಿದ್ವಾಂಸರು ಹೀಗೆ ವಿಂಗಡಿಸುತ್ತಾರೆ.[೧೫]

| | |
|---|---|
| ತತ್ಸಮ | ೩೫,೦೦೦ |
| ತದ್ಭವ | ೪,೦೦೦ |

| | |
|---|---|
| ದೇಶ್ಯ | ೨೮,೦೦೦ |
| ಅನ್ಯದೇಶ್ಯ | ೮,೦೦೦ |

**ಸಮೀಕ್ಷೆ:**

ಕರ್ನಾಟಕಾಂಧ್ರ ವೈಯಾಕರಣರು ತತ್ಸಮ ವಿಧಾನದಿಂದ ತಮ್ಮ ತಮ್ಮ ಭಾಷೆಗಳ ಪದ ಭಂಡಾರವನ್ನು ಬೆಳಸಿಕೊಳ್ಳಲು ಪ್ರಯತ್ನಿಸಿರುವಂತೆ ತಿಳಿದು ಬರುತ್ತದೆ. ಸಂಸ್ಕೃತ ಭಾಷೆಯ ಪ್ರಭಾವ ಎರಡೂ ಭಾಷೆಗಳ ಮೇಲೆ ಇದ್ದರೂ, ಅದನ್ನು ಪೂರ್ಣ ಪುರಸ್ಕರಿಸಿದಂತಾಗಲಿ ಇಲ್ಲವೇ ತಿರಸ್ಕರಿಸಿದಂತಾಗಲಿ ಕಂಡು ಬರುತ್ತಿಲ್ಲ. ಈ ಕಾರಣದಿಂದಲೇ ಇರಬೇಕು, ಸಂಸ್ಕೃತ ಭಾಷಾ ಪದಗಳು ತಮ್ಮ ತಮ್ಮ ಭಾಷೆಗಳಲ್ಲಿ ಸ್ವೀಕೃತವಾಗುವ ಸಂದರ್ಭದಲ್ಲಿ ಕೆಲವೊಂದು ನಿಯಮಗಳನ್ನು ಕಲ್ಪಿಸಿಕೊಂಡಿರುವುದು. ಅದನ್ನು ತೆಲುಗಿನಲ್ಲಿ ಭಾಷಾ ವಿಭಜನೆಯ ಹಿನ್ನೆಲೆಯಲ್ಲಿ ವ್ಯಕ್ತಗೊಳಿಸಿದರೆ, ಕನ್ನಡದವರು ತತ್ಸಮ ಅಥವಾ 'ಸಮ ಸಂಸ್ಕೃತ' ಲಿಂಗದ ವಿವರಣೆಯಿಂದ ತಿಳಿಯ ಪಡಿಸಿದರು.

ಕೇತನನ ಆಂ. ಭಾ. ಭೂ.ದಲ್ಲಿ ಭಾಷೆಗೆ ಪ್ರತ್ಯೇಕ ವಿಭಜನಾಕ್ರಮವಿದೆ. ೧.ತತ್ಸಮ, ೨. ತದ್ಭವ, ೩. ಅಚ್ಚತೆನುಗು, ೪. ದೇಶ್ಯ ೫. ಗ್ರಾಮ್ಯವೆಂಬ ವಿಭಾಗ ಕ್ರಮದ ಹಿನ್ನೆಲೆಯಲ್ಲಿ ತೆಲುಗುತನವನ್ನು ಕಾಣಬಹುದಾಗಿದೆ. ಕನ್ನಡ ಭಾಷೆಯಲ್ಲಿ ಇಂಥ ವಿಭಾಗಕ್ರಮ ಪ್ರತ್ಯೇಕವಾಗಿ ಇಲ್ಲದೇ ಇದ್ದಾಗಲೂ ನಾಗವರ್ಮ ಮತ್ತು ಕೇಶಿರಾಜರಲ್ಲಿ ೧. ತತ್ಸಮ; ೨. ತದ್ಭವ; ೩.ದೇಶ್ಯ ಶಬ್ದಗಳ ವಿಭಜನಾಕ್ರಮ ಕಂಡು ಬಂದು ಸಂಸ್ಕೃತದಿಂದ ಕನ್ನಡ ಭಾಷೆ ಬೇರೆ ಎಂಬರ್ಥ ಬರುತ್ತದೆ.

೧. ಕೇತನನು ಸಂಸ್ಕೃತ ಪದಗಳನ್ನು ತೆಲುಗಿಗೆ ತರುವಲ್ಲಿ ಒಂದು ವಿಧಾನವನ್ನು ಅನುಸರಿಸಿದ್ದಾನೆ. ಸಂಸ್ಕೃತ ನಾಮ ಪದಗಳ ಮೇಲೆ ತೆಲುಗು ವಿಭಕ್ತಿಗಳನ್ನು ಸೇರಿಸಿ ತೆಲುಗು ಪದಗಳನ್ನು ಸಿದ್ಧಿಸಿಕೊಳ್ಳಬಹುದೆಂದು ಧನಂ, ವನಂ, ಪುರುಷುಡು- ಇತ್ಯಾದಿ ಉದಾಹರಣೆಗಳನ್ನು ಕೊಟ್ಟಿರುತ್ತಾನೆ. ಈ ಪದ್ಧತಿ ಕನ್ನಡದ ನಾಗವರ್ಮ ಹಾಗೂ ಕೇಶಿರಾಜರಲ್ಲೂ ಕಾಣುತ್ತೇವೆ. ಉದಾ: ರಾಮಂ, ಮರಂ, ಸಂಸ್ಕೃತದ ಪದಗಳು ಕನ್ನಡಕ್ಕಾಗಲಿ ಇಲ್ಲವೆ ತೆಲುಗಿಗಾಗಲಿ ನೇರವಾಗಿ ಬರುವಂತಿಲ್ಲ. ಅವು ಮೊದಲು ಸಮಸಂಸ್ಕೃತ ಲಿಂಗವಾಗಬೇಕು. ಅನಂತರ ತಮ್ಮ ತಮ್ಮ ಪ್ರತ್ಯಯಗಳನ್ನು ಪಡೆಯಬೇಕು. ಹೀಗೆ ಸಂಸ್ಕೃತ ಭಾಷಾ ಪದಗಳು ನೇರವಾಗಿ ಆ ಭಾಷೆಗೆ ಬರದೆ ಕೆಲವೊಂದು ನಿಯಮಗಳಿಗನುಗುಣವಾಗಿ ದೀಕ್ಷೆ ಪಡೆದು ಅನಂತರ ಕನ್ನಡವೋ ತೆಲುಗೋ ಆಗಬಹುದು. ಹೀಗೆ ಅದಂಥ

'ತತ್ಸಮ' ಅಥವಾ 'ಸಮ ಸಂಸ್ಕೃತಲಿಂಗ' ವಿಧಾನದ ಪದಗಳನ್ನು ಅಚ್ಚಗನ್ನಡ ಅಥವಾ ಅಚ್ಚ ತೆಲುಗಿನ ಭಾಷಾ ಶಬ್ದಗಳೊಂದಿಗೆ ಸೇರಿಸಿ ಸಮಾಸ ಮಾಡಬಾರದು. ಇಂಥ ಅರಿಸಮಾಸ ಎರಡೂ ಭಾಷೆಗಳಲ್ಲೂ ನಿಷಿದ್ಧ. ಆದರೆ ಕೇಶಿರಾಜ ಈ ನಿಯಮವನ್ನು ಸಡಿಲಗೊಳಿಸಿ ಕೆಲವೊಂದು ಪದಗಳಲ್ಲಿ (೨೧ ಪದಗಳು ಮಾತ್ರ) ಅರಿಸಮಾಸಕ್ಕೆ ದೋಷವೆಂದಿದ್ದಾನೆ. ಅರಿಸಮಾಸ ತೆಲುಗು ಭಾಷೆಯಲ್ಲೂ ನಿಷೇಧವೇ.

೨. ಲಿಂಗಾಂತದ 'ಆ' ಕಾರಕ್ಕೆ ಲಘು 'ಎ' ಕಾರ ಬರುವುದು ಕನ್ನಡದಲ್ಲಿ ಮಾತ್ರ. ತೆಲುಗಿನಲ್ಲಿ ಅಂಥ ಕಡೆ ಹ್ರಸ್ವ ಮಾತ್ರ ಬರುತ್ತದೆ. ಸಂಸ್ಕೃತದ 'ಈ ಊ'ಗಳು ಹ್ರಸ್ವವಾಗುತ್ತವೆ. ತೆಲುಗಿನಲ್ಲಿ 'ಈ' ಹ್ರಸ್ವವಾಗುವುದು, 'ಊ' ಹ್ರಸ್ವವಾಗಿ ಅದಕ್ಕೆ 'ವು' ವಾಗಲಿ, 'ಡು' ವಾಗಲಿ ಸೇರುತ್ತವೆ. ಏಕಾಕ್ಷರ ಪದಗಳು ಎರಡು ಭಾಷೆಗಳಲ್ಲೂ ಹ್ರಸ್ವವಾಗುವುದಿಲ್ಲ. ಋ ಕಾರ ನಿಲ್ಲುವಂತೆ ತೆಲುಗಿನಲ್ಲಿ ನಿಲ್ಲುವುದಿಲ್ಲ.

೩. ಉದಾ: ಕನ್ನಡದ ಕರ್ತೃ, ಧಾತೃ, ಭರ್ತೃ, ಹೋತೃ -ತೆಲುಗಿನಲ್ಲಿ ಕರ್ತ ಧಾತ, ಭರ್ತ, ದಾತ, ಹೋತ- ಆಗುತ್ತವೆ.

ಶ್ವನ್ ಮುಂತಾದ ಶಬ್ದಗಳಿಗೆ ಕನ್ನಡದಲ್ಲಿ ಬಂದಂತೆ ತೆಲುಗಿನಲ್ಲೂ 'ಆನ' ಬರುತ್ತದೆ ಉದಾ: ಶ್ವನ್- ಶ್ವಾನ.

೩. ಸಂಸ್ಕೃತದ ಸ್ವರಾಂತ ವ್ಯಂಜನಾಂತ ಪದಗಳನ್ನು ಕನ್ನಡಕ್ಕೆ ತರುವಲ್ಲಿ ನಾಗವರ್ಮ ಕೇಶಿರಾಜರಲ್ಲಿ ಸ್ಪಷ್ಟ ಚಿತ್ರಣ ಕಂಡು ಬಂದರೆ, ಕೇತನನಲ್ಲಿ ಇಂಥ ಚಿತ್ರಣ ವಿಲ್ಲ. ಅಲ್ಲಿ ವಿವರಣೆ ಸಾಲದು.

೪. ಕನ್ನಡದಲ್ಲಿ ವಿರಾಮದ ಮಕಾರ ನ ಕಾರಗಳು ಬಿಂದುವಾಗುವ ಬಗ್ಗೆ ಹೇಳಲಾಗಿದೆ. ಆದರೆ ಅದನ್ನು ತೆಲುಗು ವ್ಯಾಕರಣಗಳು ಅಂಗೀಕರಿಸುವುದಿಲ್ಲ.

೫. ಕೇತನ ತನ್ನ ತತ್ಸಮ - ತದ್ಭವ ವಿಭಾಗ ಕ್ರಮ ಕೇವಲ ದಿಗ್ದರ್ಶನವೆಂದೂ, ತನ್ನ ಕೃತಿಯಲ್ಲಿ ತಿಳಿಸದೇ ಇರುವ ಅನೇಕ ಪದಗಳು ಇನ್ನೂ ಇವೆಯೆಂದೂ ಹೇಳಿರುತ್ತಾನೆ. ಆಂ. ಭಾ. ಭೂದಲ್ಲಿ ಅವನು ಬಳಸಿಕೊಂಡ ಒಟ್ಟು ಪದ್ಯಗಳೆಂದರೆ ೧೯ ರಿಂದ ೪೩ರ ವರೆಗೆ ಮಾತ್ರ. ಕೇತನನು ತದ್ಭವ ಪದ್ಧತಿಗೆ ಕೇವಲ ಎರಡು ಪದ್ಯಗಳನ್ನು ಬಳಸಿಕೊಂಡಿದ್ದಾನೆ. ಅವು ೨೧ ಮತ್ತು ೨೨ ಮಾತ್ರ. ನಾಗವರ್ಮನೂ ಇದಕ್ಕೆ ಕೇವಲ ೪ ಸೂತ್ರಗಳನ್ನು ಉಪಯೋಗಿಸಿಕೊಂಡಿರುವನು

(ಸೂತ್ರ ೧೧೬, ೧೧೭, ೧೧೮, ೧೨೨). ನಾಗವರ್ಮನು ತದ್ಭವ ಶಬ್ದದ ಹೆಸರಿನ ಬಗ್ಗೆ ಎಲ್ಲೂ ಹೇಳಲಿಲ್ಲ. ಕೇತನನಲ್ಲಿ ತದ್ಭವದ ಬಗ್ಗೆ ತಿಳಿದು ಬರುತ್ತದೆ.

ತದ್ಭವ ಪದ್ಧತಿಯಲ್ಲಿ ಆಂಧ್ರ ವೈಯಾಕರಣರು ಸಂಸ್ಕೃತ ಮತ್ತು ಪ್ರಾಕೃತ ಈ ಎರಡೂ ಭಾಷೆಯ ಪದಗಳನ್ನು ಸ್ವೀಕರಿಸಿದರೆ, ಕನ್ನಡ ಲಾಕ್ಷಣಿಕರು ಈ ವಿಷಯದಲ್ಲಿ ಕೇವಲ ಸಂಸ್ಕೃತ ಪದಗಳಿಗೆ ಮಾತ್ರ ಪ್ರಾಮುಖ್ಯ ಕೊಟ್ಟಂತೆ ಕಾಣುತ್ತದೆ. ಅಲ್ಲಿ ಪ್ರಾಕೃತ ಮೂಲವನ್ನು ಗುರುತಿಸುವ ಸಾಧ್ಯತೆಗಳಿಲ್ಲ.

ತದ್ಭವ ವಿಷಯದಲ್ಲಿ ಕನ್ನಡಕ್ಕೂ ತೆಲುಗಿಗೂ ಹೆಚ್ಚು ವ್ಯತ್ಯಾಸವಿಲ್ಲದೆ ಇದ್ದಾಗಲೂ ಕೆಲವೊಂದು ಪದಗಳಲ್ಲಿ ಭಿನ್ನತೆ ಕಂಡುಬರುತ್ತದೆ. ಅದಕ್ಕೆ ಒಂದೆರಡು ಉದಾಹರಣೆಗಳು.

| ಸಂಸ್ಕೃತ | ಕನ್ನಡ | ತೆಲುಗು |
|---|---|---|
| ಲಕ್ಷ್ಮೀ | ಲಕುಮಿ | ಲಚ್ಚಿ |
| ಯಶ | ಜಸ | ಬಸ |
| ಕಾರ್ಯ | ಕಜ್ಜ | ಕರ್ಜಮು |
| ವೀಟಿಕಾ | ವೀಳಯಾ | ವೀಡ್ಯಮು |
| ಮೃತ್ಯು | ಮಿತ್ತು | ಮಿತ್ತಿ |
| ದ್ಯೂತ | ಜೂಜು | ಜೂದಮು |

೬. 'ಪ' ಕಾರ, 'ಹ' ಕಾರ ಆಗುವಂಥ ವಿಶೇಷ ವರ್ಣ ಭೇದಗಳನ್ನು ನಾಗವರ್ಮ ವಿವರಿಸಿದಂತೆ ಕೇತನ ವಿವರಿಸಿಲ್ಲ.

೭. ನಾಗವರ್ಮನು ತನ್ನ ಕೃತಿಯಲ್ಲಿ ದೇಶ್ಯ ಶಬ್ದಗಳನ್ನು ಪ್ರತ್ಯೇಕವಾಗಿ ವಿವರಿಸಲಿಲ್ಲ. ಕೇಶಿರಾಜನು ವಿವರಿಸಿದ್ದಾನೆ. ಕೇತನ ಇದನ್ನು ಪ್ರತ್ಯೇಕವಾಗಿ ವಿವರಿಸಿದ್ದಾನೆ. ನಾಗವರ್ಮನ 'ಯುಷ್ಮದಾದಿ ವಿಧಾನಂ' ಎಂಬಲ್ಲಿ ಕೇವಲ ತತ್ಸಮ- ತದ್ಭವಗಳ ವಿವರಣೆಯಿದೆ. ಕೇತನನ ಭಾಷಾ ವಿಭಜನೆಯಲ್ಲಿ ದೇಶ್ಯ ಶಬ್ದಗಳನ್ನು ಕಾಣುತ್ತೇವೆ. ಶ್ರವಣ ಸುಭಗತೆಗೆ ಸಂಬಂಧಿಸಿದ ದೇಶ್ಯ ಶಬ್ದಗಳನ್ನು ಕೊಟ್ಟಿರುವುದು ಶ್ಲಾಘನೀಯ. ಭಾಷೆಯ ಅಭಿಮಾನ ಇಲ್ಲಿ ಸುವ್ಯಕ್ತ. ಕೇಶಿರಾಜನು ತತ್ಸಮ ತದ್ಭವಗಳ ಜೊತೆಗೆ ದೇಶ್ಯ ಶಬ್ದಗಳನ್ನು ವಿವರಿಸಿರುತ್ತಾನೆ. ಈ ದೇಶ್ಯವನ್ನೇ ಅವನು ಅಚ್ಚಗನ್ನಡವೆಂದು ಕರೆದ.

೮. ಕೇತನನ ಕೃತಿಯಲ್ಲಿ 'ಗ್ರಾಮ್ಯ'ವೆಂಬ ಮತ್ತೊಂದು ಭಾಷಾ ವಿಭಜನೆ ಕಂಡುಬರುತ್ತದೆ. ಕಾವ್ಯ ಪ್ರಯೋಗಗಳಲ್ಲಿ ಗ್ರಾಮ್ಯ ಪದಗಳು ನಿಷಿದ್ಧ ಎಂಬ ಉದ್ದೇಶವಿರಬೇಕು. ನಾಗವರ್ಮನು ಇದನ್ನು ಕುರಿತು ಪ್ರಸ್ತಾಪ ಮಾಡಿಲ್ಲ. ಕೇತನ ಗ್ರಾಮ್ಯವನ್ನು ಯಾರೂ ಒಪ್ಪುವುದಿಲ್ಲವೆಂದು ಹೇಳಿದನಾದರೂ ನಿಂದಾರ್ಥದಲ್ಲಿ ಗ್ರಾಮ್ಯ ಬಳಕೆಯಾಗುತ್ತದೆಂದಿದ್ದಾನೆ.

ಹೀಗೆ ನಾಗವರ್ಮನ ಕೃತಿಯ 'ಯುಷ್ಮದಾದಿ ವಿಧಾನಂ' ಎಂಬ ಪ್ರಕರಣದಲ್ಲಿ ೧. ಸರ್ವನಾಮ, ೨. ತತ್ಸಮ-ತದ್ಭವ ೩. ಸಮಸಂಸ್ಕೃತ ವಿಧಾನ, ೪. ಬಿಂದು ೫. ವರ್ಣವ್ಯತ್ಯಯ -ಎಲ್ಲವನ್ನು ನೋಡಬಹುದು. ಕೇತನನ ಕೃತಿಯಲ್ಲಿ ಭಾಷಾ ವಿಭಜನೆಯೊಂದರಲ್ಲಿಯೇ ಸರ್ವನಾಮಗಳ ಜೊತೆಗೆ ತತ್ಸಮ, ತದ್ಭವ, ದೇಶ್ಯ, ಅಚ್ಚತೆನುಗು, ಗ್ರಾಮ್ಯ - ಎಂಬಿವುಗಳನ್ನು ಗಮನಿಸಬಹುದು. ಮೇಲ್ನೋಟಕ್ಕೆ ಇವೆಲ್ಲ ಬೇರೆ ಬೇರೆ ಎಂಬಂತೆ ಕಂಡು ಬಂದರೂ ಅನೇಕ ವಿಷಯಗಳಲ್ಲಿ ಹೋಲಿಕೆಯನ್ನು ಕಾಣುತ್ತೇವೆ.

## ಅಡಿಟಿಪ್ಪಣಿ

೧. ಡಾ. ಪಿ. ಕೃಷ್ಣಭಟ್, ಕನ್ನಡ ವ್ಯಾಕರಣ ಪರಂಪರೆಯಮೇಲೆ ಸಂಸ್ಕೃತದ ಪ್ರಭಾವ, ಪು. ೧೭೮.

೨. ಹಂಪ. ನಾಗರಾಜಯ್ಯ, ದ್ರಾವಿಡ ಭಾಷಾ ವಿಜ್ಞಾನ, ಪು. ೨೧೫.

೩. The Revised English Grammar, Alfred S. West, P.118.

೪. Manual of English, P. 105.

೫. ಡಾ. ಕೆ. ಕೆಂಪೇಗೌಡ "ಮಾನವಿಕ ಕರ್ನಾಟಕ" ಸಂಪುಟ ೧೫, ಸಂಚಿಕೆ ೨, ಪು.೪೨.

೬. ಹಂಪ ನಾಗರಾಜಯ್ಯ, ದ್ರಾವಿಡ ಭಾಷಾ ವಿಜ್ಞಾನ, ಪು. ೨೧೫.

೭. ಕನ್ನಡ ಕೈಪಿಡಿ, ಭಾಗ-೧, ಪು. ೩೪೩.

೮. ಡಾ.ವಿ. ಶಿವಾನಂದ, ಶಬ್ದಮಣಿದರ್ಪಣ ವಿಳಾಸಂ, ಪು. ೧೧೭.

೯. ಡಾ. ಸಂಗಮೇಶ ಬಿರಾದಾರ, ವೈಯಾಕರಣ ಎರಡನೆಯ ನಾಗವರ್ಮ, ಪು. ೧೪೬.

೧೦. Comparative Grammar of Dravidian Languages, P. 429.

೧೧. Dravidic Studies, Vol 1 ಇಂದ ಉಲ್ಲೇಖ, ಡಾ. ವಿ ಶಿವಾನಂದ, ಶಬ್ದಮಣಿದರ್ಪಣ ವಿಳಾಸ, ಪು. ೧೧೫.

೧೨. ಡಾ. ಸಂಗಮೇಶ ಬಿರಾದಾರ - ವೈಯಾಕರಣಿ ಎರಡನೆಯ ನಾಗವರ್ಮ, ಪು ೧೫೦

೧೩. ಅದೇ, ಪು. ೧೫೯.

೧೪. ಬೊಡ್ಡುಪಲ್ಲಿ ಪುರುಷೋತ್ತಮಂ, ತೆಲುಗು ವ್ಯಾಕಾರಣ ವಿಕಾಸಮು, ಪು. ೧೮೮.

೧೫. ಅದೇ, ಪು. ೧೨೮.

# ಸಮಾಸ

ವ್ಯಾಕರಣದ ವಿವಿಧ ಅಂಗಗಳಲ್ಲಿ ಸಮಾಸವೂ ಒಂದು. ವ್ಯಾಕರಣದಲ್ಲಿ ಇದಕ್ಕೂ ಒಂದು ಪ್ರಮುಖ ಸ್ಥಾನವಿದೆ.

ಸಮಾಸ ಎಂಬ ಶಬ್ದವು ಸಂಸ್ಕೃತವಾಗಿದೆ. ಅದರ ಅರ್ಥವನ್ನು ಸಂಸ್ಕೃತ ಭಾಷೆಯ ಸಹಾಯದಿಂದಲೇ ತಿಳಿಯಬೇಕಾಗಿದೆ. ನಾಗವರ್ಮ, ಭಟ್ಟಾಕಳಂಕಾದಿ ಕನ್ನಡ ಲಾಕ್ಷಣಿಕರು ಸಮಾಸದ ಲಕ್ಷಣವನ್ನು ಸಂಸ್ಕೃತ ವ್ಯಾಕರಣವನ್ನೇ ಆಧರಿಸಿ ಬಗೆ ಬಗೆಯಾಗಿ ವಿವರಿಸಿದ್ದಾರೆ. 'ಸಮಾಸ' ಎಂದರೆ ಸಾಮಾನ್ಯಾರ್ಥದಲ್ಲಿ ಕೂಡಿ ನುಡಿಯುವುದು ಎಂದರ್ಥ. ಇದಕ್ಕೆ ಮತ್ತೊಂದು ಹೆಸರು 'ಪದವಿಧಿ' ಎಂದು. ಒಂದೆಡೆ ಕೂಡು ಎಂಬ ಅರ್ಥವೂ ಉಂಟು. ಎರಡು ವರ್ಣಗಳು ಒಂದು ಕಡೆ ಕೂಡಿದರೆ ಸಂಧಿಯಾದಂತೆ, ಎರಡು ಇಲ್ಲವೆ ಎರಡಕ್ಕಿಂತ ಹೆಚ್ಚಿನ ಪದಗಳು ಕೂಡಿ 'ಸಂಗತಾರ್ಥ'ವನ್ನು ಕೊಡುವುದಕ್ಕೆ 'ಸಮಾಸ' ವೆನ್ನುತ್ತಾರೆ.

ಸಮ್ + ಅಸ್ = ಸಮಸ್ > ಸಮಾಸ

ಸಮ್ - ಒಳ್ಳೆಯ ಅಥವಾ ಉತ್ತಮ; ಆಸ್ ಇರುವುದು. ಒಟ್ಟು ಸಮಾಸವೆಂದರೆ "ಉತ್ತಮವಾಗಿರುವುದು" ಎಂದರ್ಥ. ಪರಸ್ಪರ ಅನ್ಯೋನ್ಯವಾಗಿ ಒಂದರ್ಥದೊಂದಿಗೆ ಇರುವುದನ್ನೇ ಸಮಾಸವೆಂದು ಕರೆಯುತ್ತಾರೆ. ಹೀಗೆಂದೇ ಕನ್ನಡ ವೈಯಾಕರಣರ ಅಭಿಪ್ರಾಯ.

ತಮಿಳು ಭಾಷೆಯಲ್ಲಿ ಕೂಡ ಸಮಾಸ ಪ್ರಕ್ರಿಯೆ ಇರುವುದಾಗಿ ಪ್ರಸಿದ್ಧ ವ್ಯಾಕರಣ ಗ್ರಂಥವಾದ 'ತೊಲ್ಕಾಪ್ಪಿಯಂ' ಎಂಬಲ್ಲಿ ತಿಳಿದುಬರುತ್ತದೆ. ಅಲ್ಲಿ ಸಮಾಸಕ್ಕೆ 'ತೊಗೈ' ಎಂಬುದು ಸಮಾನಾರ್ಥಕವಾಗಿ ಬಳಕೆಯಾಗಿದೆ. ಇದು 'ತೂಗು' ಎಂಬ ದ್ರಾವಿಡ ಧಾತುವಿನಿಂದಲೇ ಏರ್ಪಟ್ಟಿದೆ. 'ತೂಗು' ಎಂದರೆ ಕೂಡು, ಸೇರು ಎಂದು ಅರ್ಥ. ಅಲ್ಲದೆ ಬಿಟ್ಟುಕೊಡು, ಲೋಪಿಸು, ತೊಲಗು - ಎಂಬ ಅರ್ಥಗಳೂ ಉಂಟು.

ಒಟ್ಟಿನಲ್ಲಿ ಕರ್ನಾಟಕಾಂಧ್ರ ವೈಯಾಕರಣರು 'ಸಮಾಸ' ಎಂಬ ಪಾರಿಭಾಷಿಕ ಪದವನ್ನು ಮತ್ತು ಅದರ ಲಕ್ಷಣವನ್ನು ಸಂಸ್ಕೃತದಿಂದಲೇ ಸ್ವೀಕರಿಸಿದ್ದಾರೆ. "ಸಮಾಸಗಳು

ಎರಡು ಅಥವಾ ಎರಡಕ್ಕಿಂತ ಹೆಚ್ಚಿನ ನಾಮಪದಗಳ ಸಂಯೋಜನೆಯಿಂದ ಆಗುವ ಶಬ್ದಗಳೆಂಬುದು ಸ್ಪಷ್ಟ."[೧]

ಪಾಣಿನೀಯ ಸಮಾಸ ಪ್ರಕರಣದ ಪ್ರಾರಂಭದ ಸೂತ್ರ-

"ಸಮರ್ಥಃ ಪದವಿಧಿ' (ಪಾಣಿನಿ ೨-೨-೧) ಎಂಬುದೇ ಕನ್ನಡ ತೆಲುಗುಗಳಲ್ಲಿ ಸಮಾಸ ಲಕ್ಷಣಕ್ಕೆ ಮೂಲ ಆಧಾರ. ಅಂತೆ ಕಾತಂತ್ರದ "ನಾಮ್ನಾಂ ಸಮಾಸೋಯುಕ್ತಾರ್ಥ" (ಕಾತಂತ್ರ ೨-೫-೧) ಎಂಬುದು ಕೂಡ ಸಮಾಸವನ್ನು ಸೂತ್ರೀಕರಿಸುತ್ತದೆ. "ನಾಮ್ನಾಂ ಯುಕ್ತಾರ್ಥ ಸರ್ವೇ ಸೋಽಭವತಿಃ" ಎಂಬುದು ಮೇಲಿನ ಸೂತ್ರಕ್ಕೆ ವೃತ್ತಿ. ವೃತ್ತಿಯ ಅರ್ಥವು ಸೂತ್ರಾರ್ಥವನ್ನೇ ಅನುಸರಿಸುತ್ತದೆ.

ನಾಗವರ್ಮ, ಭಟ್ಟಾಕಳಂಕಾದಿ ಕನ್ನಡ ಲಾಕ್ಷಣಿಕರು ಹಾಗೂ ತೆಲುಗಿನ ಪ್ರಾಚೀನ ಅರ್ವಾಚೀನ ಲಾಕ್ಷಣಿಕರು ಎಲ್ಲರೂ ಮೇಲಿನ ಸಂಸ್ಕೃತ ಸಮಾಸ ಸೂತ್ರಗಳಿಂದಲೇ ಪ್ರೇರಿತರಾಗಿರುವುದು ನಿಜ. ಕನ್ನಡದ ನಾಗವರ್ಮನಾದರೂ ತನ್ನ ಭಾ. ಭೂ.ದಲ್ಲಿ- "ನಾಮ್ನಾಂ ಸಮಾಸಃ ಸಂಗತಾರ್ಥಃ" ಎಂದೇ ಕಾತಂತ್ರ ಸಮಾಸದ ಲಕ್ಷಣವನ್ನು ಅನುಸರಿಸಿರುವುದು ಸ್ಪಷ್ಟ (ಕ.ಭಾ.ಭೂ. ಪದ್ಯ ೧೨೪).

ಒಟ್ಟಿನಲ್ಲಿ ಸಮಾಸದಲ್ಲಿ ನಾಮ ಪದಗಳೊಂದಿಗೆ ಇತರ ಪದಗಳೂ ಸೇರಬಹುದು. ಅಲ್ಲದೆ ಸೇರುವ ಪದಗಳು ಒಂದು ಸುಸಂಗತಾರ್ಥವನ್ನು ಕೊಡುವಂತಿರಬೇಕು. ಅರ್ಥಾತ್ ಯಾವುದಾದರೂ ಒಂದು ಪದವು ಅರ್ಥಪ್ರಾಧಾನ್ಯ ಪಡೆದಿರಬೇಕು.

ಭಟ್ಟಾಕಳಂಕನ ಶಬ್ದಾನುಶಾಸನದಲ್ಲಿ ಸಮಾಸದ ಲಕ್ಷಣವನ್ನು ಹೀಗೆ ಸಂಗ್ರಹಿಸಬಹುದು: "ಸಮಾಸವೆಂಬುದು ಒಂದು ಪರಿಭಾಷೆ. ಪದಗಳ ಯಾವ ವಿಧಿಯಿದೆಯೋ ಅದು ಸಮರ್ಥವೆಂದು ತಿಳಿಯಬೇಕು. ಸಾಮರ್ಥ್ಯವು ಎರಡು ಬಗೆ: ಏಕಾರ್ಥೀಭಾವ ಲಕ್ಷಣ ಮತ್ತು ವ್ಯಪೇಕ್ಷಾ ಲಕ್ಷಣವೆಂದು. ಅಲ್ಲಿ ಮೊದಲಿನದು ಸಮಾಸದಲ್ಲಿ, ಎರಡನೆಯದು ವಾಕ್ಯದಲ್ಲಿ"[೨]

ಮೇಲಿನ ವಿಚಾರವನ್ನು ವಿಶ್ಲೇಷಿಸುತ್ತಾ ಶ್ರೀ ಕುಂಡಲಗಿರಿಯಾಚಾರ್ಯರು ತಮ್ಮ 'ಕರ್ಣಾಟಕ ಶಬ್ದಾನುಶಾಸನ ಪ್ರಕಾಶಿಕೆ'ಯಲ್ಲಿ "ಸಮರ್ಥವೆಂದರೆ ಸಂಶ್ಲಿಷ್ಟಾರ್ಥವುಳ್ಳ ಶಬ್ದ ಸಮುದಾಯ. ಭಿನ್ನ ಭಿನ್ನ ಅರ್ಥಗಳುಳ್ಳ ಪದಗಳು ಸೇರಿ ಒಂದೇ ಅರ್ಥವನ್ನು ಕೊಡುವ ಪದವಾಗಿ ಮಾರ್ಪಡುವ ಕ್ರಿಯೆಯೇ ಪದವಿಧಿ"[೩] ಎಂದಿದ್ದಾರೆ. ಇದರಿಂದ ಸಮಾಸವೆಂಬುದಕ್ಕೆ ಪರ್ಯಾಯವಾಗಿ 'ಪದವಿಧಿ' ಎಂಬ ಹೆಸರೂ ಉಂಟು.

'ಕಾವ್ಯಾವಲೋಕನ'ದ ಕಂದ ಪದ್ಯವೊಂದರಲ್ಲಿ-

ಸಂಗತಿಯಿಂದಂ ನಾಮ ಪ
ದಂಗಳ ವೇಕಾರ್ಥಗತಿಯೊಳಾಗೆ ಸಮಾಸಂ
ಸಂಗಳಿಸುಗುಂ ವಿಭಕ್ತಿಗ
ಣಂಗಳ್ಗಂತರದೊಳಲ್ಲಿ ಲೋಪಮುದಕ್ಕುಂ ।। ಸೂತ್ರ ೪೫।।

ಎಂದಿದೆ. ಇದು ನಾಗವರ್ಮನ ಸೂತ್ರ "ನಾಮ್ನಾಂ ಸಮಾಸಃ ಸಂಗತಾರ್ಥಃ" ಎಂಬುದಕ್ಕೆ ಸಂವಾದಿಯಾಗಿದೆ. ಎರಡರ ಅರ್ಥವೂ ಒಂದೇ ಆಗಿದೆ.

ಇನ್ನು ಕೇಶಿರಾಜನ ವ್ಯಾಖ್ಯಾನವು-

ಕಱು ತಾಯ ಬೞಿಯನುಬೞಿಯಪ
ತೆಱದಿಂದಂ ನಾಮಪದಮುದರ್ಥಾನುಗಮಾ
ಗೆಱಗೆ ಸಮಾಸಂ ನೆಗೞ್ಗುಂ (ಶ.ಮ.ದ (ಕೆ) ೨೯೨).

ಎಂಬುದು ನಾಗವರ್ಮನ ಸೂತ್ರವನ್ನು ಜ್ಞಾಪಿಸುತ್ತದೆ.

ಸಮಾಸವಾಗುವಾಗ ಪದಗಳ ಮಧ್ಯದಲ್ಲಿರುವ ವಿಭಕ್ತಿಗಳು ಲೋಪವಾಗುತ್ತವೆ ಎನ್ನಲು "ತತ್ರಾಂತರ್ವರ್ತಿನ್ಯೋ ವಿಭಕ್ತಯೋ ಲೋಪ್ಯಾಃ" (ಸೂತ್ರ ೧೨೫) ಎಂಬ ನಾಗವರ್ಮನ ಸೂತ್ರ ಸಕಾರಣವಾಗಿದೆ. ಅವನ ಮತ್ತೊಂದು ಕೃತಿಯಾದ ಕಾವ್ಯಾವಲೋಕನದಲ್ಲಿ "ವಿಭಕ್ತಿ ಗಣಂಗಳ್ಗಂತರದೊಳಲ್ಲಿ ಲೋಪಮುದಕ್ಕುಂ" ಎಂದಿದೆ (ಕಾವ್ಯಾ. ೪೫). "ಇದನ್ನೇ ಕೇಶಿರಾಜನು. "ನೆಱೆಪೋಕುಂ ಮಧ್ಯಗತ ವಿಭಕ್ತಿಗಳವಱೊಳ್" ಎಂದಿದ್ದಾನೆ (ಶ.ಮ.ದ.ಸೂತ್ರ ೧೭೩).

ಹೀಗೆ ಕನ್ನಡ ವೈಯಾಕರಣರೆಲ್ಲರೂ ಸಮಾಸವಾಗುವಲ್ಲಿ ಪದಗಳ ಮಧ್ಯದಲ್ಲಿರುವ ವಿಭಕ್ತಿಗಳು ಲೋಪವಾಗುತ್ತವೆ ಎಂದೇ ಒಮ್ಮತದಿಂದ ಸಾರಿದ್ದಾರೆ. ನಾಗವರ್ಮ, ಕೇಶಿರಾಜ ಮುಂತಾದವರು ಸಮಾಸದ ಲಕ್ಷಣವನ್ನು ತಿಳಿಸಿ, ಅನಂತರ ಶಬ್ದಗಳಲ್ಲಿರುವ ಪರಿವರ್ತನೆಗಳನ್ನು ಕುರಿತು ಹೇಳಿದ್ದಾರೆ.

**ಸಮಾಸ ಪ್ರಭೇದಗಳು:**

ಸಂಸ್ಕೃತ ಭಾಷೆಯಲ್ಲಿ ಸಮಾಸಗಳು ಆರು. ಆದರೂ ಆಂತರಿಕ ಭೇದಗಳಿಂದ ಅವು ಇಪ್ಪತ್ತೆಂಟು ಸಮಾಸಗಳಾಗಿವೆ. ಸಂಸ್ಕೃತದ ಕಿರು ಹೊತ್ತಿಗೆಯಾದ 'ಸಮಾಸ ಚಕ್ರಂ'[೪] ಎಂಬಲ್ಲಿ ತತ್ಪುರುಷ ಸಮಾಸದಲ್ಲಿ ಎಂಟು; ಕರ್ಮಧಾರಯ ಮತ್ತು ಬಹುವ್ರೀಹಿಗಳಲ್ಲಿ ಏಳೇಳು; ದ್ವಿಗು, ದ್ವಂದ್ವ ಮತ್ತು ಅವ್ಯಯೀಭಾವಗಳಲ್ಲಿ ಎರಡೆರಡು- ಹೀಗೆ ಒಟ್ಟು ಇಪ್ಪತೆಂಟು ಸಮಾಸಗಳ ವಿವರಣೆ ಇದೆ. ಕನ್ನಡದ ಕೇಶಿರಾಜನಾದರೂ

ಮೇಲಿನ ಎಲ್ಲ ಸಮಾಸಗಳನ್ನು ಹೇಳದೆ ಕನ್ನಡಕ್ಕೆ ಎಷ್ಟುಬೇಕೋ ಅಷ್ಟನ್ನೇ ತಿಳಿಸಿದ್ದಾನೆ. ಇದರಿಂದ ಅವನ ವಿಷಯ ನಿರೂಪಣೆಯಲ್ಲಿ ಔಚಿತ್ಯ ಜ್ಞಾನ ಮನವರಿಕೆಯಾಗುತ್ತದೆ. ನಾಗವರ್ಮನು ಆರುಸಮಾಸಗಳನ್ನು ಹೇಳಿದ್ದಾನೆ. ಕೇಶಿರಾಜನು ಗಮಕ ಸಮಾಸದೊಂದಿಗೆ ಎಂಟು ಮಾಡಿದ್ದಾನೆ. ಕೇಶಿರಾಜನ ಪ್ರಕಾರ ಸಮಾಸಗಳು ೧. ತತ್ಪುರುಷ, ೨. ಕರ್ಮಧಾರಯ, ೩. ದ್ವಿಗು, ೪. ಬಹುವ್ರೀಹಿ, ೫. ದ್ವಂದ್ವ, ೬. ಅವ್ಯಯೀ ಭಾವ, ೭. ಕ್ರಿಯ, ೮. ಗಮಕ, ೯. ವೀಪ್ಸಾ. ಇವುಗಳಲ್ಲದೆ ಕನ್ನಡದಲ್ಲಿ ಇನ್ನು ಕೆಲವು ಸಮಾಸಗಳು ಹಾಗೂ ಅವುಗಳ ಪ್ರಭೇದಗಳ ಶೋಧನೆ ಮಾಡಿದರೆ ದೊರಕಬಹುದೆಂದು 'ಅವನ' 'ಇಂಗಿತ'. "ಶಬ್ದ" ಪಾರಮಾರ್ಗಮಶಕ್ಯಂ (ಶ.ಮ.ದ.ಸೂ.೨೦೭) ಎಂದಿರುವುದರಿಂದ, ಅಪಾರವಾದ ಶಬ್ದ ಸಾಗರವನ್ನು ದಾಟುವುದು ಅಶಕ್ಯವೆಂದು ತಿಳಿಯಬಹುದು.

### ೧. ತತ್ಪುರುಷ:

ನಾಗವರ್ಮನು "ಉತ್ತರ ಪದಾರ್ಥವೃತ್ತಿಸ್ತತ್ಪುರುಷಃ" (ಸೂ. ೧೨೬) ಎಂದು ತತ್ಪುರುಷ ಸಮಾಸದ ಲಕ್ಷಣವನ್ನು ಹೇಳಿದ್ದಾನೆ. ಸೂತ್ರದ ಪ್ರಕಾರ "ಉತ್ತರ ಪದದ ಅರ್ಥವು ಮುಖ್ಯವಾಗಿರಬೇಕು" ಆಗ ಅದು ತತ್ಪುರುಷ ಸಮಾಸವೆನಿಸಿಕೊಳ್ಳುತ್ತದೆ. ಇದನ್ನೇ ತನ್ನ ಕಾವ್ಯಾವಲೋಕನದ ಶಬ್ದಸ್ಮೃತಿಯ ಸೂತ್ರ ೪೬ರಲ್ಲಿ ತಿಳಿಸಿದ್ದಾನೆ. ತತ್ಪುರುಷ ಸಮಾಸಕ್ಕೆ ಕ.ಭಾ.ಭೂ ಕೊಡುವ ಉದಾಹರಣೆಗಳು -

೧. ಅರಮನೆ (ಅರಸನ ಮನೆ)

೨. ಸೂಳೆಗೇರಿ (ಸೂಳೆಯರ ಕೇರಿ)

೩. ಮಾಂಗಾಯೆ (ಮಾವಿನ ಕಾಯಿ)

ಅಂತೆ ಉಳಿದ ಉದಾಹರಣೆಗಳಾದ ನೀರ್ವೀರೆ, ಆನೆವಾಲು, ಪೊನ್ನೋಲೆ- ಇತ್ಯಾದಿ. ಮೇಲಿನ ಉದಾಹರಣೆಗಳೆಲ್ಲವೂ ಷಷ್ಠೀ ತತ್ಪುರುಷ ಸಮಾಸ ಪದಗಳಾಗಿವೆ. ಕಾರಣ ಷಷ್ಠೀ ವಿಭಕ್ತಿ ಪ್ರತ್ಯಯ 'ಅ'ವನ್ನು ಪೂರ್ವ ಪದಗಳು ಪಡೆದಿವೆ. ಸಮಾಸವಾಗುವಲ್ಲಿ ವಿಭಕ್ತಿ ಪ್ರತ್ಯಯಗಳು ಲೋಪಿಸಿವೆ. ಇಲ್ಲಿ ಉತ್ತರ ಪದಗಳ ಅರ್ಥವು ಪ್ರಧಾನವಾಗಿದೆ. ಈ ವಿಭಕ್ತಿ ಪ್ರತ್ಯಯಗಳನ್ನು ದೃಷ್ಟಿಯಲ್ಲಿಟ್ಟು ಕೊಂಡೇ ಸಂಸ್ಕೃತದ ಲಾಕ್ಷಣಿಕರು ತತ್ಪುರುಷ ಸಮಾಸದಲ್ಲಿ ಎಂಟು ಪ್ರಕಾರಗಳು ಎಂದು ಸಾರಿದರು. ಕನ್ನಡದಲ್ಲಿ ಹೆಚ್ಚಾಗಿ ಷಷ್ಠೀ ತತ್ಪುರುಷವನ್ನೇ ಕಾಣುತ್ತೇವೆ.

ಕೇಶಿರಾಜನು ತತ್ಪುರುಷ ಸಮಾಸದ ಲಕ್ಷಣವನ್ನು-

"ಪರಪದದೊಳರ್ಥವರ್ತನ
ಮಿರೆ ತತ್ಪುರುಷಂ" (ಶ.ಮ.ದ.ಸೂತ್ರ ೧೭೫)

ಎಂದಿದ್ದಾನೆ. ತತ್ಪುರುಷ ಸಮಾಸದಲ್ಲಿ ಉತ್ತರ ಪದಕ್ಕೆ ಕೇವಲ ಅರ್ಥ ಪ್ರಾಧಾನ್ಯ ಇದ್ದರೆ ಸಾಲದು. ಅದು ಪ್ರಥಮಾ ವಿಭಕ್ತಿಯಲ್ಲಿದ್ದು ಪೂರ್ವ ಪದವು ಬೇರೆ ವಿಭಕ್ತಿಯಲ್ಲಿರಬೇಕು. ಇದು ನಿಯಮ. ಪೂರ್ವ ಪದವು ಯಾವ ವಿಭಕ್ತಿಯಿಂದ ಕೂಡಿರುವುದೋ ಆ ವಿಭಕ್ತಿಯ ಹೆಸರನ್ನು ತತ್ಪುರುಷವು ಪಡೆಯುತ್ತದೆ.

ನಾಗವರ್ಮ ಮತ್ತು ಕೇಶಿರಾಜರು ಕೊಟ್ಟಿರುವ ಉದಾಹರಣೆಗಳನ್ನು ನೋಡಿದಾಗ ಕನ್ನಡದಲ್ಲಿ ಷಷ್ಠೀ ತತ್ಪುರುಷವೇ ಮುಖ್ಯವೇನೋ ಎನಿಸುತ್ತದೆ. ಆದರೆ ಪ್ರಯೋಗಗಳಲ್ಲಿ ಎಲ್ಲಾ ತತ್ಪುರುಷಗಳನ್ನು ನಾವು ಕಾಣಬಹುದು.

ನಾಗವರ್ಮ ಕೇಶಿರಾಜಾದಿ ವೈಯಾಕರಣರು ಈ ತತ್ಪುರುಷ ಸಮಾಸಕ್ಕೆ ಕೊಟ್ಟಿರುವ ಉದಾಹರಣೆಗಳನ್ನು ಹಾಗೂ ಲಕ್ಷಣವನ್ನು ಗಮನಿಸಿದರೆ ಕೆಲವು ಸಂಗತಿಗಳು ವಿದಿತವಾಗುತ್ತವೆ. ಅವುಗಳೆಂದರೆ-

೧. ತತ್ಪುರುಷ ಸಮಾಸದಲ್ಲಿ ವ್ಯಕ್ತವಾಗುವ ಪೂರ್ವೋತ್ತರ ಪದಗಳೆರಡೂ ನಾಮಪದಗಳಾಗಿರುತ್ತವೆ.

೨. ಬಹುತೇಕ ಪೂರ್ವ ಪದಗಳು ಷಷ್ಠ್ಯಂತಗಳಾಗಿದ್ದರೆ, ಉತ್ತರ ಪದಗಳೆಲ್ಲವೂ ಪ್ರಥಮಾಂತಗಳಾಗಿರುತ್ತವೆ.

೩. ಸಮಸ್ತ ಪದಗಳಾದಾಗ ಎರಡು ಪದಗಳು ಪ್ರಥಮಾಂತಗಳಾಗಿರುತ್ತವೆ.

೪. ಉತ್ತರ ಪದದ ಅರ್ಥವು ಪ್ರಧಾನವಾಗಿರುತ್ತದೆ. ಪೂರ್ವ ಪದದ ಅರ್ಥವು ಅಮುಖ್ಯವಾಗಿರುತ್ತದೆ.

೫. ಎರಡು ನಾಮಪದಗಳು ಕೂಡಿಕೊಂಡು ಒಂದು ನಾಮಪದವಾಗುವುದೇ (ಅರ್ಥವತ್ತಾಗಿ) ಈ ಸಮಾಸದಲ್ಲಿಯ ವಿಧಾನ, ವಿಶೇಷವೂ ಕೂಡ.

೨. **ಕರ್ಮಧಾರೆಯ:**

ಅ. ಸ ಏ ವೈಕಾಶ್ರಯ: ಕರ್ಮಧಾರಯ: (ಕ. ಭಾ.ಭೂ. ಸೂತ್ರ. ೧೨೭)

ಆ. ಏಕಾಶ್ರಯಮಾಗಿರೆ ಕರ್ಮಧಾರಯಂ (ಶಬ್ದಸ್ಮೃತಿ ಸೂತ್ರ. ೪೬)

ಇ. ಏಕಾಶ್ರಯಮಾಗಿರೆ ಕರ್ಮಧಾರಯಂ (ಶ.ಮ.ದ.ಸೂತ್ರ ೧೭೫)

ಇವು ಕರ್ಮಧಾರಯ ಸಮಾಸದ ಲಕ್ಷಣಗಳು. ನಾಗವರ್ಮನು ಕರ್ಮಧಾರಯ ಲಕ್ಷಣವನ್ನು ಸೂತ್ರ ೧೨೭ರಲ್ಲಿ ತಿಳಿಸಿದ್ದಾನೆ. ಅದರ ವೃತ್ತಿಯ ಪ್ರಕಾರ "ಈ ಹಿಂದೆ ಹೇಳಿದ ತತ್ಪುರುಷ ಸಮಾಸವೇಕಾಶ್ರಯವಾಗಿದ್ದರೆ (ಒಂದೇ ಅಧಿಕರಣವಾಗಿದ್ದರೆ) ಕರ್ಮಧಾರಯ ಸಮಾಸ ಎಂಬ ಹೆಸರನ್ನು ಪಡೆಯುತ್ತದೆ.

ಉದಾ: ತಳಿತೋಳ್, ಕೆಂಪಳಂ, ತೆಳ್ವನಿ, ಪೆರ್ಮೊಲೆ, ಕರ್ನೆಯ್ದಿಲ್, ಕಟ್ಟಾಳ್ ಈ ಮೊದಲಾದವು.

ಕರ್ಮಧಾರಯ ನಾಗವರ್ಮನ ಪ್ರಕಾರ ತತ್ಪುರುಷದ ಒಂದು ಪ್ರಭೇದ. ತತ್ಪುರುಷ ಸಮಾಸದಲ್ಲಿ ಪೂರ್ವಪದವು ದ್ವಿತೀಯಾದಿ ವಿಭಕ್ತಿಗಳಿಂದ ಕೂಡಿರುತ್ತದೆ. ಉತ್ತರ ಪದ ಪ್ರಥಮಾಂತವಾಗಿರುತ್ತದೆ. ಆದರೆ ಕರ್ಮಧಾರಯ "ಏಕಾಶ್ರಯವಾದ ತತ್ಪುರುಷ" ಏಕಾಶ್ರಯವೆಂದರೆ ಪೂರ್ವ ಉತ್ತರ ಪದಗಳೆರಡೂ ಒಂದೇ ವಿಭಕ್ತಿಯಿಂದ ಕೂಡಿರುವುದು. ಇಲ್ಲಿ ಒಂದು ವಿಭಕ್ತಿಯೆಂದಾಗ ಅದು ಪ್ರಥಮೆಯೆಂದೇ ಅರಿಯುವುದು. ಉದಾ: ಕೆಂದಾವರೆ "ಕೆಂಪುಂ ತಾನೇ ತಾವರೆಯುಂ ತಾನೇ ಆಗಿ ಏಕಾಶ್ರಯಮಾಗೆ, ವಿಭಕ್ತಿ ಲೋಪಮಾಗಿ ಕೆಂದಾವರೆಯುಂದಾಯ್ತು" (ಕ.ಭಾ.ಭೂ. ಸೂತ್ರ ೧೨೭ರ ಟೀಕು) ಎಂದು ನಾಗವರ್ಮನ ಸೂತ್ರಕ್ಕೆ ಕನ್ನಡದಲ್ಲಿ ಟೀಕನ್ನು ಬರೆದಿರುವಲ್ಲಿ ಕಾಣಬಹುದು.

ಕೇಶಿರಾಜನು ಮೊದಲು ತತ್ಪುರುಷ ಸಮಾಸದ ಲಕ್ಷಣವನ್ನು ನೀಡಿ, ಅನಂತರ "ಅದು (ತತ್ಪುರುಷ) ಏಕಾಶ್ರಯಮಾಗೆ ಕರ್ಮಧಾರಯಂ" ಎಂದು ಕರ್ಮಧಾರಯ ಸಮಾಸದ ಲಕ್ಷಣವನ್ನು ಹೇಳಿದ್ದಾನೆ.

ಕೇಶಿರಾಜನು ಕರ್ಮಧಾರಯ ಭೇದವಾಗಿ ಗಮಕವನ್ನು ಕೊಟ್ಟಿದ್ದಾನೆ:

ಜನಿಯಿಸುಗುಂ ಸಂಖ್ಯಾ ಸ
ರ್ವನಾಮ, ಗುಣವಚನ, ಕೃತ್ಪೂರ್ವಂ ಗಮಕಂ
ತನಗತ್ತಂ ಪೆರಗಿತ್ತಂ
ತನಗರಿಪದನಿಲ್ಲ ಕರ್ಮಧಾರಯಮದುವುಂ (ಸೂ. ೧೭೯)

೧. ಸಂಖ್ಯೆ - ಮೂವತ್ತಾರು, ನೂಱುಪತ್ತು

೨. ಸರ್ವನಾಮ - ಆವಮಾತು, ಆವನಾಯಕಂ

೩. ಗುಣವಚನ- ಅಸಿಯನಡು, ಪಸಿಯ ಬಣ್ಣಂ

೪. ಕೃತ್ - ಪಾಡುವ ತುಂಬಿ

ಇದನಲ್ಲದೆ ಕರ್ಮಧಾರಯ ಭೇದವಾದ ಗಮಕದಲ್ಲಿ ಕೇಶಿರಾಜ ಇನ್ನು ಕೆಲವು ವಿಶೇಷಗಳನ್ನು ಹೇಳಿದ್ದಾನೆ.

ಭಟ್ಟಾಕಳಂಕನು ಕರ್ಮಧಾರಯವನ್ನು ಪ್ರತ್ಯೇಕವಾಗಿ ಹೇಳದೆ ತತ್ಪುರುಷದಲ್ಲಿ ವ್ಯಧಿಕರಣ, ಸಮಾನಾಧಿಕರಣ ಎಂಬ ಎರಡು ಭೇದಗಳನ್ನು ಹೇಳಿದ್ದಾನೆ. ಸಮಾನಾಧಿಕರಣ ತತ್ಪುರುಷವೇ ಕರ್ಮಧಾರಯ ಎಂಬ ಭಟ್ಟಾಕಳಂಕನ ಹೇಳಿಕೆಗೆ ಪಾಣಿನಿ ಮತ್ತು ಕಾತಂತ್ರಗಳೇ ಆಧಾರ.

"ತತ್ಪುರುಷ ಸಮಾನಾಧಿಕರಣ, ಕರ್ಮಧಾರಯಾಃ (ಅಷ್ಟಾಧ್ಯಾಯಿ ೧-೨-೪೨)

"ಪದೇ ತುಲ್ಯಾಧಿಕರಣವೇ ವಿಜ್ಞೇಯ ಕರ್ಮಧಾರಯಃ" (ಕಾತಂತ್ರ ೨-೫-೫)

ವಿಶೇಷಣ ಪೂರ್ವಪದ, ವಿಶೇಷಣ ಉತ್ತರ ಪದ, ವಿಶೇಷಣೋಭಯ ಪದ, ಉಪಮಾನ ಪೂರ್ವಪದ, ಉಪಮಾನೋತ್ತರ ಪದ, ಸಂಭಾವನಾ ಪೂರ್ವಪದ ಮತ್ತು ಅವಧಾರಣಾ ಪೂರ್ವಪದ ಎಂಬ ಏಳು ಕರ್ಮಧಾರಯಗಳಿವೆ. ಕನ್ನಡವಲ್ಲಿ ಇಂಥ ಪ್ರಭೇದಗಳಿಲ್ಲ.

**೩. ದ್ವಿಗು ಸಮಾಸ:**

ಸಂಖ್ಯಾದಿರ್ದ್ವಿತ್ ದ್ವಿಗು: (ಕ.ಭಾ.ಭೂ ಸೂತ್ರ ೧೨೮) "ನೆಲೆಸಿರೆ ಮೊದಲೊಳು ಸಂಖ್ಯೆಯದೇ ದ್ವಿಗು" (ಶ.ಮ.ದ. ಸೂತ್ರ ೧೭೫). ಮೇಲಿನ ಎಲ್ಲ ವೈಯಾಕರಣರ ಲಕ್ಷಣದ ನಿಲುವು ಒಂದೇ ಆಗಿದೆ. ನಾಗವರ್ಮನ ಸೂತ್ರದ ಪ್ರಕಾರ "ಕರ್ಮಧಾರಯ ಪೂರ್ವದಲ್ಲಿ ಸಂಖ್ಯೆಯಿದ್ದರೆ ಅದು ದ್ವಿಗುಸಮಾಸವೆನಿಸುತ್ತದೆ." ಭಟ್ಟಾಕಳಂಕನು ಇದನ್ನು ದ್ವಿಗುವೆಂದು ಕರೆದಿಲ್ಲ.

ಕರ್ಮಧಾರಯ ತತ್ಪುರುಷವಲ್ಲಿ ಅಂತರ್ಗತವಾಗುತ್ತಿದ್ದರೆ, ದ್ವಿಗು ಸಮಾಸ ಕರ್ಮಧಾರಯದ ಪ್ರಭೇದವಾಗಿದೆ.

ದ್ವಿಗು ಸಮಾಸವೂ ಕೂಡ ಕರ್ಮಧಾರಯದಂತೆ ತತ್ಪುರುಷದ ಒಂದು ಪ್ರಭೇದವೆಂದೇ ನಾಗವರ್ಮನು ತಿಳಿಸಿದ್ದಾನೆ.

ಉದಾ : ಒರ್ತಲೆ = ಒರ್ + ತಲೆ
ಇರ್ಕಯ್ = ಇರ್ + ಕೈ
ಮೂಲೋಕಂ = ಮೂ + ಲೋಕಂ
ನಾಲ್ಗಾವುದಂ = ನಾಲ್ + ಗಾವುದಂ
ಅಯ್ಪೆಂಡಿರ್ = ಅಯ್ + ಪೆಂಡಿರ್

ಮೇಲಿನ ಉದಾಹರಣೆಗಳಲ್ಲಿಯ ಪೂರ್ವಪದಗಳಾದ ಒರ್, ಇರ್, ಮೂ, ನಾಲ್, ಅಯ್ ಎಂಬಿವು ಒಂದು, ಎರಡು, ಮೂರು, ನಾಲ್ಕು ಐದು ಎಂಬ ಸಂಖ್ಯಾಪದಗಳಿಗೆ ಆದೇಶವಾಗಿವೆ.

ಕರ್ಮಧಾರಯಕ್ಕೂ ದ್ವಿಗುವಿಗೂ ಇರುವ ವ್ಯತ್ಯಾಸವೆಂದರೆ ಒಂದರಲ್ಲಿ ಗುಣವಿಶೇಷಣ ಉಪಮಾನಗಳಿದ್ದರೆ, ಇನ್ನೊಂದರಲ್ಲಿ ಕೇವಲ ಸಂಖ್ಯಾವಾಚಿ-

ಗಳಿರುತ್ತವೆ. ನಾಗವರ್ಮನು ಕೊಟ್ಟಿರುವ ಉದಾಹರಣೆಗಳಲ್ಲಿ ಪೂರ್ವ ಪದಗಳು ಸಂಖ್ಯಾವಾಚಿಯಾಗಿದ್ದು, ಉತ್ತರ ಪದಗಳು ನಾಮ ಪದಗಳಾಗಿವೆ.

ಕೆಲವೊಮ್ಮೆ ಪೂರ್ವೋತ್ತರ ಪದಗಳೆರಡೂ ಸಂಖ್ಯಾವಾಚಿಗಳಿರಬಹುದು. ಅದಕ್ಕೆ ಉದಾ:

ಎರಡು + ಪತ್ತು > ಇರ್ + ಪತ್ತು > ಇರ್ಪತ್ತು > ಇಪ್ಪತ್ತು. ಇವನ್ನು ದ್ವಿಗು ಸಮಾಸವೆಂದು ಹೇಳಬೇಕಾಗುವುದು. ಉತ್ತರ ಪದವಾಗಿ ಬರುವ ಸಂಖ್ಯೆಯನ್ನು ಸಂಖ್ಯೇಯವೆನ್ನಬಹುದು. ಕೇಶಿರಾಜ ಸೂತ್ರ ೧೬೦ರಲ್ಲಿ ಸಂಖ್ಯೇಯದ ಬಗ್ಗೆ ಹೇಳಿದ್ದಾನೆ. "ನೀನಜ ಸಂಖ್ಯೇಯದ ಸಂಖ್ಯಾನದ ದೊರೆವೆತ್ತ ಭಾವದೇಕತೆ ಬಹುತಾಧೀನಂ". ಆದರೆ ದ್ವಿಗು ಸಮಾಸದಲ್ಲಿ "ನೆಲೆಸಿರ ಮೊದಲೊಳ್ ಸಂಖ್ಯೆಯದೇ ಪಲಂ ದ್ವಿಗುಮಕ್ಕುಂ" ಎಂದಿದ್ದು ಸಂಖ್ಯೆ ಆದಿಯಲ್ಲಿರಬೇಕೆಂದು ಹೇಳಿದಂತಾಗಿದೆ. ಇವರರ್ಥ ಎರಡು ಸಂಖ್ಯೆಗಳಿದ್ದರೂ ಮೊದಲನೆಯದು ವಿಶೇಷವಾಗಿ ಎರಡನೆಯದು ವಿಶೇಷ್ಯವಾಗಿ ಬರುತ್ತದೆಂದು.

## ೪. ಅವ್ಯಯೀ ಭಾವ:

"ಪೂರ್ವ ಪದಾರ್ಥ ಪ್ರಧಾನೋಽವ್ಯಯೀಭಾವಃ" (ಕ.ಭಾ.ಭೂ. ಸೂತ್ರ ೧೨೯). "ಪೂರ್ವ ಪದದ ಅರ್ಥವು ಪ್ರಧಾನವಾಗಿದ್ದರೆ ಅದು ಅವ್ಯಯೀ ಭಾವ ಸಮಾಸವೆನಿಸಿಕೊಳ್ಳುತ್ತದೆ." ಇದನ್ನೇ ಶಬ್ದಸ್ಮೃತಿಯಲ್ಲಿ "ಪೂರ್ವಪದ ಪ್ರಧಾನಮವ್ಯಯೀಭಾವಾಖ್ಯಂ" (ಸೂತ್ರ ೪೭) ಎಂದು ಹೇಳಲಾಗಿದೆ. ಶ.ಮ.ದ ಸೂತ್ರ ೧೭೬ರಲ್ಲಿ "ಆದಿ ಪದಮ್ ಮುಖ್ಯತೆಯಿಂ ಅವ್ಯಯೀ ಭಾವಂ" ಎಂದು ತಿಳಿಸಿದೆ.

ಎಲ್ಲ ಕನ್ನಡ ವೈಯಾಕರಣರು ಈ ಸಮಾಸದ ಲಕ್ಷಣವನ್ನು ಕುರಿತು ಒಂದೇ ರೀತಿಯಾಗಿ ವಿವರಿಸಿದ್ದಾರೆ.

ಪೂರ್ವ ಪದವು ಅರ್ಥದ ದೃಷ್ಟಿಯಿಂದ ಪ್ರಧಾನವಾಗಿರಬೇಕೆಂದು ನಾಗವರ್ಮನು ಹೇಳಿದರೆ, ಕೇಶಿರಾಜನು "ಆದಿ ಪದವು ಎಂದರೆ ಸಮಾಸದ ಪೂರ್ವ ಪದವು ಮುಖ್ಯವಾಗಿರಬೇಕು" ಎಂದಿದ್ದಾನೆ. ಭಟ್ಟಾಕಳಂಕನು ಮಾತ್ರ ಇದನ್ನು 'ಅಂಶೀ' ಸಮಾಸವೆಂದು ತಿಳಿಸಿದ್ದಾನೆ.

ಅಂಶೀನಾಭಿನ್ನೇನಃ (ಶ.ಶಾ. ಸೂತ್ರ ೩೦೬) ಅಂಶಿವಾಚಕವಾದ ಪೂರ್ವ ಪದದ ಅರ್ಥವು ಉತ್ತರ ಪದದಲ್ಲಿ ಅಂಶದಿಂದ (ಭಾಗ) ಕೂಡಿಕೊಂಡು ಅಭಿನ್ನವಾಗಿರುವುದರಿಂದ ಅದಕ್ಕೆ ಅಂಶೀ ಸಮಾಸವೆಂದು ಹೆಸರು.

"ಉದಾಹರಣೆಗಳಲ್ಲಿ ಅಂಶ-ಅಂಶಿ ಭಾವವಿರುವುದರಿಂದ ಈ ಹೆಸರಿನಿಂದಲೂ ಕರೆದಿರುವುದರಲ್ಲಿ ಬಾಧಕವೇನೂ ಇಲ್ಲ. ಮಾತ್ರವಲ್ಲ, ಭಟ್ಟಾಕಳಂಕನು ಹೀಗೆ ನಿರ್ದೇಶಿಸಲು ಕಾರಣವೂ ಇರುವಂತಿದೆ. ಸಂಸ್ಕೃತ ವ್ಯಾಕರಣದಲ್ಲಿ ಅನೇಕ ಅವ್ಯಯಗಳು ಅನೇಕಾರ್ಥಗಳಲ್ಲಿ ನಾಮ ಪ್ರಕೃತಿಯೊಂದಿಗೆ ಸಮಾಸವಾಗುತ್ತವೆ. ಅವುಗಳಲ್ಲಿ ಅಂಶ-ಅಂಶೀಭಾವ ಒಂದು. ಕನ್ನಡದ ಉದಾಹರಣೆಗಳೆಲ್ಲವೂ ಈ ಒಂದು ಅರ್ಥವುಳ್ಳವಾದ್ದರಿಂದ ಅವನು ಈ ಹೆಸರನ್ನು ಕೊಟ್ಟಿರುವನೆಂದು ಕಾಣುತ್ತದೆ."[೫]

ಉದಾ : ೧. ಮುಂಗೈ = ಕೈಯ + ಮುಂದು
೨. ಅಂಗೈ = ಕೈಯ + ಅಡಿ
೩. ಮೇಂಗೈ = ಕೈಯ + ಮೇಲೆ
೪. ಅಂಗಾಲ್ = ಕಾಲ + ಅಡಿ
೫. ತುದಿಬೆರಳ್ = ಬೆರಳ + ತುದಿ
೬. ಕಿಱುಕೆರೆ = ಕೆರೆಯ + ಕೆಳಗೆ
೭. ಕಿಱುಪೊಡೆ = ಪೊಡೆಯ + ಕೆಳಗೆ

ಮೇಲಿನ ಉದಾಹರಣೆಗಳನ್ನು ಗಮನಿಸಿದರೆ, ಅವ್ಯಯಿಭಾವ ಎನ್ನುವುದಕ್ಕಿಂತ ಅಂಶೀ ಸಮಾಸವೆನ್ನುವುದೇ ಉಚಿತವೆನಿಸುತ್ತದೆ. ಕಾರಣ 'ಮುಂಗೈ' ಎಂಬ ಪದವನ್ನು ತೆಗೆದುಕೊಳ್ಳಬಹುದು. ಕೈಯ + ಮುಂದು = ಮುಂಗೈ. ಕೈಯಿಂದ ಭಿನ್ನವಲ್ಲದ ಅದರ ಮುಂದಿನ ಅಂಶ (ಭಾಗ) ಅರ್ಥಾತ್ ಕೈಯ ಮುಂದಿನ ಭಾಗ, ಅದು ಮುಂಗೈಯೇ. ಹೀಗೆ ಅಂಶಗತವಾದುದನ್ನು ಅರ್ಥಕ್ಕನುಗುಣವಾಗಿ ಅನ್ವಯಮಾಡಿ ಹೇಳುವ ರೀತಿ ಅವ್ಯಯೀಭಾವ ಅಥವಾ ಅಂಶೀ ಸಮಾಸ.

ಸಂಸ್ಕೃತ ಅವ್ಯಯೀ ಭಾವಕ್ಕೂ, ಕನ್ನಡದ ಅವ್ಯಯೀ ಭಾವಕ್ಕೂ ವ್ಯತ್ಯಾಸವಿದೆ. ಸಂಸ್ಕೃತದ ಅವ್ಯಯೀಭಾವದಲ್ಲಿ ಒಂದು ಪದ ಅವ್ಯಯಪೂರ್ವ ಇರುತ್ತದೆ. ಕನ್ನಡದಲ್ಲಿ ಹಾಗಲ್ಲ. ಅಂತರ್ + ಗಿರಿ = ಅಂತರ್ಗಿರಿ ಎಂಬುದು ಸಂಸ್ಕೃತದ ಅವ್ಯಯೀಭಾವ ಸಮಾಸ. ಇಲ್ಲಿ ಪೂರ್ವ ಪದವಾದ 'ಅಂತರ್' ಎಂಬುದು ಅವ್ಯಯ. ಗಿರಿ ಎಂಬುದು ನಾಮಪದ. ಮುಂಗಾಲ್ - ಇದು ಕನ್ನಡದ ಅವ್ಯಯಿಭಾವ. ಇಲ್ಲಿ ಅವ್ಯಯದ ಸಂಪರ್ಕವಿಲ್ಲ. -ಹೀಗೆಂದು ಡಾ. ಸಂಗಮೇಶ ಬಿರಾದಾರರು ವ್ಯಾಖ್ಯಾನಿಸಿದ್ದಾರೆ.[೬] ಶ್ರೀಯುತರು ಅವ್ಯಯೀಭಾವ ಎಂದರೆ ಕೇವಲ ಅವ್ಯಯ ಪದಗಳು ಎಂದು ಅರ್ಥಯಿಸಿದಂತೆ ತಿಳಿದುಬರುತ್ತದೆ. ಸಂಸ್ಕೃತದ ಅಂತರ್, ಬಹಿರ್ - ಮುಂತಾದ ಅವ್ಯಯಗಳಂತೆ ಕನ್ನಡ ಅವ್ಯಯ ಶಬ್ದಗಳಿರಬೇಕೆಂದು ತಿಳಿದಿರುವಂತೆ ತೋರುತ್ತದೆ.

"ಮುಂಗಾಲ್-ಇದು ಕನ್ನಡದ ಅವ್ಯಯೀಭಾವ. ಇಲ್ಲಿ ಅವ್ಯಯದ ಸಂಪರ್ಕವಿಲ್ಲ" ಎಂದಿದ್ದಾರೆ. ಡಾ. ಬಿರಾದಾರ್. ಮುಂಗಾಲ್ ಎಂಬಲ್ಲಿ ಅವ್ಯಯದ ಸಂಪರ್ಕ ಬೇಕಿಲ್ಲ. ಕಾಲ್ + ಮುಂದು = ಮುಂಗಾಲ್ ಎಂಬಲ್ಲಿಯ ಕಾಲ್ ಎಂಬುದು ಅವಯವದ ಅಥವಾ ಅಂಶ. ಆದುದರಿಂದ ಇದು ಅಂಶಿ ಸಮಾಸ.

ಇನ್ನು ಶ್ರೀಯುತರು "ನಾಗವರ್ಮನು ಅವ್ಯಯೀಭಾವ ಎಂದು ಏಕೆ ಕರೆದನೋ ತಿಳಿಯುತ್ತಿಲ್ಲ" ಎಂದು ಅನುಮಾನವನ್ನು ವ್ಯಕ್ತಪಡಿಸಿದ್ದಾರೆ.[೨] ನಾಗವರ್ಮನು ಸಂಸ್ಕೃತ ಸಮಾಸಗಳ ಹೆಸರುಗಳನ್ನು ಅನುಸರಿಸಿಯೇ ಕನ್ನಡದಲ್ಲಿಯೂ ಸಮಾಸಗಳನ್ನು ಹೆಸರಿಸಿರುವುದರಿಂದ - ಸಂಸ್ಕೃತದ ಹೆಸರನ್ನೇ ಸ್ವೀಕರಿಸುವುದಾದರೆ - ನಾಗವರ್ಮನಲ್ಲಿ ತಪ್ಪು ಕಾಣದು. "ಕೇಶಿರಾಜನು ಈ ಬಗ್ಗೆ ವಿಚಾರಿಸದೆ ನಾಗವರ್ಮನನ್ನೇ ಅನುಸರಿಸಿದ್ದಾನೆ" ಎಂದೂ ಕೂಡ ಶ್ರೀಯುತರು ಕೇಶಿರಾಜನನ್ನು ಕುರಿತು ಹೇಳಿದ್ದಾರೆ. ಕೇಶಿರಾಜನು ವ್ಯಾಕರಣದ ಬಹುತೇಕ ವಿಷಯಗಳಲ್ಲಿ ನಾಗವರ್ಮನನ್ನೇ ಅನುಸರಿಸಿರುವುದು ತಿಳಿದಿರುವ ಸಂಗತಿ.

"ನಾಗವರ್ಮನು ಮೇಗಣಕಾಲ್-ಮೇಂಗಾಲ್ ಎಂದು ವಿಗ್ರಹಿಸಿದ್ದರೆ, ಭಟ್ಟಾಕಳಂಕನು ಇದರ ತಿರುವು-ಮುರುವು ಮಾಡಿ ಕಾಲಮೇಗು-ಮೇಂಗಾಲ್ ಎಂದು ಕೊಟ್ಟಿದ್ದಾನೆ. ನಾಗವರ್ಮನ ವಿಗ್ರಹ ಸೂಕ್ತವೆನಿಸುತ್ತದೆ." ಎಂದು ಕೂಡ ವಿವರಿಸಿದ್ದಾರೆ. ಆದರೆ ನಾಗವರ್ಮನ ನಿರೂಪಣೆ "ಮೇಗಣಕಾಲ್ -ಮೇಂಗಾಲ್" ಎಂಬುದು ಎಲ್ಲಿಯದೋ ತಿಳಿಯದು. ಮೇಂಗಾಲ್ ಎಂದು ಮಾತ್ರ ಹೇಳಿದ್ದಾನೆ. ಅಲ್ಲದೆ ಅವ್ಯಯೀಭಾವ ಸಮಾಸವನ್ನು ಹಾಗೆ ತಿರುವು-ಮುರುವು ಮಾಡಿದರೇನೆ ಸಮಾಸದ ವಿಗ್ರಹವಾಕ್ಯ ಸರಿಯೆನಿಸುತ್ತದೆ. ಪೂರ್ವ ಪದದ ಅರ್ಥಕ್ಕೆ ಪ್ರಾಧಾನ್ಯ ದೊರೆಯಬೇಕಾದರೆ ಪದಗಳನ್ನು ತಿರುವು-ಮುರುವು ಮಾಡಿಯೇ ತೀರಬೇಕು. ವಿಗ್ರಹ ರೂಪವನ್ನು ನಿರ್ಣಯಿಸುವಾಗ ಅನ್ವಯ ರೂಪದಲ್ಲಿ ಅದರ ಅರ್ಥವು ಉತ್ತರ ಪದದಲ್ಲಿ ವ್ಯಕ್ತವಾಗುತ್ತಿರುವ ಅಂಶವನ್ನು ಮುಖ್ಯವಾಗಿಟ್ಟುಕೊಂಡು ಗಮನಿಸಬೇಕು. ಏಕೆಂದರೆ ಈ ಸಮಾಸವನ್ನು ವಿಗ್ರಹಿಸುವಾಗ ಸಮಸ್ತ ಪದದ ಪೂರ್ವ ಪದವು ಉತ್ತರ ಪದವಾಗಿ ನಿಂತು ಅರ್ಥದ ಪ್ರಾಮುಖ್ಯತೆಯನ್ನು ಪಡೆಯುವುದನ್ನು ಮನಗಾಣಬಹುದು.

"ಹಿಂಬೆದೆ, ಹಿಂಗಾಲ್-ಪದಗಳು ವಿಗ್ರಹ ರೂಪ ತಾಳಿದಾಗ ಎದೆಯ + ಹಿಂದೆ=ಹಿಂಬೆದೆ; ಕಾಲು + ಹಿಂದು = ಹಿಂಗಾಲ್ ಎಂದಾಗುವುವು. ಇಲ್ಲಿ, ಎದೆ, ಕಾಲ್ ಪದಗಳು ಪೂರ್ವ ಪದಗಳಾಗಿದ್ದು ಅರ್ಥವತ್ತಾದ ನಾಮ ವಾಚಿಗಳಾಗಿವೆ. ಹಿಂದು ಎಂಬ ಪದವು ಅಂಶಿಕವಾಗಿರುವ ಕಾರಣ ವಿಗ್ರಹರೂಪದಿಂದ ಇವು ಆದಿ ಪದ ಮುಖ್ಯ ಸಮಾಸವಾಗಿರುವಂತೆ ತೋರುತ್ತದೆ" ಎಂದಿರುವುದು ಮೇಲಿನ ಪ್ರಶ್ನೆಗೆ ಸಮಂಜಸವಾದ ಉತ್ತರವಾದೀತು.

೫. ದ್ವಂದ್ವ:

೧. ಸರ್ವ ಪದಾರ್ಥ ಪ್ರಧಾನೋ ದ್ವಂದ್ವಃ (ಕ.ಭಾ.ಭೂ. ಸೂ. ೧೩೦)

೨. 'ಸಮಸ್ತ ಪದಾರ್ಥಂ ದ್ವಂದ್ವಂ (ಶ.ಸ್ಮೃ. ಸೂ. ೪೭)

೩. ಪದಾರ್ಥ ಗಡಣಂ ದ್ವಂದ್ವಂ (ಶ.ಮ.ದ. ಸೂತ್ರ ೧೭೬)

೪. ದ್ವಂದ್ವಃ ಸಾಹಿತ್ಯೇ (ಶ.ಶಾ. ೩೧೪)

"ಎಲ್ಲ ಪದಗಳ (ಪೂರ್ವ ಮತ್ತು ಉತ್ತರ) ಅರ್ಥವು ಪ್ರಧಾನವಾಗಿರುವ ಸಮಾಸವು ದ್ವಂದ್ವ ಸಮಾಸವೆನಿಸಿಕೊಳ್ಳುತ್ತದೆ."

ಇಲ್ಲಿಯವರೆಗೂ ಪೂರ್ವ ಉತ್ತರ ಪದಗಳು ಮುಖ್ಯವಾಗಿರುವ ಸಮಾಸಗಳನ್ನು ವಿವರಿಸಿದ ನಾಗವರ್ಮನು ಈಗ ಎಲ್ಲ ಪದಗಳು ಮುಖ್ಯವಾಗಿರುವ ಸಮಾಸವನ್ನು ಕುರಿತು ವಿವರಿಸುತ್ತಿದ್ದಾನೆ. "ಸರ್ವ ಪದಾರ್ಥ ಪ್ರಧಾನ" ಎಂದಿರುವುದರಿಂದ, ಕೇವಲ ಪೂರ್ವ ಮತ್ತು ಉತ್ತರ ಪದಗಳು ಮಾತ್ರವಲ್ಲದೆ, ಬಹುಪದಗಳು ಇರಬಹುದು ಎಂದು ಇದರಿಂದ ತಿಳಿಯಬಹುದು.

"ಪದಾರ್ಥದ ಗಡಣಂ ದ್ವಂದ್ವಂ" ಎಂದು ಕೇಶಿರಾಜನು ತನ್ನ ಶ.ಮ.ದ. ಸೂತ್ರ ೧೭೬ರಲ್ಲಿ ನಾಗವರ್ಮನನ್ನೇ ಅನುಸರಿಸಿದ್ದಾನೆ. ಇದಕ್ಕೆ ವೃತ್ತಿಯಲ್ಲಿ "ಪದಾರ್ಥಗಳ ಸಮುಚ್ಚಯಂ ದ್ವಂದ್ವಮೆನಿಕ್ಕುಂ" ಎಂದಿದೆ. ಸಂಸ್ಕೃತ ಭಾಷೆಯಲ್ಲಿ ಇದಕ್ಕೆ "ಉಭಯ ಪದಾರ್ಥ ಸಮಾಸ" ಎಂದು ತಿಳಿಸಲಾಗಿದೆ. ಈ ದೃಷ್ಟಿಯಿಂದ ಈ ಸಮಾಸದಲ್ಲಿ ಎರಡು ಇಲ್ಲವೆ ಎರಡಕ್ಕಿಂತ ಹೆಚ್ಚಿನ ಶಬ್ದಗಳಿರುವುದಾಗಿ ತಿಳಿದು ಬರುತ್ತದೆ.

ನಾಗವರ್ಮನ ಉದಾಹರಣೆಗಳು : ೧. ಕೆಯ್ವನೆಗಳ್, ೨. ಕೆಱ್‌ತೊಱ್‌ಗಳ್, ೩. ಕೆಱ್‌ಮಱ್‌ಗಳ್, ೪. ನಾಡು ಬೀಡುಗಳ್, ೫. ಬೆಟ್ಟ ಘಟ್ಟಂಗಳ್, ೬. ಕೆಯ್ಕಾಲ್ಗಳ್, ೭. ಮರಗಿಡಗಳ್ - ಇತ್ಯಾದಿ.

ಮೇಲಿನ ಉದಾಹೃತ ಸಮಾಸ ಪದಗಳಲ್ಲಿ ಎರಡು ಶಬ್ದಗಳಿದ್ದು, ಅವು ಬಹುವಚನದಿಂದ ಕೂಡಿವೆ. ಇದು ಗಮನಾರ್ಹ. ಇಲ್ಲಿ ಸಮಸ್ತ ಪದಗಳಿಲ್ಲ.

ದ್ವಂದ್ವ ಸಮಾಸಕ್ಕೆ ಕೇಶಿರಾಜನು "ಆಟಪಾಟ ಕೂಟಂಗಳ್" ಮುಂತಾದ ಉದಾಹರಣೆಗಳನ್ನು ಕೊಟ್ಟಿದ್ದಾನೆ. ಇದನ್ನು ಆಟವೂ + ಪಾಟವೂ + ಕೂಟವೂ ಎಂದು ವಿಗ್ರಹಿಸಿದರೆ ಸರಿಯಾಗುತ್ತದೆ. ಎಲ್ಲ ಪದಗಳೂ ಪ್ರಥಮಾ ವಿಭಕ್ತಿಯಲ್ಲಿದ್ದು

ಪ್ರತಿಯೊಂದು ಪದವೂ ಸಮಾಸ ಪ್ರಾಧಾನ್ಯ ಪಡೆದಿರುತ್ತದೆ. ಇದರಲ್ಲಿ ಎಲ್ಲವೂ ನಾಮಪದಗಳೇ ಆಗಿವೆ."[೯]

ಕೇಶಿರಾಜನು ಕೊಡುವ ದ್ವಂದ್ವ ಸಮಾಸದ ಉದಾಹರಣೆಗಳು ನಾಗವರ್ಮನಿಗಿಂತ ಭಿನ್ನವಾಗಿವೆ. ಅವು ಸಂಸ್ಕೃತದ ಇತರೇತರ ದ್ವಂದ್ವ ಸಮಾಸಕ್ಕೆ ನಿದರ್ಶನಗಳಾಗಿವೆ. ಉದಾ: ೧. ಮರಗಿಡಬಳ್ಳಿ, ೨. ಪಕ್ಕಿ ಮಿಗಂಗಳ್, ೩. ಪುಲ್ಲೊಣವರು - ಇತ್ಯಾದಿ. "ಪದಗಳ ಗಡಣವು ಎಷ್ಟೋ ಸಲ ಏಕವಚನದಲ್ಲಿಯೂ ಇರುವುದುಂಟು. ಅದಕ್ಕೆ ಸಮಾಹಾರ ದ್ವಂದ್ವಂ ಎಂದು ಹೆಸರು."[೧೦] ಅದಕ್ಕೆ ಉದಾ: ಎಲೆಯಡಕೆ, ಎಲೆಯೂ + ಅಡಕೆಯೂ, ಎಲೆಯೂ, ಅಡಕೆಯೂ ಕೂಡಿದಾಗ 'ಎಲೆಯಡಕೆ' ಎಂಬುದು ಏಕವಚನವನ್ನು ನಿರ್ದೇಶಿಸುತ್ತದೆ.

ನಾಗವರ್ಮ ಕೇಶಿರಾಜಾದಿಗಳ ಬಹುತೇಕ ಉದಾಹರಣೆಗಳನ್ನು ಗಮನಿಸಿದರೆ, ದ್ವಂದ್ವ ಸಮಾಸವು ನಾಮಪದಗಳಲ್ಲೊಂದರಲ್ಲಿ ಮಾತ್ರ ಸಮಾಸವಾದಂತೆ ಕಂಡುಬರುತ್ತದೆ. ಅಲ್ಲದೆ ಬೇರೆ ಪದಗಳಾದ ಸರ್ವನಾಮ, ಕೃದಂತ, ಗುಣವಚನ - ಇವುಗಳಲ್ಲಿ ಸಮಾಸವಾದಂತೆ ಕಾಣಬರುತ್ತಿಲ್ಲ. ಮೇಲಾಗಿ ಸಮಸ್ತ ಪದಗಳು ಸಮಾಸದಲ್ಲಿ ಯಾವ ಪದವೂ ವಿಕಾರಗೊಳ್ಳದೆ ನಿಜಸ್ಥಿತಿಯಲ್ಲಿರುವುದು ಒಂದು ವಿಶೇಷ. ಅದು ಸಮಾಸದ ಲಕ್ಷಣವೂ ಹೌದು.

**೬. ಬಹುವ್ರೀಹಿ:**

೧. ಅನ್ಯ ಪದಾರ್ಥ ಪ್ರಧಾನೋ ಬಹುವ್ರೀಹಿ (ಕ.ಭಾ.ಭೂ. ಸೂ. ೧೩೧)

೨. ದ್ವಿಪದಂ ಮೇಣ್ ಬಹುಪದಂ ಅನ್ಯ ಪದಾರ್ಥದೊಳ್
ಬಂದಿನಿಲೆ ಬಹುವ್ರೀಹಿ (ಶ.ಸ್ಮೃ. ಸೂತ್ರ ೪೭)

೩. ಪದನೆರಡುಂ ಮೇಣ್ಪಲವುಂ ಪದಾರ್ಥಮುಂ ಬಯಸುತ್ತಿರೆ
ಬಹುವ್ರೀಹಿ (ಶ.ಮ. ದ. ಸೂತ್ರ ೧೭೬)

೪. ಅನ್ಯೇರ್ಥೇ ಬಹುವ್ರೀಹಿಃನಿತ್ಯಂ (ಶ.ಶಾ.ಸೂ. ೩೧೦,೩೧೧)

ಎರಡು ಇಲ್ಲವೆ ಹಲವು ಪದಗಳು ಕೂಡಿ ಬೇರೊಂದು ಅರ್ಥವನ್ನು ಕೊಡುವುದು ಬಹುವ್ರೀಹಿ ಸಮಾಸದ ಲಕ್ಷಣ. ಉದಾ: ಕರ್ಬಿನಬಿಲ್ ಆವಂಗೆ ಅವಂ ಕರ್ಬುವಿಲ್ಲಂ. ಅಂತೆ ಕುಡುವಿಲ್ಲಂ, ಕಲ್ದೆರ್ದೆಯಂ, ಕುಸಿಗೊರಲಂ, ನುಚ್ಚಕ್ಕಿ ಪಲ್ಲಂ, ಕೆಂದಲೆಯಂ, ಮೆಲ್ಲಡಿಯಂ, ಕುಜುಗೆಯ್ಯಂ, ಬಿಸುಗದಿರಂ, ತಣ್ಗದಿರಂ - ಈ ಮೊದಲಾದವು.

ಬಹುವ್ರೀಹಿ ಸಮಾಸವು ಯಾವೊಂದು ಪದಕ್ಕೂ ಪ್ರಾಧಾನ್ಯ ಕೊಡದಿರುವುದು, ಅನ್ಯ ಪದಾರ್ಥ ಪ್ರಾಧಾನ್ಯ ಪಡೆದಿರುವುದು ವಿಶೇಷ. ಇದನ್ನು ಹಿಂದಿನ ಯಾವೊಂದು ಗುಂಪಿಗೆ ಸೇರಿಸದೆ ಪ್ರತ್ಯೇಕ ಗುಂಪಿಗೆ ಸೇರಿಸಬೇಕಾಗಿದೆ. ತತ್ಪುರುಷ, ಕರ್ಮಧಾರಯ, ದ್ವಿಗು - ಇವುಗಳಲ್ಲಿ ಉತ್ತರ ಪದಕ್ಕೆ ಪ್ರಾಧಾನ್ಯವಿದ್ದರೆ, ಅವ್ಯಯೀಭಾವ ಪೂರ್ವ ಪದದ ಪ್ರಾಧಾನ್ಯ ಪಡೆದಿದ್ದರೆ, ದ್ವಂದ್ವವು ಎರಡು ಪದಗಳಿಗೆ ಮುಖ್ಯತೆ ಪಡೆದಿದ್ದರೆ, ಬಹುವ್ರೀಹಿ ಸಮಾಸ ಅನ್ಯ ಪದಾರ್ಥ ಪ್ರಾಧಾನ್ಯ ಪಡೆದಿದೆ.

ಆದರೆ ಅದರ ಉದಾಹರಣೆಗಳನ್ನು ನೋಡುತ್ತಿದ್ದರೆ, ಅದು ಕರ್ಮಧಾರಯ ಸಮಾಸವನ್ನು ಹೋಲುತ್ತದೆ. ಕರ್ಮಧಾರಯದಂತೆ ಇಲ್ಲಿಯ ಪೂರ್ವ ಪದವು ಗುಣವಾಚಿಯಾಗಿದ್ದು ಉತ್ತರ ಪದವು ನಾಮಪದವಾಗಿದೆ. ಆದರೆ ಕರ್ಮಧಾರಯದಲ್ಲಿ ನಾಮಪದವಾದ ಉತ್ತರ ಪದ ಪ್ರಧಾನ. ಬಹುವ್ರೀಹಿಯಲ್ಲಿ ಹಾಗಿಲ್ಲದಿರುವುದರಿಂದ ವ್ಯತ್ಯಾಸ.

ನಾಗವರ್ಮನು ಶಬ್ದಸ್ಮೃತಿಯಲ್ಲಿ "ದ್ವಿಪದಂ ಮೇಣ್ ಬಹುಪದಂ" ಎಂದೂ ಕೇಶಿರಾಜನು "ಪದಮೆರಡುಂ ಪಲವು ಮೇಣ್" ಎಂದಿರುವುದರಿಂದ ಎರಡಕ್ಕಿಂತ ಹೆಚ್ಚು ಪದಗಳು ಕೂಡ ಇರಬಹುದೆನ್ನಬಹುದು. ಆದರೆ ನಾಗವರ್ಮನು ಕೊಟ್ಟ ಉದಾಹರಣೆಗಳೆಲ್ಲವೂ ದ್ವಿಪದ ಯುಕ್ತವೇ ಆಗಿರುವುದು ಸೋಜಿಗ. ಅದು ಗಮನಾರ್ಹವೂ ಕೂಡ.

## ೭. ಕ್ರಿಯಾ ಸಮಾಸ :

"ಕಾರಕಂ ಪರೇಣ ಸಮಸ್ತ ಕ್ರಿಯಾ ಪದೇನ" (ಕ.ಭಾ.ಭೂ. ಸೂತ್ರ ೧೩೩). ಕರ್ಮ ಮೊದಲಾದ ಕಾರಕ ಪದ ಸಮಸ್ತ ಕ್ರಿಯಾ ಪದದೊಡನೆ ಸಮಾಸಿಸಲ್ಪಡುತ್ತದೆ. ಉದಾ: ೧. ಉರೇಜಿಲ್ ಬಂದಂ, ೨. ನಾಟ್ಕಿಡೆ ಪೋದಂ, ೩. ತೆಜುದೆತ್ತಂ, ೪. ಎಟ್ಟುಗೊಂಡಂ, ೫. ಸೆಜೆಯಿರ್ದ, ೬. ಒಕ್ಕಲೋದಂ, ೭. ಬಿಲ್ಲೆತ್ತಿದಂ, ೮. ಬಳೆದೊಟ್ಟಂ, ೯. ಸೇದಪಡೆದಂ.

ನಾಗವರ್ಮನು ಕ್ರಿಯಾ ಸಮಾಸದ ವಿಧಾನವನ್ನು ಹೇಳಿರುವನೇ ಹೊರತು ಸಮಾಸದ ಹೆಸರನ್ನು ಸೂಚಿಸಿಲ್ಲ. ಅಲ್ಲದೆ ಹಿಂದಿನ ಸಮಾಸಗಳಲ್ಲಿ ಪದಗಳಲ್ಲಿ ಯಾವುದು ಮುಖ್ಯ ಎಂಬುದನ್ನು ಹೇಳಲಾಗಿತ್ತು. ಆದರೆ ಇಲ್ಲಿ ಆ ಮಾತನ್ನೇ ಎತ್ತಿಲ್ಲ. ಈ ಸಮಾಸದಲ್ಲಿ ಕ್ರಿಯೆ ಬಂದಿರುವುದರಿಂದ, ಕ್ರಿಯಾ ಸಮಾಸವೆಂದು ತಿಳಿಯಲಾಗಿದೆ. ಹೆಚ್ಚಾಗಿ ಕ್ರಿಯಾ ಸಮಾಸವು ಕರ್ಮಕಾರಕವನ್ನು ಪೂರ್ವದಲ್ಲಿ ಪಡೆದಿರುವುದು ಕಂಡು ಬರುತ್ತದೆ. ಇದು ಕನ್ನಡಕ್ಕೆ ವಿಶಿಷ್ಟವಾದ ಕ್ರಿಯಾ ಸಮಾಸ.

'ಸಮರ್ಥ ಕ್ರಿಯಾಪದ'ವೆಂದು ಹೇಳಿರುವುದರಿಂದ, ಸಮಾಸದ ಉತ್ತರ ಪದದ ಕ್ರಿಯೆ ಸಮರ್ಥವಾಗಿರಬೇಕು. ಬಂದಂ, ಪೋದಂ, ಎತ್ತಂ, ಕೊಂಡಂ, ಇರ್ದಂ, ಎತ್ತಿದಂ, ತೊಟ್ಟಂ, ಪಡೆದಂ - ಇವು ಉತ್ತರ ಪದಗಳಲ್ಲಿರುವ ಕ್ರಿಯಾ ಪದಗಳು.

ಮುಂದಿನ ಸೂತ್ರದಲ್ಲಿ "ಅಕಾರಾಂತಾಸ್ಮ್ರೆ" (ಸೂತ್ರ ೧೩೪) ಎಂದಿರುವುದರಿಂದ "ಅಕಾರಾಂತ ಶಬ್ದಗಳ ಮುಂದೆ ಬಿಂದು ಬರುತ್ತದೆ" ಎಂದು ತಿಳಿಯಬಹುದು. ಅದಕ್ಕೆ ಉದಾಹರಣೆ - ಮನಂಗೊಳ್ಳುಂ, ಗುಣಂಗೊಂಡಂ ಎಂಬಿವನ್ನು ನೋಡಬಹುದು. ಕೊಳ್ಗುಂ, ಕೊಂಡಂ, - ಇವು ಕನ್ನಡ ಪದಗಳು. ಸಂಸ್ಕೃತ ಪೂರ್ವ ಪದಗಳೊಂದಿಗೆ ಕನ್ನಡದ ಉತ್ತರ ಪದಗಳು ಬೆರೆತು ಸಮಾಸವಾಗಬಹುದು ಎಂದು ನಾಗವರ್ಮನ ಇಂಗಿತ. ಈ ಸಮಾಸವನ್ನು ಪ್ರಾರಂಭಿಸುವ ಮೊದಲಿಗೆ ನಾಗವರ್ಮನು-

"ಸಮ ಸಂಸ್ಕೃತಂ ದೇಶೀಯ ಪದೇನ ಸಮಂ ಸಮಸ್ಯತೇ" (ಸೂತ್ರ ೧೩೨) ಎಂದು ಹೇಳಿರುವುದರಿಂದ ಮತ್ತು ಅದೇ ಅರ್ಥದ ಮಾತನ್ನು ಕಾವ್ಯಾವಲೋಕನದ ಶ.ಸ್ಮೃಯಲ್ಲೂ ಕಾಣಬಹುದು.

"ಬೆರಸಿ ಸಮ ಸಂಸ್ಕೃತಂಗಳ್ ಬರೆ
ಕನ್ನಡದೊಡನೆ ಸಮತೆಯಿಂದಂ ಸಲ್ಗುಂ"

ಒಟ್ಟಾರೆ ಸಂಸ್ಕೃತ ಕನ್ನಡ ಪದಗಳ ಬೆರಕೆಯಿಂದ ಈ ಸಮಾಸವನ್ನು ಮಾಡಬಹುದೆಂದು ವೈಯಾಕರಣರ ಅಭಿಪ್ರಾಯ. ಕೇಶಿರಾಜನು ಕೂಡ ಈ ವಿಷಯದಲ್ಲಿ ನಾಗವರ್ಮನನ್ನೇ ಅನುಸರಿಸಿದ್ದಾನೆ. ವಜ್ರಂಗೊಳೆ, ಚಕ್ರಂಗೊಳೆ - ಎಂಬಂತಹ ಉದಾಹರಣೆಗಳಲ್ಲಿ "ಇದಱೊಳರಿ ಪದ ನಿರ್ದೋಷಂ" ಎಂದು ಹೇಳಿರುವುದನ್ನು ಕಾಣಬಹುದು.

"ನಾಗವರ್ಮನು ಉತ್ತರ ಪದಾರ್ಥ ಪ್ರಧಾನವಾದ ತತ್ಪುರುಷ, ಕರ್ಮಧಾರೆಯ, ದ್ವಿಗುಗಳನ್ನು ಒಂದು ಗುಂಪನ್ನಾಗಿಯೂ ಬಹುವ್ರೀಹಿ, ದ್ವಂದ್ವ, ಅವ್ಯಯೀಭಾವಗಳನ್ನು ಇನ್ನೊಂದು ಗುಂಪನ್ನಾಗಿಯೂ ವಿವರಿಸಿದಂತೆ, ಕೇಶಿರಾಜನು ವಿವರಿಸಿದ್ದಾನೆ. ಕನ್ನಡದ್ದೇ ಆದ ಕ್ರಿಯಾ ಸಮಾಸದ ಲಕ್ಷಣವನ್ನು ಹೇಳಿದ್ದರೂ, ಅದನ್ನು ಹೆಸರಿಸಿ ಕರೆದಿಲ್ಲ. ಕೇಶಿರಾಜನಾದರೂ ಕ್ರಿಯಾ ಸಮಾಸವೆಂದು ಸ್ಪಷ್ಟವಾಗಿಯೇ ನುಡಿದಿದ್ದಾನೆ."[೧೧]

ಹೀಗೆ ನಾಗವರ್ಮನು ತನ್ನ ಕ.ಭಾ.ಭೂ.ದಲ್ಲಿ ಸಂಸ್ಕೃತದ 'ಸಮಾಸಚಕ್ರಂ'ದಲ್ಲಿರುವ ತತ್ಪುರುಷ, ಕರ್ಮಧಾರೆಯ, ದ್ವಿಗು, ದ್ವಂದ್ವ, ಬಹುವ್ರೀಹಿ - ಇವುಗಳನ್ನು ಸಂಸ್ಕೃತದಲ್ಲಿದ್ದಂತೆ ನಿರೂಪಿಸಿದ್ದಾನೆ. ಅವ್ಯಯೀ ಭಾವ ಎಂಬ ಸಮಾಸವನ್ನು ಸಂಸ್ಕೃತದಿಂದಲೇ ಎರವಲು ಪಡೆದಿದ್ದರೂ, ಅಲ್ಲಿ ಕನ್ನಡತನವನ್ನು

ಗುರುತಿಸಿದ್ದಾನೆ. ಕನ್ನಡದ ಕ್ರಿಯಾ ಸಮಾಸದ ಬಗ್ಗೆಯೂ ಸೂಚಿಸಿದ್ದಾನೆ. ಈ ನಿರೂಪಣಾ ವಿಧಾನವನ್ನೇ ಕೇಶಿರಾಜನು ವಿಸ್ತೃತಗೊಳಿಸಿದ್ದಾನೆ. ಒಟ್ಟು ನಾಗವರ್ಮನು ನಿರೂಪಿಸಿದ ಸಮಾಸಗಳ ಸಂಖ್ಯೆ ಆರು.

ಕೇಶಿರಾಜ ಕರ್ಮಧಾರೆಯ ಪ್ರಭೇದವಾಗಿ ಗಮಕ ಸಮಾಸವನ್ನು ಪ್ರತ್ಯೇಕವಾಗಿ ಹೇಳಿರುವುದನ್ನು ಇಲ್ಲಿ ಪ್ರಸ್ತಾಪಿಸಬಹುದು. ಸಮಾಸ ಕಾರ್ಯಗಳನ್ನು ಹೇಳುವಾಗ ಅನುಕರಣ ಶಬ್ದಗಳಲ್ಲಿ 'ವೀಪ್ಸೆ'ಯನ್ನು ಕೇಶಿರಾಜನು ಹೇಳಿದ್ದಾನೆ. (ಸೂ. ೨೦೪). ಕಿಟ್ಟೆಲ್ಲರನ್ನು ಅನುಸರಿಸಿ (೨೦೪ ಸೂತ್ರಕ್ಕೆ ಕಿಟ್ಟಿಲ್ ಅನುವಾದ) ಇದನ್ನು ಡಾ. ವಿ. ಶಿವಾನಂದರು 'ವೀಪ್ಸಾ ಸಮಾಸ' ಎಂದು ಕರೆದಿದ್ದಾರಾದರೂ, ಕೇಶಿರಾಜನ ಸಮಾಸ ನಿರೂಪಣೆಯಲ್ಲಿ ವೀಪ್ಸಾ ಸಮಾಸ ಎಂಬ ಪ್ರತ್ಯೇಕ ಸಮಾಸಕ್ಕೆ ಸ್ಥಾನವಿಲ್ಲ. ಒಟ್ಟಿನಲ್ಲಿ ಸಮಾಸ ಕಾರ್ಯಗಳನ್ನೆಲ್ಲ ಗಮನಿಸಿದರೆ ಹಲವು ಪ್ರಭೇದಗಳನ್ನು ಗುರುತಿಸುವ ಸಾಧ್ಯತೆಯಿದೆ.

**ಸಮಾಸ ಕಾರ್ಯಗಳು :**

೧. **ಕರ್ಮಧಾರಯ** : ೧. ಕರ್ಮಧಾರಯ ಸಮಾಸದಲ್ಲಿ "ವಿಶೇಷ್ಯವು ಉತ್ತರ ಪದವಾಗಿರಲು ಪೂರ್ವ ಪದದ ಉಪಾಂತ ಸ್ವರ ಸಹಿತ ಮುಂದಿನ ಅವಯವ ಲೋಪವಾಗುವುದಾಗಿ" ನಾಗವರ್ಮನು ಕ.ಭಾ.ಭೂ.ದ ಸೂತ್ರ ೧೩೫ರಲ್ಲಿ ವಿವರಿಸಿದ್ದಾನೆ. ಅದಕ್ಕೆ ಉದಾಹರಣೆಗಳು

ಅ. ಇನಿದು + ಮಾವು = ಇಮ್ಮಾವು

ಆ. ಕೂರಿತು + ಬಾಳ್ = ಕೂರ್ವಾಳ್

ಅಂತೆ ಇಮ್ಮಳಿಮ, ಸುಣ್ಣರಂ, ಜಾಣ್ಮಾತು, ಒಳ್ನುಡಿ - ಇತ್ಯಾದಿ ಉದಾಹರಣೆಗಳನ್ನು ನೋಡಬಹುದು.

೨. "ಉಪಾಂತ್ಯ ಸ್ವರ ಸಹಿತ ಮುಂದಿನ ಅವಯವ ಲೋಪವಾಗುವಾಗ ಪೂರ್ವ ಪದದ ಆದಿಯ ಇಕಾರ ಎಕಾರವಾಗುತ್ತದೆ" ಎಂದು ಸೂತ್ರ ೧೩೬ರಲ್ಲಿ ಹೇಳಲಾಗಿದೆ.

ಉದಾ : ೧. ಪೆರ್ಮರಂ ಪಿರಿದು + ಮರಂ

೨. ಪೆರ್ಬಾಳ್ ಪಿರಿದು + ಬಾಳ್

೩. ಪೆರ್ಬಾವು ಪಿರಿದು + ಪಾವು

೪. ಬೆಳ್ದಿಂಗಳ್ ಬಿಳಿದು + ತಿಂಗಳು

೫. ಬೆಳ್ಮುಗಿಲ್ ಬಿಳಿದು + ಮುಗಿಲು

ಮೇಲಿನ ಉದಾಹರಣೆಗಳ ಪಿರಿದು+ಮರಂ>ಪೆರ್ಮರಂ ಮತ್ತು ಬಿಳಿದು+ತಿಂಗಳು=ಬೆಳ್ದಿಂಗಳ್ ಎಂಬಲ್ಲಿ ಗುಣವಚನಗಳಾದ ಪಿರಿದು, ಬಿಳಿದು ಎಂಬಿವುಗಳ ಗುಣವಾಚಕವೆಂದು ಸೂಚಿಸುವ 'ಇದು' ಎಂಬುದನ್ನು ಕಳೆದರೆ ಪಿರ್, ಬೆಳ್ ಎಂಬ ರೂಪಗಳು ಉಳಿಯುತ್ತವೆ. ಅವುಗಳ ಆದ್ಯಕ್ಷರಕ್ಕೆ ಎಕಾರವು ಬಂದು ಪೆರ್, ಬೆಳ್ ಎಂಬ ರೂಪಗಳು ಸಿದ್ಧಿಸುತ್ತವೆ.

ನಾಗವರ್ಮನು ಈ ಸಮಾಸದ ವಿಕಲ್ಪಕ್ಕೆ 'ಬಿಣ್ಗೊನೆ' ಎಂಬುದನ್ನು ಉದಾಹರಿಸಿದ್ದಾನೆ. ಬಿಣ್ಗೊನೆ>ಬಿಣ್ಣಿತ್ತು+ಗೊನೆ. ಬಿಣ್ಣಿತ್ತು ಎಂಬುದು ಪಿರಿದು ಇತ್ಯಾದಿಯಂತೆ 'ಇದು' ಅಂತ್ಯವಾಗಿರುವ ಗುಣವಚನವಲ್ಲದ ಕಾರಣ ಈ ನಿಯಮಕ್ಕೊಳಗಾಗುವುದಿಲ್ಲವೆನ್ನಬಹುದು. ಅಂತೆ ಮತ್ತೊಂದು ಉದಾಹರಣೆ 'ಇಮ್ಮಾವು' ಎಂಬುದು.

೩. "ಉತ್ತರ ಪದದ ಆದಿಯಲ್ಲಿ ಸ್ವರವಿದ್ದರೆ, ಪೂರ್ವಪದದ ಆದಿಯ ಹ್ರಸ್ವವು ದೀರ್ಘವಾಗುತ್ತವೆ" - ಎಂದು ಸೂತ್ರ ೧೩೮ರಲ್ಲಿ ಹೇಳಲಾಗಿದೆ (ಸ್ವರಾವೌ ದೀರ್ಘಸ್ತುಗುರೋಃ)

ಉದಾ : ೧. ಕರಿದು + ಒಸಡು > ಕಾರೊಸಡು

೨. ಕರಿದು + ಇರುಳ್ > ಕಾರಿರುಳು

ಮೇಲಿನ ಪ್ರಯೋಗಗಳಲ್ಲಿ ಕರಿದು ಎಂಬುದು ಪೂರ್ವಪದವಾಗಿದ್ದು ಮುಂದೆ ಸ್ವರವು ಪರವಾಗಲು ಕಾರ್ ಎಂಬ ರೂಪವನ್ನು ಪಡೆಯುತ್ತದೆ. ಇಂತಹ ದೀರ್ಘಾದೇಶವು ದ್ವಿಗು ಸಮಾಸದಲ್ಲಿ ಬರುವುದುಂಟು. ಉದಾ: ಒಂದು+ಎಂಜಲ್=ಓರೆಂಜಲ್ ಎಂಬಂತೆ ಉತ್ತರ ಪದದ ಆದಿಯಲ್ಲಿ ಸ್ವರವಿದ್ದು ಪೂರ್ವ ಪದದಲ್ಲಿ ಅಗುರ್ವಕ್ಷರವಿದ್ದರೆ ಆದಿ ಹ್ರಸ್ವವು ದೀರ್ಘವಾಗುವುದಿಲ್ಲ. ಉದಾ: ಪಚ್ಚನೆ+ಓಲೆ>ಪಚ್ಚೋಲೆ.

ನಾಗವರ್ಮ ಕ.ಭಾ.ಭೂ. ದಲ್ಲಿ "ನಚ ಕ್ವಚನೇತ್ಯನುವರ್ತತೇ। ತಸ್ಮಾದಿಹ ದೀರ್ಘೋ ಭವತಿ" ಎಂದು ಹೇಳಿ ಈಂಗೊರಲ್, ಈಂಚರಂ, ಈಂಗಡಲ್, ಈಂಬುಳಿ ಎಂಬ ಉದಾಹರಣೆಗಳನ್ನು ಕೊಟ್ಟಿರುತ್ತಾನೆ.

ಇವನ್ನು ಕಾವ್ಯಾವಲೋಕನದಲ್ಲಿ ನಾಗವರ್ಮ ಬಹುಳವಾಗಿ ತೆಗೆದುಕೊಂಡು "ಇಂಚರಂ" ಎಂಬ ಉದಾಹರಣೆಯನ್ನು ಕೊಟ್ಟಿದ್ದಾನೆ (ಪ. ೨೨೭), ಕೇಶಿರಾಜನು ಈ ಸಂದರ್ಭದಲ್ಲಿ 'ಬಹುಳದಿಂ ವ್ಯಂಜನಂ ಪರಮಾದಲ್ಲಿಯುಂ ಆದಿಗೆ

ದೀರ್ಘಮಾಯ್ತು" ಎಂದು ಹೇಳಿ (ಸೂ. ೧೯೧) ಈಂಚರಂ, ಈಂಬುಳಿ, ಈಂಗಡಲ್ ಮುಂತಾದ ಪ್ರಯೋಗಗಳನ್ನು ಕೊಟ್ಟಿದ್ದಾನೆ.

೪. "ಣಟಳನತಾನಾಂ ದ್ವಿರ್ಭಾವಃ" (ಸೂತ್ರ ೧೩೯)

'ಣಟಳನತ ಎಂಬ ಅಕ್ಷರಗಳಿಗೆ ಸ್ವರಾದಿ ಪದ ಪರವಾದರೆ ಉಪಾಂತ್ಯಾವಯವು ಲೋಪವಾಗುತ್ತದೆ' ಅಲ್ಲದೆ ಈ, ಣ, ಟ, ಳ, ನ, ತ ಗಳಿಗೆ ದ್ವಿತ್ವವು ಬರುತ್ತದೆ.

ಉದಾ : ತಣ್ಣಿತು+ಎಲರ್ - ತಣ್+ಎಲರ್=ತಣ್ಣೆಲರ್. ಇದಕ್ಕೆ ಇನ್ನೂ ಕೆಲವು ಉದಾಹರಣೆಗಳನ್ನು ಕಾಣಬಹುದು. ಕಟ್ಟಾಯಂ, ಒಳ್ಳಾಳ್, ಇನ್ನುಣಿಸು, ಕಿತ್ತಡಿ ಎಂಬಂತೆ. ಇದೇ ಅಭಿಪ್ರಾಯವನ್ನು ನಾಗವರ್ಮನು ಶ.ಸ್ಮೃ.ಯ ಸೂತ್ರ ೫೦ರಲ್ಲಿ

ಸ್ವರಮಾದಿಯಪ್ಪುವವು ಮುಂ
ತಿರೆ ದೀರ್ಘಂ ಮೊದಲೊಳಗುರುಗಕ್ಕುಂ ತದವಾಂ
ತರದೊಳ್ ಣಟಳನತಂಗಳ್
ದೊರೆಕೊಳೆ ತಳೆಗುಂ ದ್ವಿರುಕ್ತಿಯಂ ಬಹುಳತೆಯಿಂ॥

ಕೇಶಿರಾಜನಾದರೂ ತನ್ನ ಶ.ಮ.ದ.ದ. ಸೂತ್ರ ೧೯೧ರಲ್ಲಿ-

ಅಗುರು ಪದಾದಿಗೆ ದೀರ್ಘಂ
ನೆಗಟ್ಗುಂ ಮತ್ತಲ್ಲಿ ಬಂದು ಣಟಳನತಂಗಳ್
ಪುಗೆ ಪೆಱತೇಂ ದ್ವಿರ್ಭಾವಂ
ನೆಗಟ್ಗುಂ ಸ್ವರಮಿದಿರೊಳದವೆ ಬಹುಳತೆಯಿಂದಂ

ಎಂದು ಉದಾಹರಣೆಗಳಾಗಿ ಪೇರೊಡಲ್, ತಣ್ಣೆಲರ್, ನಿಟ್ಟೆಯ್ದೆ, ಒಳ್ಳಾಳ್, ಕಿತ್ತಡಿ, ಈಂಚರ- ಈ ಮೊದಲಾದುವುಗಳನ್ನು ನಾಗವರ್ಮನಿಂದಲೇ ಎರವಲು ಪಡೆದಿದ್ದಾನೆ. ಭಟ್ಟಾಕಳಂಕನು ಕೂಡ ಈ ವಿಷಯವನ್ನು ಒಂದೆಡೆ ಹೇಳದೆ ಅಲ್ಲಲ್ಲಿ ಹೇಳಿ, ಕೇವಲ ತಣಗಳಿಗೆ ಮಾತ್ರ ದ್ವಿರ್ಭಾವವನ್ನು ಕಲ್ಪಿಸಿದ್ದಾನೆ.

೫. ಕಡಿದು, ನಿಡಿದು - ಎಂಬ ಶಬ್ದಗಳಿಗೆ ಯಾವುದಾದರು ಒಂದು ಸ್ವರವು ಪರವಾಗಲು (ಈ ಹಿಂದೆ ಹೇಳಿದಂತೆ) ಉಪಾಂತ ಸ್ವರ ಸಹಿತ ಅವಯವ ಲೋಪವಾಗಿ 'ಡ' ಕಾರಕ್ಕೆ 'ಟ'ಕಾರವಾಗುತ್ತದೆ. ಇದನ್ನು ಮುಂದಿನ ಸೂತ್ರದಲ್ಲಿ ತಿಳಿಸಲಾಗಿದೆ.

ಸೂತ್ರ : "ಕಡಿದು ನಿಡಿದು ದ್ವಯಸ್ಯಾದ್ಯೈಕ ಸ್ವರಾತ್ಪರ ಸ್ಯಟಃ" (ಸೂ. ೧೪೦)

ಉದಾ : ಕಡಿದು> ಕಟ್ + ಆಯ = ಕಟ್ಟಾಯಂ (ಕಾವ್ಯಾ. ೨೨೯)
ಕಡಿದು> ಕಟ್ + ಆಳಂ = ಕಟ್ಟಾಳಂ

ನಿಡಿದು> ನಿಟ್ + ಅಡಕಿಲ್ = ನಿಟ್ಟಡಕಿಲ್

ನಿಡಿದು> ನಿಟ್ + ಆಯು = ನಿಟ್ಟಾಯು (ಕಾವ್ಯಾ. ೨೨೯)

ಮೇಲಿನ ಸೂತ್ರವು ಹಿಂದಿನ ಸೂತ್ರದಂತೆ ಇದ್ದರೂ ಇಲ್ಲಿಯ ವಿಶೇಷ ಡ>ಟ ಆಗಿರುವುದು

೬. "ನಡೋಷ್ಟ" (ಸೂತ್ರ ೧೪೧)

'ನಡು ಎಂಬ ಶಬ್ದಕ್ಕೆ ಸ್ವರಾದಿಶಬ್ದಗಳು ಪರವಾಗಲು ಅಲ್ಲಿಯೂ ಡ ಕಾರಕ್ಕೆ ಟ ಕಾರವು ಆದೇಶವಾಗಿ ಬರುವುದು.

ಉದಾ : ನಡು: ನಟ್+ಇರುಳ್=ನಟ್ಟಿರುಳ್

ನಡು>ನಟ್+ಅಡವಿ=ನಟ್ಟಡವಿ

ಟೀಕುವಿನಲ್ಲಿ 'ನಡುವೆಂಬುದರ ಡಕಾರಕ್ಕೆಯುಂ ಟ ಕಾರಮಕ್ಕುಂ" ಎಂದು ಸೂತ್ರದ ಅರ್ಥವನ್ನೇ ತಿಳಿಸಿ ಸುಲಭಗೊಳಿಸಿದೆ.

ಕಿಱಿದು ಎಂದು ಶಬ್ದಕ್ಕೆ ಸ್ವರ ಪರವಾಗಲು 'ಕಿತ್' ಆದೇಶವಾಗುವುದು - ಎಂಬುದನ್ನು ಮುಂದಿನ ಸೂತ್ರ ೧೪೨ರಲ್ಲಿ ತಿಳಿಸಲಾಗಿದೆ.

"ಕಿಱಿದೋಸ್ತಃ" ಎಂಬಂತೆ ಅದಕ್ಕೆ ಉದಾ:

ಕಿಱಿದು > ಕಿತ್ + ಈರೆ=ಕಿತ್ತೀರೆ

ಕಿಱಿದು > ಕಿತ್ + ಅಡಿ=ಕಿತ್ತಡಿ

ಟೀಕುವಿನಲ್ಲಿ "ಕಿಱಿದು" ಎಂಬ ಶಬ್ದದ ಕಡೆಯಲ್ಲಿ ತಕಾರಮಕ್ಕುಂ" ಎಂದಿದೆ. ಇಲ್ಲಿಯವರೆಗೆ ಕಡಿದು, ನಿಡಿದು - ಈ ಮೊದಲಾದವುಗಳಿಗೆ ಸ್ವರ ಪರವಾದರೆ ಏನಾಗಬಹುದೆಂದು ತಿಳಿಸಿದ ನಾಗವರ್ಮನು ಮುಂದಿನ ಸೂತ್ರಗಳಲ್ಲಿ ಅವುಗಳಿಗೆ ವ್ಯಂಜನ ಪರವಾದರೆ ಏನಾದೀತು ಎಂದು ವಿವರಿಸಿದ್ದಾನೆ.

"ತೇಷಾಮುದಂತತ್ವಂ ವ್ಯಂಜನೇಷು" (ಸೂ. ೧೪೩)

ಉದಾ : ಕ. ೧ : ಕಡಿದು + ಕುದುರೆ > ಕಡುಕುದುರೆ

ಕಡಿದು + ವಾಳ್ > ಕಡುವಾಳ್

ನಿಡಿದು : ನಿಡಿದು + ತೋಳ್ > ನಿಡುದೋಳ್

ನಿಡಿದು + ಪುರ್ಬು > ನಿಡುವುರ್ಬು

ಕಿರಿದು : ಕಿರಿದು + ನೆಲೆ > ಕಿಱುನೆಲೆ

ಕಿರಿದು + ಮಿಡಿ > ಕಿರುಮಿಡಿ

ಪೊಸತು, ಪೞದು, ಎಳದು, ಪೊಱಗು, ಒಳಗು - ಎಂಬ ಶಬ್ದಗಳಲ್ಲಿ ಉಪಾಂತ್ಯ ಸ್ವರಾದ್ಯವಯವ ಲೋಪ. ಅಕಾರವಿರುವುದರಿಂದ ಅದನ್ನು ನಿಪಾತವೆನ್ನಲಾಗಿದೆ.

"ಪೊಸತ್ವಾದೀನಾಮದಂತತ್ವ ನಿಪಾತೇ" (ಸೂ. ೧೪೪) ಎಂದಿದ್ದಾನೆ, ನಾಗವರ್ಮ.

ಉದಾ : ಪೊಸತು + ಸುಗ್ಗಿ > ಪೊಸಸುಗ್ಗಿ

ಪೊಸತು + ಅಡಕೆ > ಪೊಸಅಡಕೆ

ಪೞದು + ಕೞವೆ > ಪೞಗೞವೆ

ಪೞದು + ಅಲಗು > ಪೞಅಲಗು

ಎಳದು + ಮಾವು > ಎಳಮಾವು

ಎಳದು + ಅಂಚೆ > ಎಳಅಂಚೆ

ಇವುಗಳ ಜೊತೆಗೆ ನಾಗವರ್ಮ ಪೊರಮಡು, ಮೊಱಅಡಿ, ಒಳಜಗಳಂ, ಬಳಆಟ್ಟಂ ಎಂಬ ಉದಾಹರಣೆಗಳನ್ನು ಕೊಟ್ಟಿದ್ದಾನೆ. ಪೊಱಗು, ಒಳಗು ಎಂಬುವು ಗುಣವಾಚಿಗಳಲ್ಲ ; ಸ್ಥಾನ ನಿರ್ದೇಶಕಗಳು.

ಇಲ್ಲಿಯ ಸಮಾಸ ಕಾರ್ಯಗಳಲ್ಲಿ ಕರ್ಮಧಾರಯ ಸಮಾಸದ ಉದಾಹರಣೆಗಳನ್ನೇ ಕೊಡುತ್ತಾ ಬಂದ ನಾಗವರ್ಮ ಇಲ್ಲಿ ತತ್ಪುರುಷ ಸಮಾಸದ ಉದಾಹರಣೆಗಳನ್ನು ಕೊಟ್ಟಿರುವುದು ಅಂತ್ಯಾಕ್ಷರ ಲೋಪದ ದೃಷ್ಟಿಯಿಂದ ಎಂದು ಭಾವಿಸಬಹುದು.

"ಕೇಚಿಡೊಳಸ್ಯ ಉಳ್ಳಾದೇಶ ಮಪೀಚ್ಛಂತಿ" (ಸೂ. ೧೪೪ ವೃತ್ತಿ)

"ಕೆಲರ್ ಕರ್ಣಾಟಕ ಪ್ರಾಕ್ತನಾಚಾರ್ಯರ್ ಒಳಗಿಂಗೆ ಉಳ್ಳಾದೇಶಮುಮನಿಚ್ಛೆಸುವರ್" ಎಂದಿರುವುದರಿಂದ 'ಒಳಗು' ಶಬ್ದಕ್ಕೆ 'ಉಳ್' ಆದೇಶವಾಗುವುದುಂಟು.

ಉದಾ : ಒಳಗು-ಉಳ್ + ಆಳ್ > ಉಳ್ಳಾಳ್ (ದ್ವಿತ್ವ)

ಒಳಗು-ಉಳ್ + ಉಡೆ > ಉಳ್ಳುಡೆ (ದ್ವಿತ್ವ)

ಒಳಗು-ಉಳ್ + ಪೊಕ್ಕಂ > ಉಳ್ವೊಕ್ಕಂ (ಪ>ವ)

೬. "ಕೆಚ್ಚನೆ, ಪಚ್ಚನೆ, ಬೆಚ್ಚನೆ - ಈ ಶಬ್ದಗಳಿಗೆ ವ್ಯಂಜನ ಪರವಾಗಲು ಚ ಕಾರ ಆದಿಯಲ್ಲಿರುವ ಅವಯವಕ್ಕೆ ಮಕಾರಾದೇಶವಾಗುವುದು" ಎಂಬುದನ್ನು ಸೂತ್ರ ೧೪೫ರಲ್ಲಿ ಹೇಳಿದ್ದಾನೆ.

"ಕೆಚ್ಚನೆ, ಬೆಚ್ಚನೆ ಪಚ್ಚನೆ ಶಬ್ದಾನಾಂ ಚಾ ದೇರ್ಮತ್ವಂ"

ಉದಾ : ಕೆಚ್ಚನೆ > ಕೆಮ್; ಕೆಂ + ಕು=ಕೆಂಗುಡಿ (ಮ>ಂ)
ಕೆಚ್ಚನೆ > ಕೆಮ್; ಕೆಂ + ತಾವರೆ=ಕೆಂದಾವರೆ (ತ>ದ)
ಬೆಚ್ಚನೆ > ಬೆಮ್; ಬೆಂ + ನೀರ್=ಬೆನ್ನೀರ್
ಪಚ್ಚನೆ > ಪಮ್; ಪಂ + ತಲೆ=ಪಂದಲೆ
ಪಚ್ಚನೆ > ಪಮ್; ಪಂ + ತಳಿರ್=ಪಂದಳಿರ್

೭. ಸ್ವಂತ ತಾ ಚ ; (ಸೂತ್ರ ೧೪೬)

"ಕೆಚ್ಚನೆ, ಬೆಚ್ಚನೆ, ಪಚ್ಚನೆಗಳಿಗೆ ವ್ಯಂಜನ ಪರವಾಗಲು ಕೆಲವೊಮ್ಮೆ ಚಕಾರಾದಿ ಅವಯವಕ್ಕೆ ಸುಕಾರಾದೇಶವಾಗುವುದು"

ಉದಾ : ಕೆಚ್ಚನೆ > ಕೆಸು; ಕಿಸು + ಕಲ್=ಕಿಸುಗಲ್
ಬೆಚ್ಚನೆ >ಬೆಸು; ಬಿಸು + ಕದಿರ್=ಬಿಸುಗದಿರ್
ಪಚ್ಚನೆ > ಪೆಸು; ಪಸು + ವಂದರ್=ಪಸುವಂದರ್

ಮೇಲಿನ ಉದಾಹರಣೆಗಳಲ್ಲಿ 'ಚ' ಕಾರಕ್ಕೆ 'ಸು' ಪರವಾಗಿದೆ. ಅಲ್ಲದೆ ಆದಿಯ ಎತ್ವ ಇತ್ವವನ್ನು ಪಡೆದಿದೆ.

ಹಿಂದಿನ ಉದಾಹರಣೆಗಳಲ್ಲಿ ಕೆಚ್ಚನೆ, ಬೆಚ್ಚನೆ ಇತ್ಯಾದಿ ಪದಗಳು ಇಕಾರವನ್ನು ಪಡೆಯುವುದನ್ನು ಕುರಿತು ಈ ಸೂತ್ರವನ್ನು ರಚಿಸಲಾಗಿದೆ.

ಇಕಾರೋ ವಿಭಾಷಯಾ ಜೈತಃ ಎಂದಿದೆ (ಸೂತ್ರ ೧೪೭)

ಉದಾ : ಕಿಸುಪೊನ್, ಕಿಸುಸಂಜೆ
ಬಿಸುನೆತ್ತರ್, ಬಿಸು ಸುಟಿಲ್

ವಿಭಾಷೆ ಎಂದು ಹೇಳಿರುವುದರಿಂದ, ಸುಕಾರಾಂತಮಾದ ಏಕಾರಕ್ಕೆ ಕೆಲವೆಡೆ ವಿಕಲ್ಪದಿಂದ ಇಕಾರವಾಗುವುದು. ಕೆಲವೆಡೆ ಆಗದು. ಉದಾ: ಕೆಸುಂ, ಕೇಸಡಿ, ಕೇನಕ್ಕಿ, ಕೇಸುಗುರ್.

೨. **ತತ್ಪುರುಷ:**

"ತತ್ಪುರುಷೇ ಪೂರ್ವ ಪದಾಂತ್ಯ ಲೋಪಃ
ಪ್ರಾಯೋಯಥೋಚಿತಾಗಮಶ್ಚ" (ಕ.ಭಾ.ಭೂ. ಸೂ. ೧೪೮)

"ತತ್ಪುರುಷ ಸಮಾಸದಲ್ಲಿ ಪೂರ್ವ ಪದಾಂತ್ಯವರ್ಣಕ್ಕೆ ಲೋಪ. ಯಥೋಚಿತ ವರ್ಣಾಗಮ" ಅದಕ್ಕೆ

ಉದಾ : ಅರಸು ಮನೆ > ಅರಮನೆ (ಪೂರ್ವಪದಾಂತ್ಯ ಸು ಕ್ಕೆ ಲೋಪ)

ಮಾವು ಮರ > ಮಾಮರ (ಪೂರ್ವಪದಾಂತ್ಯ ವು ಗೆ ಲೋಪ)

ಹಾಗೆಯೇ ಪೂಗೊಂಚಲ್, ಜೇನೆಯ್, ಮಾಂಗಾಯ್, ಮಾಂದಳಿರ್, ತಂಬೆಲರ್, ದಾಂಗುಡಿ-ಈ ಮೊದಲಾದ ಉದಾಹರಣೆಗಳು. ಅದಕ್ಕೆ ಅಪವಾದ ಉಂಟು. ಅಪವಾದಕ್ಕೆ ಅರಸು ಗುಣಂ>ಅರಸು ಗುಣಂ (ಕಾವ್ಯಾ. ಸೂತ್ರ ೨೪೯)

"ಆ ತ್ವ ಮೆಲ್ಲಸ್ಯ" (ಸೂತ್ರ ೧೪೯)

"ಸಮಾಸ ವಿಧಿಯಲ್ಲಿ ಸಾಮಾನ್ಯವಾಗಿ 'ಎಲ್ಲ' ಶಬ್ದವು 'ಎಲ್ಲಾ' ಎಂದಾಗುವುದು.

ಉದಾ : ಎಲ್ಲ ರತ್ನಂಗಳ್>ಎಲ್ಲಾ ರತ್ನಂಗಳ್. ಹಾಗೆಯೇ ಎಲ್ಲಾ ಮಾವು, ಎಲ್ಲಾ ಕಾರ್ಯಂಗಳ್, ಎಲ್ಲಾ ಮಾತುಗಳ್ - ಈ ಮೊದಲಾದುವು. ಆದರೆ ಕೆಲವು ಕಡೆ ಆಗುವುದಿಲ್ಲ. ಉದಾಹರಣೆಗೆ-ಎಲ್ಲತೆಜಿದ, ಎಲ್ಲಧನಂ, ಎಲ್ಲೆಡೆ-ಎಂಬಂತೆ.

"ಈ ಪೂರ್ವ ಪದಾಂತಕ್ಕೆ ಉಂಟಾಗಿರುವ ಲೋಪಕ್ಕೆ ಕಾರಣವನ್ನು ಹೇಳುವುದು ಪ್ರಯಾಸದ ಕೆಲಸ. 'ಪ್ರಯೋಗ ಶರಣಾಃ ವೈಯಾಕರಣಾಃ' ಎಂಬಂತೆ ರೂಢಿಯಲ್ಲಿರುವ ಪ್ರಯೋಗಗಳಿಂದ ನಿಯಮವನ್ನು ಕಲ್ಪಿಸಲು ಸಾಧ್ಯವೇ ಹೊರತು ಏಕೆ ಎಂಬ ಪ್ರಶ್ನೆಗೆ ಉತ್ತರವನ್ನು ಕಲ್ಪಿಸುವುದು ಅಸಾಧ್ಯ"[೨] ಎಂದು ಲೋಪದ ಬಗ್ಗೆ ಹೇಳಲಾಗಿದೆ.

ಇನ್ನು ಎಲ್ಲ ಎಂಬ ಕನ್ನಡ ಶಬ್ದದ ಮುಂದೆ ಕನ್ನಡ ಇಲ್ಲವೇ ಸಂಸ್ಕೃತ ಶಬ್ದ ಯಾವುದಾದರೂ ಸರಿ ಬರಬಹುದು. ಆದುದರಿಂದ ಇಂಥ ಸಂದರ್ಭದಲ್ಲಿ ಅರಿಸಮಾಸ ದೋಷವಿಲ್ಲ ಎಂದೇ ನಾಗವರ್ಮನ ಅಭಿಮತ. ಅದನ್ನು ಕೇಶಿರಾಜನು ವಿಸ್ತರಿಸಿದ್ದಾನೆ. (ಶ.ಮ.ದ. ಸೂತ್ರ ೧೮೬).

೩. **ಬಹುವ್ರೀಹಿ :**

"ಬಹುವ್ರೀಹಾವದಂತೇ" ಸೂತ್ರ (೧೫೦) (ಬಹುವ್ರೀಹಿ ಸಮಾಸಾಂತ್ಯದಲ್ಲಿ ಅಕಾರವು ಬರುವುದು) ಉದಾ : ಕೆಂಗಣ್ಣಂ, ಬಟ್ಟದೊಡೆಯಂ, ಕುಸಿಗೊರಲಂ, ಕಾರೊಡಲುಂ - ಇತ್ಯಾದಿ.

ಬಟ್ಟತೊಡೆವುಳ್ಳವಂ ಆವಂ ಆವಂ ಬಟ್ಟದೊಡೆಯಂ

ಅಂತೆ ಉಳಿದ ಉದಾಹರಣೆಗಳನ್ನು ತಿಳಿಯುವುದು. ಅಪವಾದಕ್ಕೆ ನಾಗವರ್ಮನು 'ಕೆಲವೆಡೆಯೊಳ್ ಅಕಾರಮಾಗದು" ಎಂದಿದ್ದಾನೆ. ಉದಾ: ಕಲ್ಲೆರ್ದೆ, ಅಳ್ಳೆರ್ದೆ.

"ಇಲ್ಲಸ್ಯೇಲಿಃ" (ಸೂತ್ರ ೧೫೧)

"ಬಹುವ್ರೀಹಿ ಸಮಾಸದಲ್ಲಿ ಇಲ್ಲ ಎಂಬ ಶಬ್ದವು ಇಲಿ ಎಂದಾಗುತ್ತದೆ."

ಉದಾ: ಪಲ್ಲು ಇಲ್ಲದ ಬಾಯಂ>ಪಲ್ಲಿಲಿವಾಯಂ. ಅಂತೆ ನಾಣಿಲಿ, ಕೂರಿಲಿ, ಅಗಿಲಿಲಿ-ಈ ಮೊದಲಾದುವುಗಳನ್ನು ನೋಡುವುದು.

ಕೇಶಿರಾಜನು ಕೂಡ ಇದನ್ನೇ ಹೇಳಿದ್ದಾಗಲೂ ಕೊಲ್ ಎಂಬುದು ಸಮಾಸದಲ್ಲಿ ಕುಲಿಯಾಗುತ್ತದೆ-ಎಂದು ಒಂದು ವಿಶೇಷವನ್ನು ಸೇರಿಸಿದ್ದಾನೆ.

**ದ್ವಿಗು:**

"ದ್ವಿಗೌ ಸಂಖ್ಯಾವಾಚಿ ನಾಮುಪಾಂತ್ಯ ವ್ಯಂಜನಾದೇಶಲೋಪಃ" (ಸೂ. ೧೫೨). "ದ್ವಿಗು ಸಮಾಸದಲ್ಲಿ ಸಂಜ್ಞೆಯನ್ನು ಹೇಳುವಾಗ ಶಬ್ದಗಳ ಉಪಾಂತ್ಯ ವ್ಯಂಜನಾಕ್ಷರಗಳು ಲೋಪಿಸುವುವು" ಉದಾ:

ಮೂಲೋಕಂ, ನಾಲ್ದೆಸೆ, ಅಯ್ಸರಂ, ಎಣ್ದೆಸೆ

"ಏಕಾರ್ಥವಾಚಕಸ್ಯ ರೋಂತೇ" (ಸೂತ್ರ ೧೫೩)

"ಒಂದು ಎಂಬ ಶಬ್ದಕ್ಕೆ ಕೊನೆಯಲ್ಲಿ ರೇಫೆ ಬರುತ್ತದೆ" ಉದಾ :

೧. ಒಂದು > ಒರ್ + ಕೆಯ್ = ಒರ್ಕೆಯ್

೨. ಒಂದು > ಒರ್ + ತಲೆ = ಒರ್ತಲೆ

೩. ಒಂದು > ಒರ್ + ಎಂಜಲ್ = ಓರೆಂಜಲ್

"ಇರಾದೇಶೋದ್ವರ್ಥಸ್ಯ" (ಸೂತ್ರ ೧೫೪)

"ದ್ವಿಗು ಸಮಾಸದಲ್ಲಿ ಪೂರ್ವ ಪದ ಎರಡು ಎಂಬುದಕ್ಕೆ ಇರ್ ಎಂಬುದು ಆದೇಶವಾಗುವುದು."

ಉದಾ : ಎರಡು > ಇರ್ + ಮೆಯ್ = ಇರ್ಮೆಯ್

ಎರಡು > ಇರ್ + ತೆರಂ = ಇರ್ತೆರಂ

ಎರಡು > ಇರ್ + ಪಾಳ್ = ಇರ್ಪಾಳ್

ಕೆಲವೊಮ್ಮೆ ಪ್ರಸ್ತ 'ಇ'ಗೆ ದೀರ್ಘ ಈ ಬರುವುದುಂಟು. ಎರಡು > ಇರ್ > ಈರ್ ಎಂದು.

ಉದಾ : ಎರಡು > ಇರ್ > ಈರ್ + ಐದು = ಈರ್ಯೆದು

ಎರಡು > ಇರ್ > ಈರ್ + ಒಳ್ಳಿದರ್ = ಈರೊಳ್ಳಿದರ್

ಕೆಲವಡೆ ಇರಾದೇಶವಾಗದು. ಉದಾ ಎರಟಿಪ್ಪತ್ತು, ಎರಟ್ಬೆಯ್ ಎಂಬಂತೆ.

"ಕಪವರ್ಗಯೋಸ್ತ್ರ್ಯಪ್ತ್ಯೋ ಸ್ತ ತಾವಾಗಮೌಬಹುಳಂ ಹ್ರಸ್ವಪೂರ್ವಜ"

(ಸೂತ್ರ ೧೫೫)

"ಮೂರು ಎಂಬ ಶಬ್ದಕ್ಕೆ ಕ,ಪ ವರ್ಗಗಳು ಪರವಾಗಲು, ಅವುಗಳು ವಿಕಲ್ಪದಿಂದ ಹ್ರಸ್ವಾಕ್ಷರ ಪೂರ್ವಗಳಾಗಿ ಆಗಮಗಳಾಗುವುವು."

ಸಾಮಾನ್ಯವಾಗಿ ಮೂರು ಎಂಬ ಶಬ್ದಕ್ಕೆ ಮೂ ಎಂಬುದು ಆದೇಶವಾಗುತ್ತದೆ. ಈ ಮೂ ಎಂಬುದಕ್ಕೆ ಕ ಮತ್ತು ಪ ವರ್ಗಾಕ್ಷರಗಳು ಪರವಾಗಲು ದೀರ್ಘ ಮೂ ಎಂಬುದು ಹ್ರಸ್ವ ಮು ಆಗುವುದು. ಮೂರು > ಮೂ > ಮು ಎಂಬಂತೆ

ಉದಾ : ಮೂರು > ಮು > ಮು + ಕೊಡೆ = ಮುಕ್ಕೊಡೆ

ಅಂತೆ = ಮುಪ್ಪುರಿ

= ಮುಮ್ಮತ್ರಿ

'ಬಹುಳ' ಎಂದಿರುವುದರಿಂದ ಕೆಲವೆಡೆ 'ಮೂ' ಎಂದೇ ಇರುತ್ತದೆ.

ಉದಾ : ಮೂರು > ಮೂ > ಮೂ + ಗೇಣ್ = ಮೂಗೇಣು

ಅಂತೆ ಮೂಗಾವುದಂ, ಮೂವಣ್ಣಂ, ಮೂವಳಸು - ಮೊದಲಾದುವು ತಿಳಿಯುವುದು.

"ತ್ರ್ಯಾದೀನಾಂ ವ್ಯಂಜನೇಷ್ವೇವೆ" (ಸೂತ್ರ ೧೫೬)

"ಮೂರು ಎಂಬ ಶಬ್ದಾದಿಯಲ್ಲಿರುವ ಸಂಖ್ಯಾವಾಚಿಗಳ ಉಪಾಂತ್ಯ ವ್ಯಂಜನ ಅವಯವಕ್ಕೆ ವ್ಯಂಜನಗಳು ಪರವಾಗಲು, ಸಮಾಸದ ಪೂರ್ವ ಪದದ ಕೊನೆಯಕ್ಷರ ಲೋಪಿಸುವುದು.

ಉದಾ : ಮೂರು + ಲೋಕಂ = ಮೂಲೋಕಂ

ಮೂರು + ತೆರಂ = ಮೂತೆರಂ = ಎಂಬಂತೆ

ಇಲ್ಲಿ ವ್ಯಂಜನವೆಂದಿರುವುದರಿಂದ ಸ್ವರ ಪರವಾದಾಗ ಲೋಪವಾಗದು. ಉದಾ: ಮೂಱಡಿ, ಮೂಱಾನೆ.

"ನಷಡರ್ಥವಾಚಕ ಸ್ಯಾಪಿ ತು ಹ್ರಸ್ವಸ್ತದಾದೇಃ" (ಸೂ. ೧೫೭) "ಆರು ಎಂಬ ಶಬ್ದದ ಉಪಾಂತ್ಯ ವ್ಯಂಜನಾದಿಯಾಗಿವುಳ್ಳ ಅವಯವಕ್ಕೆ (ಹಿಂದಿನಂತೆ)

ಲೋಪವಾಗದು. ಆರು ಎಂಬ ಪೂರ್ವ ಪದದ ಮೊದಲ ದೀರ್ಘಾಕ್ಷರ 'ಆ' ಎಂಬುದು ಪ್ರಸ್ವ 'ಅ' ಎಂದಾಗುವುದು."

ಉದಾ : ಆಱು > ಅಱು + ತಿಂಗಳು = ಅಱುದಿಂಗಳು

ಅಂತೆ ಅಱುವೆರಲ್, ಅಱುಗೇಣ್, ಅಱುವತ್ತು - ಈ ಪರಿ ತಿಳಿಯುವುದು.

"ಸಪ್ತಾರ್ಥಾಭಿಧಾಯಿನಶ್ಚ" (ಸೂತ್ರ ೧೫೮)

"ಏೞು ಎಂಬ ಶಬ್ದದ ಉಪಾಂತ್ಯ ವ್ಯಂಜನಕ್ಕೆ ಲೋಪವಾಗದು. ಏೞು ಎಂದೇ ಇರುವುದು. ಉದಾ: ಏೞು + ಕಡಲ್ = ಏಳ್ಕಡಲ್; ಅಂತೆ ಏೞ್ವೊಡೆ, ಏೞ್ಮೊಳಂ- ಇತ್ಯಾದಿ. 'ಎಂಟು' ಎಂಬುದರ ಬಗ್ಗೆ ನಾಗವರ್ಮನು ಏನನ್ನೂ ಹೇಳಿಲ್ಲ. ಆದರೆ 'ಕಾವ್ಯಾವಲೋಕನ'ದಲ್ಲಿ 'ವರ್ತಿಪುದೇೞಱೊಳಂತ್ಯಲೋಪಮೆಂಟರ್ಕಕ್ಕುಂ" ಎಂದು ಹೇಳಿದೆ. (ಸೂತ್ರ ೫೯). ಶ.ಮ.ದ.ದಲ್ಲಿ "ಚರಮಕ್ಕೆ ಲೋಪಮೆಣ್ಟರ್ಕಕ್ಕುಂ" (ಸೂತ್ರ ೨೦೦) ಎಂದಿದೆ.

ಉದಾ : ಎಣ್ಕೆ[illegible] [illegible]ಪ್ಪತ್ತು, ಎಣ್ಸಾಸಿರಂ

"ನವಾಖ್ಯಾಯಾಸ್ತೋಮಾದೇಶಃ ಪ ಹತೌ" ಸೂತ್ರ (೧೫೯)

'ಒಂಭತ್ತು ಎಂಬ ಸಂಖ್ಯೆಗೆ ಪತ್ತು ಪರವಾಗಲು ತೊಮ್ ಎಂದು ಆದೇಶವಾಗುವುದು.'

ಒಂಭತ್ತು + ಪತ್ತು = ತೊಂಬತ್ತು

"ಒಂಬಯ್ ಶತೇ" (ಸೂತ್ರ ೧೬೦)

"ಒಂಭತ್ತು ಎಂಬ ಶಬ್ದಕ್ಕೆ ನೂರು ಶಬ್ದ ಪರವಾಗಲು ಒಂಬಯ್ ಎಂದು ಆದೇಶವಾಗುವುದು." ಒಂಭತ್ತು + ನೂಱು = ಒಂಭಯ್ನೂರು.

ಅಂತೆ ಸಾಸಿರ ಪರವಾಗಲು ಒಂಬಯ್ ಸಾಸಿರವಾಗುವುದು. ಇದನ್ನೇ ಸೂತ್ರ ೧೬೧ರಲ್ಲಿ ಹೇಳಿದೆ.

"ಸಹಸ್ರೇ ಚ" ಎಂದು

ಒಂಭತ್ತು ಎಂಬುದಕ್ಕೆ ಆದೇಶವಾಗಿರುವ ತೊಮ್ ಬಗ್ಗೆಯಾಗಲಿ ಮತ್ತು ಒಂಬಯ್ ಎಂಬುದರ ನಿಷ್ಪನ್ನವಾಗುವ ಬಗೆಯನ್ನು ತಿಳಿಯುವುದು ಪ್ರಯಾಸದ ಕೆಲಸವೇ ಸರಿ.

"ದಶಾಖ್ಯಾಯಾಃ ಪಯಿನ್" (ಸೂತ್ರ ೧೬೨)

"ಪತ್ತು ಶಬ್ದಕ್ಕೆ 'ಸಾಸಿರಂ' ಎಂಬುದು ಪರವಾದರೆ ಸಮಾಸದಲ್ಲಿ 'ಪಯಿನ್' ಎಂದಾದೇಶವಾಗುವುದು."

ಉದಾ : ಪತ್ತು + ಸಾಸಿರಂ > ಪಯಿನ್‌ಸಾಸಿರಂ > ಪಯಿಂಚಾಸಿರಂ. ಪತ್ತುವಿಗೆ ಒಂದು, ಎರಡು, ಪರವಾದರೆ 'ಪನ್' ಎಂದಾಗುವುದು.

ಪತ್ತು + ಒಂದು = ಪನ್ನೊಂದು

ಅದೇ ಪತ್ತು ಶಬ್ದಕ್ಕೆ ಒಂಭತ್ತು ಪರವಾಗಲು 'ಪತ್' ಬರುವುದು.

ಉದಾ: ಪತ್ತು + ಒಂಭತ್ತು = ಪತ್ತೊಂಬತ್ತು ಎಂಬಂತೆ.

ಪತ್ತುವಿಗೆ ಬೇರೆ ಸಂಖ್ಯೆಗಳು ಪರವಾದಾಗ 'ಪನ್' ಎಂದೇ ಆದೇಶವಾಗುವುದು. ಪತ್ತು ಶಬ್ದಕ್ಕೆ ಒಂದು, ಎರಡು ಶಬ್ದಗಳು ಪರವಾದಾಗ 'ಪನ್' ಆದೇಶವಾಗುವುದು ಎನ್ನಲು ಸೂತ್ರ ೧೬೩ ಬಳಕೆಯಾಗಿದೆ.

"ಪನ್ನೇಕ ದ್ವ್ಯರ್ಥಯೋಃ" (ಸೂತ್ರ ೧೬೩)

ಪತ್ತು ಶಬ್ದಕ್ಕೆ ಉಳಿದ ಸಂಖ್ಯೆಗಳು ಪರವಾಗಲು ಪದಿ ಆದೇಶವಾಗುವುದು ಎನ್ನಲು ಸೂತ್ರ ೧೬೪ರಲ್ಲಿ "ಅನ್ಯತ್ರ ಪದಿಃ" ಎನ್ನಲಾಗಿದೆ.

ಉದಾ : ಪತ್ತು + ಮೂಱು = ಪದಿಮೂಱು

"ಸ್ವರಾದೌನಾಗಮಃ" (ಸೂತ್ರ ೧೬೫)

"ಪತ್ತು ಶಬ್ದಕ್ಕೆ ಸ್ವರವು ಪರವಾಗಲು ಅದರ ಮುಂದೆ ನಕಾರಾಗಮವಾಗುವುದು."

ಪತ್ತು + ಅಯ್ದು = ಪದಿನೆಯ್ದು : ಪತ್ತು + ಆಱು = ಪದಿನಾಱು

**ಸಮಸಂಸ್ಕೃತ :**

"ಸಮ ಸಂಸ್ಕೃತಂ ದೇಶಿಯಪದೇನ ಸಮಂ ಸಮಸ್ಯತೇ" (ಸೂತ್ರ ೧೩೨)

ಸಂಸ್ಕೃತ ಪದವು ಕನ್ನಡದ ಪದದೊಡನೆ ಸೇರಿ ಸಮಾಸವಾಗಬಾರದು. ಸಂಸ್ಕೃತಕ್ಕೆ ಸಮವಾಗಿರುವ ಶಬ್ದಗಳು, ಕನ್ನಡ ಶಬ್ದಗಳ ಜೊತೆಗೆ ಸೇರಿ ಸಮಾಸವಾಗಬಹುದು. ಅಲ್ಲಿ ಅರಿಸಮಾಸಕ್ಕೆ ದೋಷವಿಲ್ಲ - ಹೀಗೆಂದೇ ನಾಗವರ್ಮನ ಅಭಿಮತ.

ಉದಾ : ಪರದೇಸಂ, ಪರವೆಣ್, ಒಳ್ಗವಿ, ಕೂರಸಿ, ಮಾಜನಂ
ಮಂಗಳಾರತಿ, ಕಡುರಾಗ, ಪೊಡವೀಶಂ - ಮುಂತಾದವು.

## ತೆಲುಗು ಭಾಷೆಯಲ್ಲಿ ಸಮಾಸ:

ತೆಲುಗಿನ ವೈಯಾಕರಣರು ಕನ್ನಡದಂತೆಯೇ ಸಮಾಸದ ವಿಷಯದಲ್ಲಿ ಸಂಸ್ಕೃತ ಪ್ರಾಕೃತಗಳನ್ನೇ ಅನುಸರಿಸಿದ್ದಾರೆ. ಕೇತನ ಇದನ್ನು ನಿರ್ದಿಷ್ಟವಾಗಿ ಮತ್ತು ವಿಸ್ತೃತವಾಗಿ ನಿರೂಪಿಸದಿದ್ದರೂ ಸಮಾಸ ಏರ್ಪಡುವ ವಿಧಾನವನ್ನು ಕುರಿತು ಹೇಳುತ್ತಾ "ಮೊದಲ ಪದ ವಿಭಕ್ತಿಗಳನ್ನು ಕಳೆದುಕೊಂಡು, ಮೇಲಿನ ಪದಗಳೊಂದಿಗೆ 'ಸಮ್ಯಕ್ಸಂಸಕ್ತವಾ'ಗುವುದರಿಂದ ಸಮಾಸವಾಗುವುದು" (ಆಂ.ಭಾ.ಭೂ. ೧೧೦) ಎಂದಿದ್ದಾನೆ. ವಿಭಕ್ತಿ ಲೋಪದಿಂದ ಸಮಾಸ ರೂಪುಗೊಳ್ಳುತ್ತದೆಂದು ಇದರರ್ಥ. ಕಾವ್ಯಾಲಂಕಾರ ಚೂಡಾಮಣಿ, ಆಂಧ್ರಕೌಮುದಿ ಮುಂತಾದ ತೆಲುಗು ಲಕ್ಷಣ ಗ್ರಂಥಗಳಲ್ಲಿ ಸಮಾಸದ ಲಕ್ಷಣವನ್ನು ಕೇತನನಂತೆಯೇ ನಿರೂಪಿಸಲಾಗಿದೆ. ಆಧುನಿಕ ವ್ಯಾಕರಣಗಳಲ್ಲಿ ವಿಭಕ್ತಿಯ ವಿಷಯವನ್ನೆತ್ತದೆ "ಅನೇಕ ಪದಗಳು ಸೇರಿ ಒಂದು ಪದವಾಗುವುದೇ ಸಮಾಸ"ವೆಂಬ ರೀತಿಯಲ್ಲಿ ಲಕ್ಷಣಗಳನ್ನು ಹೇಳಲಾಗಿದೆ. ಇವೆಲ್ಲವನ್ನೂ ಸರಿಪಡಿಸಿ ಚಿನ್ನಯಸೂರಿ 'ಬಾಲವ್ಯಾಕರಣ'ದಲ್ಲಿ ಸಮರ್ಥವಾದ ಪದಗಳು ಏಕಪದವಾಗುವುದು ಸಮಾಸ" ಎಂದಿದ್ದಾನೆ (ಬಾ.ವ್ಯಾ. ಸಮಾಸ ಸೂ. ೧). ವೃತ್ತಿಯಲ್ಲಿ "ಪೃಥಗ್ಭೂತವಾದ ಅರ್ಥಗಳಿಗೆ ಏಕಾರ್ಥೀಭಾವ ಸಾಮರ್ಥ್ಯ" ಎಂದಿದ್ದಾನೆ. ಎಲ್ಲ ಪದಗಳೂ ಸಮಾಸ ಆಗಲು ಅರ್ಹವಾದವಲ್ಲ. ಅಂತಹ ಸಮರ್ಥ ಪದಗಳು ಮಾತ್ರ ಏಕಪದವಾಗಿ ಸಮಾಸವೆನಿಸಿಕೊಳ್ಳುತ್ತವೆ. ಕೇತನನದು ಕೂಡ ಇದೇ ಅಭಿಪ್ರಾಯ. "ಸಮರ್ಥಃ ಪದವಿಧಿಃ" ಎಂಬ ಪಾಣಿನೀಯ ಸೂತ್ರವೇ ಇವುಗಳಿಗೆ ಮೂಲ. ಕೇತನ ಹೇಳಿದ 'ಸಮ್ಯಕ್ಸಂಸಕ್ತ'ವಾಗುವುದೆಂಬುದಕ್ಕೆ ಅರ್ಥ 'ಏಕಪದೀಕರಣ'. ನಾಗವರ್ಮ, ಭಟ್ಟಾಕಳಂಕರೂ ಇದನ್ನೇ ಹೇಳಿದ್ದಾರೆ.

ಸಂಸ್ಕೃತ ವೈಯಾಕರಣರು ನಿರೂಪಿಸಿದ ನಾಲ್ಕು ಪ್ರಮುಖ ಸಮಾಸಗಳೆಂದರೆ-

೧. ಪೂರ್ವ ಪದಾರ್ಥ ಪ್ರಧಾನೋಽವ್ಯಯೀಭಾವ:

೨. ಉತ್ತರ ಪದಾರ್ಥ ಪ್ರಧಾನ, ಸ್ತತ್ಪುರುಷಃ

೩. ಅನ್ಯ ಪದಾರ್ಥಪ್ರಧಾನೋ ಬಹುವ್ರೀಹಿ:

೪. ಉಭಯ ಪದಾರ್ಥ ಪ್ರಧಾನೋ ದ್ವಂದ್ವಃ (ಅಷ್ಟಾಧ್ಯಾಯಿ ೧-೧-೨)

ಕೇತನನಾದರೂ "ಅವಿ ಪೂರ್ವ ಪದಾರ್ಥ ಪ್ರಧಾನಂಬು, ಉತ್ತರ ಪದಾರ್ಥ ಪ್ರಧಾನಂಬು, ನನ್ಯ ಪದಾರ್ಥ ಪ್ರಧಾನಂಬುನು, ನುಭಯ ಪದಾರ್ಥ ಪ್ರಧಾನಂಬುನು, ನನು ಚತುರ್ವಿಧಂಬುಲೈ ವರ್ತಿಲ್ಲು" (ಆಂ.ಭಾ.ಭೂ. ಪದ್ಯ ೧೦೯) ಎಂದು ಮಾತ್ರ ಹೇಳಿರುತ್ತಾನೆ.

ನಾಗವರ್ಮನು ಪಾಣಿನಿಯನ್ನು ಅನುಸರಿಸಿ ಸಮಾಸ ಪ್ರಭೇದಗಳನ್ನು, ಸಮಾಸಗಳ ಹೆಸರುಗಳನ್ನು ಕೊಟ್ಟಿದ್ದಾನೆ. ಇದು ನಾಗವರ್ಮನಿಗೂ, ಕೇತನನಿಗೂ ಇರುವ ವ್ಯತ್ಯಾಸ.

## ೧. ಉತ್ತರ ಪದಾರ್ಥ ಪ್ರಧಾನ (ತತ್ಪುರುಷ, ಕರ್ಮಧಾರಯ):

ಉತ್ತರ ಪದಾರ್ಥ ಪ್ರಧಾನವಾಗಿರುವ ಸಮಾಸಗಳಿಗೆ ಕೇತನನು ಉದಾಹರಣೆಯಾಗಿ ಈ ಕೆಳಗಿನ ಪದಗಳನ್ನು ಕೊಟ್ಟಿದ್ದಾನೆ.

ಚಲಿಗಾಡ್ಪು, ನಲ್ಲಗಲುವಲು
ವಲಪಂತಲು, ತೆಲ್ಲದಮ್ಮಿ, ವಲಿಕ್ರೊವ್ವಿರಿಯೆ
ತ್ತೆಲ ಮಾವಿಮೋಕ, ಕೆಂಜಿಗು
ರಲ ರಮ್ಮುಲು ನಾಗ ನಿವಿ ಯುದಾಹರಣಂಬುಲ್॥ (ಪದ್ಯ ೧೧೩)

ಇವುಗಳಲ್ಲಿ ಚಲಿಗಾಡ್ಪು (ತಂಗಾಳಿ), ನಲ್ಲಗಲುವಲು (ಕನ್ನೈದಿಲೆ) ಮುಂತಾದವು ಉತ್ತರ ಪದಾರ್ಥ ಪ್ರಧಾನವಾಗಿರುವುದರಿಂದ, ಕರ್ಮಧಾರಯವೆಂದಾದರೂ ತತ್ಪುರುಷವೆಂದಾದರೂ ಹೇಳಬಹುದು. ಇವನ್ನು ಬೇರೆ ಮಾಡದೆ ಕೇತನ ಸುಮ್ಮನೆ 'ಉತ್ತರ ಪದಾರ್ಥ ಪ್ರಧಾನ'ವೆಂದು ಅಲ್ಲಿಗೆ ಬಿಟ್ಟಿದ್ದಾನೆ. ಆದರೆ ತೆಲುಗಿನ ಅರ್ವಾಚೀನ ಲಾಕ್ಷಣಿಕರಾದ ಚಿನ್ನಯಸೂರಿ ಮೊದಲಾದವರಲ್ಲಿ ಸಮಾಸಗಳ ಹೆಸರು ಹಾಗೂ ಲಕ್ಷಣವನ್ನು ಕಾಣಬಹುದು. ಚಿನ್ನಯ ಸೂರಿ ತನ್ನ 'ಬಾಲವ್ಯಾಕರಣ'ದಲ್ಲಿ ಎಲ್ಲ ಸಮಾಸಗಳನ್ನು ಮೂರು ವರ್ಗವನ್ನಾಗಿ ಮಾಡಿರುವುದು ತಿಳಿದು ಬರುತ್ತದೆ. ಅವನ ಸೂತ್ರವೊಂದರಲ್ಲಿ-

"ತತ್ಪುರುಷಾದುಲ ಲಕ್ಷಣಂಬು ಪ್ರಾಯಿಕಂಬುಗ ಸಂಸ್ಕೃತೋಕ್ತಂಬಯಗು"

(ಬಾ.ವ್ಯಾ. ಸೂತ್ರ ೨೪೩)

"ತತ್ಪುರುಷಾದಿ ಸಮಾಸಗಳ ಲಕ್ಷಣಗಳು ಸಾಮಾನ್ಯವಾಗಿ ಸಂಸ್ಕೃತದಲ್ಲಿರುವಂತೆ" ಎಂದು ಸಂಸ್ಕೃತದ ಜಾಡಿನಲ್ಲಿ ನಡೆದು ತತ್ಪುರುಷ, ಬಹುವ್ರೀಹಿ, ದ್ವಂದ್ವ - ಎಂದು ಸಮಾಸಗಳನ್ನೆಲ್ಲಾ ತ್ರಿವಿಧವಾಗಿ ವಿಂಗಡಿಸಿದ್ದಾನೆ. ಅವು ಪ್ರಾಸಂಗಿಕವಾಗಿ ಉತ್ತರ, ಅನ್ಯ, ಉಭಯ ಪದಾರ್ಥ ಪ್ರಧಾನವಾಗಿರುವುದಾಗಿಯೂ ತಿಳಿಸಿದ್ದಾನೆ. 'ಚಿಂತಾಮಣಿ' ಕರ್ತೃವಾದರೂ ಸಂಸ್ಕೃತದ ಸಮಾಸ ಚಕ್ರವನ್ನೇ ಆಧರಿಸಿ, ತೆಲುಗಿನಲ್ಲಿ ಏಳು ವಿಧವಾಗಿ ವಿಂಗಡಿಸಿದ್ದಾನೆ.

ಸೂರಿಯ ಪ್ರಕಾರ ತತ್ಪುರುಷದಲ್ಲಿ ವ್ಯಧಿಕರಣ ತತ್ಪುರುಷವೆಂದು, ಸಮಾನಾಧಿಕರಣ ತತ್ಪುರುಷವೆಂದು ದ್ವಿವಿಧ. ಕೊಟ್ಟ ಉದಾಹರಣೆಗಳನ್ನು

ಸಮಾಸದ ಬಗ್ಗೆ ಚಿನ್ನಯ ಸೂರಿಯು-

"ಆಚ್ಛಿಕ ಶಬ್ದಂಬು ತೋಡ ಸ್ತ್ರೀ ಸಮಂಬು ಪ್ರಾಯಿ-
ಕಂಬುಗಾ ದ್ವಂದ್ವಂಬಗು" (ಬಾ.ವ್ಯಾ, ಸಮಾಸ ೭)

ಅದಕ್ಕೆ ಉದಾಹರಣೆ ಅನ್ನದಮ್ಮುಲು, ತಲ್ಲಿದಂಡ್ರುಲು, ಊರು ಪಲ್ಲೆಲು, ಆಲುಮಗಲು- ಇತ್ಯಾದಿ.

**೪. ಅನ್ಯ ಪದಾರ್ಥ ಪ್ರಧಾನ:** (ಬಹುವ್ರೀಹಿ)

ಅನ್ಯ ಪದಾರ್ಥ ಪ್ರಧಾನವಾದ ಸಮಾಸಗಳಿಗೆ ಕೇತನನು 'ಚಲಿವೆಲುಗು', 'ನಲುವ' - ಮುಂತಾದ ಉದಾಹರಣೆಗಳನ್ನು ಕೊಟ್ಟಿರುವನು. (ಆಂ.ಭಾ.ಭೂ. ಪದ್ಯ ೧೧೬). ಇವುಗಳ ವಿಗ್ರಹವಾಕ್ಯವು - 'ಚಲ್ಲನಿವೆಲುಗು ಗಲವಾಡು ಚಂದ್ರುಡು' ಎಂದೂ, 'ನಾಲುಗು ವದನಮುಲು ಗಲವಾಡು ಬ್ರಹ್ಮ' ಎನ್ನಬಹುದು. ತಂಪಾದ ಬೆಳಕುಳ್ಳವನು ಚಂದ್ರನು. ನಾಲ್ಕು ಮುಖವುಳ್ಳವನು ಬ್ರಹ್ಮ ಇದು ಬಹುವ್ರೀಹಿ ಸಮಾಸದ ಲಕ್ಷಣ.

ಕೇತನ ಕೊಟ್ಟಿರುವ ಉದಾಹರಣೆಗಳಲ್ಲಿ ಅಲರು ವಿಲ್ತುಡು (ಹೂವಿನ ಬಾಣವಿರುವ ಮನ್ಮಥ) ವೇಡಿ ವೆಲುಗು (ಬಿಸಿಬೆಳಕುಳ್ಳವನು) ಮುಂತಾದವು ಇವೆ. ಇಲ್ಲಿ ಕೇತನ ಬಹುವ್ರೀಹಿ ಎಂಬ ಹೆಸರು ಹೇಳದೆ ಸಮಾಸದ ಲಕ್ಷಣವಾದ 'ಅನ್ಯ ಪದಾರ್ಥ ಪ್ರಧಾನ'ವೆಂದು ತಿಳಿಸಿ ಕೈಬಿಟ್ಟಿದ್ದಾನೆ. ಚಿನ್ನಯಸೂರಿ ಇವುಗಳನ್ನು ಬಹುವ್ರೀಹಿ ಸಮಾಸವೆಂದೇ ತಿಳಿಸಿದ್ದಾನೆ. ಅನ್ಯಪದಾರ್ಥ ಪ್ರಧಾನವಾದುದು ಕನ್ನಡದಲ್ಲೂ ಬಹುವ್ರೀಹಿ ಎನಿಸಿಕೊಂಡಿದೆ. ನಾಗವರ್ಮನು ಇದನ್ನೇ ಹೇಳಿದ್ದಾನೆ. ಚಿನ್ನಯಸೂರಿ 'ಮುಕ್ಕಂಟಿ' (ಮುಕ್ಕಣ್ಣ), 'ಚಲಿವೆಲುಗು' (ಚಂದ್ರ) ಎಂದೇ ಬಹುವ್ರೀಹಿಗೆ ಉದಾಹರಿಸಿದ್ದಾನೆ.

"ಕೆಲವು ಸಂಸ್ಕೃತ ಶಬ್ದಗಳನ್ನು ಒಂದು ಕಡೆ ಸೇರಿಸಿ, ಅವುಗಳಿಗೆ ಒಂದು ತೆಲುಗು ಪದವನ್ನು ವಿಶೇಷವಾಗಿ ಸೇರಿಸಿ, ಸಮಾಸವನ್ನಾಗಿ ಮಾಡಿದರೆ ಆ ತೆಲುಗು ಪದ ಉಳಿದ ಸಂಸ್ಕೃತ ಪದಗಳಿಗೆಲ್ಲ, ಅನ್ವಯಿಸುವುದು" ಎಂದಿದ್ದಾನೆ, ಕೇತನ. ಉದಾ : 'ತನ ವಿಶಿಷ್ಟ ಕುಲಾಚಾರ, ಧರ್ಮಮು'; 'ತನ ಜಗದ್ಗೀತ ಸಾಧು ವರ್ತನಮು' ಇತ್ಯಾದಿ (ಆಂ.ಭಾ.ಭೂ. ಪದ್ಯ ೧೩೧). ಹೀಗೆ 'ನೀ' ಎಂಬ ಪದವು ಸಂಸ್ಕೃತದೊಂದಿಗೆ ಸೇರಿ ಸಮಾಸವಾಗುವುದೆಂದು ಇನ್ನೊಂದು ಪದ್ಯದಲ್ಲಿ ಹೇಳಿದ್ದಾನೆ.

ಅನಂತರ ಕೇತನ ಸಂಸ್ಕೃತ ಶಬ್ದಗಳ ಮೇಲೆ ತೆಲುಗು ಸೇರಿಸುವ ದಿನಕರ ಕೊಡುಕು, ಅನಿಮಿಷಮೊದವು - ಇತ್ಯಾದಿ ಸಮಾಸ ಪದಗಳು ವ್ಯಾಕರಣದ

ವಿರುದ್ಧವೆಂದು ಹೇಳಿ ಅವುಗಳನ್ನು ನಿಷೇಧಿಸಿದ್ದಾನೆ (ಆಂ.ಭಾ.ಭೂ. ಪದ್ಯ ೧೩೩). ಕೇತನನನ್ನೆ ಅನುಸರಿಸಿದ ವೆದ್ದನನು ಕೂಡ 'ಕ್ಷೀರಾರ್ಣವ ಕೂತುರು', 'ಸಂಸಾರಾರ್ಣವಯೋಪ' - ಮುಂತಾದ ಸಮಾಸ ಪದಗಳನ್ನು ನಿಷೇಧಿಸಿದ್ದಾನೆ. ಆದರೆ ಪಾಲ್ಕುರಿಕೆ ಸೋಮನಾಥನು ತನ್ನ 'ಪಂಡಿತಾರಾಧ್ಯ ಚರಿತೆ'ಯಲ್ಲಿ ಧರ್ಮ ಕಲೆ (೧೪೦) ಎಂಬ ಪ್ರಯೋಗವನ್ನು ಮಾಡಿದ್ದಾನೆ.

ಮತ್ತೊಂದು ಪದ್ಯದಲ್ಲಿ ಕೇತನನು ಪೂರ್ವ ಕವಿಗಳ ಸಮ್ಮತದಿಂದ ಒಂದೊಂದು ಸ್ಥಳದಲ್ಲಿ ತೆಲುಗು ಪದಗಳ ಮೇಲೆ ಸಂಸ್ಕೃತ ಪದಗಳು ಬರಬಹುದೆಂದು ಹೇಳಿ 'ವಾಡಿ ಮಯೂಖಮುಲು', 'ವೇಡಿ ಪಯೋಧಾರಲು' - ಎಂಬಿವುಗಳನ್ನು ಉದಾಹರಿಸಿದ್ದಾನೆ. ಅದಕ್ಕೆ ಮತ್ತೊಂದು ಉದಾಹರಣೆ 'ಕರಕಂಠನಾಮ' ಎಂಬುದು.

ಕೇತನನು ಈ ಸಮಸಂಸ್ಕೃತದ ಮೇಲೆ ಒಟ್ಟು ಎಂಟು ಪದ್ಯಗಳನ್ನು ರಚಿಸಿದ್ದಾನೆ. 'ತನ' ವಿಶಿಷ್ಟ 'ಕುಲಾಚಾರಮು' ಎಂಬಲ್ಲಿ 'ತನ' ಎಂಬುದು ಧರ್ಮದೊಂದಿಗೆ ಅನ್ವಯವಾದ ಕಾರಣ ಇದು ಸಾಧುವೆಂದು ಅವನ ಇಂಗಿತ (ಆ.ಭಾ.ಭೂ. ಪದ್ಯ ೧೩೦, ೧೩೧). 'ದಿನಕರ ಕೊಡುಕು'; 'ಅನಿಮಿಷ ಮೊದವು' - ಎಂಬಿವು ಅಸಾಧುಗಳೇ. ಸಮಾಸದಲ್ಲಿ ಪೂರ್ವಪದವು ತೆಲುಗು ಇದ್ದು ಉತ್ತರ ಪದವು ಸಂಸ್ಕೃತ ಪದವಾದರೆ ಅಲ್ಲಿಯ ಸಮಾಸ ವಿಧಾನವು ಕೆಲವು ಮಹಾಕವಿಗಳ ಪ್ರಯೋಗಗಳಲ್ಲಿ ಸಾಧುವೆಂದು ತಿಳಿಸಿದ್ದಾನೆ. ಆದರೆ ಪೂರ್ವ ಪದವು ಸಂಸ್ಕೃತವಾಗಿ ಉತ್ತರ ಪದವು ತೆಲುಗು ಪದವಾದರೆ ಅಲ್ಲಿ ಸಮಾಸವು ಅಸಾಧು ಎಂದಿದ್ದಾನೆ. ಕೇತನನ ಈ ನಿರೂಪಣೆಯು ಬಹುವ್ರೀಹಿ ಸಮಾಸವನ್ನು ಬಿಟ್ಟು ಉಳಿದವುಗಳಲ್ಲಿ ಸರಿ ಹೊಂದವು. ಉದಾ: ಪ್ರಾಣಗೊಡ್ಡಮು, ಇಲ್ಲಿಯ ಪ್ರಾಣ ಪೂರ್ವ ಪದ ಸಂಸ್ಕೃತ. ಕಾರಣ ಅದು ಸಾಧುವಲ್ಲ. ಅಲ್ಲಿ ಸಮಾಸ ಕೂಡದು.

ತೆಲುಗು ಭಾಷೆಯಲ್ಲಿ 'ಮಿಶ್ರ ಸಮಾಸ'ವನ್ನು ಬಹುತೇಕ ವೈಯಾಕರಣರು ಅಂಗೀಕರಿಸಿದ್ದಾರೆ. ವೈರಿ ಸಮಾಸವು (ಅರಿ ಸಮಾಸ) ತೆಲುಗು ಭಾಷೆಗೆ ಗ್ರಾಹ್ಯವಲ್ಲವೆಂದು ಕನ್ನಡದಂತೆ ಇಲ್ಲಿಯೂ ತಿಳಿಸಲಾಗಿದೆ. ಅರಿಸಮಾಸ ಕನ್ನಡಕ್ಕೆ ಹೇಗೆ ದೋಷವೋ ವೈರಿ ಸಮಾಸವು ತೆಲುಗು ಭಾಷೆಯಲ್ಲಿ ದೋಷವೇ. ಆದರೆ ಕೇತನನು ವೈರಿ ಸಮಾಸವನ್ನು ಹೆಸರಿಸಿಲ್ಲ. ಅದರ ಪ್ರಸ್ತಾಪ ಇಲ್ಲ.

ತೆಲುಗು ವೈರಿ ಸಮಾಸವು ಕನ್ನಡದ ಅರಿ ಸಮಾಸದಿಂದ ಭಿನ್ನವಾದುದು. ಅಲ್ಲಿಯ ವೈರಿ ಸಮಾಸವು ಎಂದರೆ ವೈರಿ ಸಮಾಸದಲ್ಲಿ ಒಂದು ಶಬ್ದವು ಸಂಸ್ಕೃತ. ಅದಕ್ಕೆ ತೆಲುಗು ವಿಭಕ್ತಿ ಸೇರಿ, ವಿಗ್ರಹಿಸುವಂತಿಲ್ಲ. ಉದಾ: ಕ್ಷೀರಾರ್ಣವ ಕೂತುರು. ಇದು ವೈರಿ ಪದ. ಇಲ್ಲಿಯ ಪೂರ್ವ ಪದವು ತತ್ಸಮವಲ್ಲದುದರಿಂದ ತೆಲುಗು

ವಿಭಕ್ತಿಗಳಿಂದ ವಿಗ್ರಹಿಸುವಂತಿಲ್ಲ. ಅನೇಕ ಮಾರುಲು, ಅಲ್ಪದಂಡು ಈ ಮೊದಲಾದುವು ಕೂಡ ಇಂಥವೇ. 'ಕಜಕಂಠ' ಎಂಬ ಶಬ್ದವೂ ಕೂಡ ಇಂಥದ್ದೆ. 'ಕಜ' ತೆಲುಗು ಶಬ್ದ. ಇದಕ್ಕೆ ಸಂಸ್ಕೃತ ವಿಭಕ್ತಿ ಪ್ರತ್ಯಯಬಾರದು. ಆದಕಾರಣ ಇದು ವೈರಿ ಸಮಾಸ.

ಆದರೆ ಕೇತನನ ದೃಷ್ಟಿಯೇ ಬೇರೆ. ಪೂರ್ವ ಪದವು ತೆಲುಗು ಆಗಿದ್ದು (ಕಜಿ) ಉತ್ತರ ಪದವು (ಕಂಠ) ಸಂಸ್ಕೃತವಾಗಿದ್ದರೆ, ಅದು ಕೆಲವೆಡೆ ಸಾಧುವೆಂದು ತಿಳಿಸಿರುವುದರಿಂದ ಕಜಿಕಂಠವೂ ಸಾಧುವೆ. ಕೇತನನ ಈ ವಿಷಯ ಸರ್ವಗ್ರಾಹ್ಯವಲ್ಲವೆಂದು ತಿಳಿದುಬರುತ್ತದೆ. ವೈರಿ ಸಮಾಸದ ಲಕ್ಷಣ ಸಮ ಸಂಸ್ಕೃತ ವಿಧಾನ ಆತನಲ್ಲಿ ಸ್ಪಷ್ಟವಾಗಿಲ್ಲ.

ಕನ್ನಡ ವೈಯಾಕರಣಿಗಳಾದ ನಾಗವರ್ಮ, ಕೇಶಿರಾಜಾದಿಗಳು ಕೂಡ ಇಂಥ ಅರಿಸಮಾಸ ಪದಗಳನ್ನು ಕೆಲವು ಸಂದರ್ಭಗಳಲ್ಲಿ ಎಂದರೆ ಮಾರ್ಗ ಪ್ರಯೋಗ, ಬಿರುದಾವಳಿಗಳಲ್ಲಿ ಅಂಗೀಕರಿಸಿದ್ದಾರೆ. ಅದಕ್ಕೆ ಕೇಶಿರಾಜನ ಪದ್ಯವೊಂದರಲ್ಲಿ-

ಪದವಿಧಿ ಕನ್ನಡಕಂ ಸ
ಕ್ಕದಕ್ಕಮಿಲ್ಲಾದ್ಯರಿಂದೆ" (ಶ.ಮ.ದ. ಸೂತ್ರ ೧೮೫)

ಎಂದಿದೆ. ಉದಾ: ಮಣಿಮಂಚ, ಮುಖತಾವರೆ-ಈ ಮೊದಲಾದ ೨೧ ಪದಗಳಲ್ಲಿ ಮಾತ್ರ ಅರಿಸಮಾಸ ದೋಷವಿಲ್ಲ. ತೆಲುಗಿಗೆ ಕೆಲವು ಅರ್ವಾಚೀನ ಲಾಕ್ಷಣಿಕರು ಇಂದು ತೆಲುಗು ಶಬ್ದಗಳ ಮೇಲೆ ಸಂಸ್ಕೃತ ಶಬ್ದಗಳನ್ನು ಸಮೀಕರಿಸಿ ಸಮಾಸ ಮಾಡಬಹುದೆಂದು ತಿಳಿಸಿದ್ದಾರೆ. ಅಲ್ಲಿ ಅರಿ ಸಮಾಸ ದೋಷವಿಲ್ಲವೆಂದು ಕೂಡ ಸಾರಿದ್ದಾರೆ. ಅದಕ್ಕೆ ಕಾರಣವಾಗಿ ಅಹೋಬಲ ಪತಿ ಎಂಬ ವಿದ್ವಾಂಸರನ್ನೇ ಹೆಸರಿಸಬಹುದು. ಅವನು ತೆಲುಗು ಸಂಸ್ಕೃತ ಶಬ್ದಗಳ ಅರಿ ಸಮಾಸವನ್ನು ಸ್ವೀಕರಿಸಿದ್ದಾನೆ. ಹೀಗೆ ತೆಲುಗು ಲಾಕ್ಷಣಿಕರು ಕೆಲವರು ತೆಲುಗು ಶಬ್ದಗಳ ಮೇಲೆ ಸಂಸ್ಕೃತ ವಿಭಕ್ತಿಗಳನ್ನು ಸ್ವೀಕರಿಸಿದ್ದಾರೆ.

ಕೇತನ 'ನೀ' ಎಂಬ ಪದವನ್ನು ಸಂಸ್ಕೃತದ ಶಬ್ದದೊಂದಿಗೆ ಸಮೀಕರಿಸಿ ಸಮಾಸ ಮಾಡಬಹುದೆಂದು ಹೇಳಿದ್ದಾನೆ. ಉದಾ : ನೀ ವಿನೂತ್ನಮಣಿ ನೂಪುರ. ನನ್ನಯನು ಭಾರತದಲ್ಲಿ 'ನೀ' ಮತ್ತು 'ಮೀ' ಎರಡನ್ನೂ ಸ್ವೀಕರಿಸಿದ್ದಾನೆ.

ತೆಲುಗಿನ ವೈರಿ ಸಮಾಸವು ಕನ್ನಡದ ಅರಿ ಸಮಾಸಕ್ಕೆ ಸಂವಾದಿಯಾಗಿದೆ. ಈ ಸಮಾಸ ಪ್ರಕರಣವನ್ನು ಕೇತನನು ಸಂಸ್ಕೃತ ಜಾಡಿನಲ್ಲೇ ಬರೆದಿದ್ದರೂ ಅವನಲ್ಲಿ ತೆಲುಗುತನವಿದೆ. ಅದಕ್ಕೆ ಉದಾಹರಣೆಗಳಾಗಿ ಕರ್ಮಧಾರೆಯದಲ್ಲಿನ ನಿಗಾಗಮ;

ಃಹಿಯಲ್ಲಿನ ಸಮಾಸಾಂತ ಕಾರ್ಯಗಳು, ದ್ವಂದ್ವ ಸಮಾಸದಲ್ಲಿಯ ಂದೇಶ ಮತ್ತು ದುಗಾಗಮ ತನ-ನಾ-ನೀ; ಪದಗಳಲ್ಲಿಯ ಸಮಾಸ ಪ್ರಕ್ರಿಯೆ, ಮಾಸ - ಇತ್ಯಾದಿಗಳನ್ನು ಕಾಣಬಹುದು. ಕೇತನನಿಗೆ ತೆಲುಗು ಭಾಷೆಯ ಂಯದ ಬಗ್ಗೆ ಅರಿವು ಇರಬೇಕು. ಆದರೂ ಅವನ ಸಮಾಸ ವಿಧಾನವು ರ್ಣವಾದುದಲ್ಲ ; ಸಂಕ್ಷಿಪ್ತವಾದುದು. ಕನ್ನಡದಂತೆ ವಿಸ್ತೃತವಾದುದಲ್ಲ.

:

ಂಗವರ್ಮನು ಕ.ಭಾ.ಭೂ.ದ ಆರನೆಯ ಪ್ರಕರಣವಾದ 'ಸಮಾಸ ವಿಧಾನಂ' ುಬಲ್ಲಿ ಸೂತ್ರ ೧೨೪ ರಿಂದ ಸೂತ್ರ ೧೬೫ರವರೆಗೆ ಒಟ್ಟು ೪೨ ಸೂತ್ರಗಳಿವೆ. ತನನ ಆಂ.ಭಾ.ಭೂ.ದಲ್ಲಿ ಪ್ರತ್ಯೇಕ ಪ್ರಕರಣವಿಲ್ಲದಿದ್ದರೂ, ಸುಮಾರು ೨೧ ಂದ ಪದ್ಯಗಳಲ್ಲಿ ಈ ಸಮಾಸ ವಿಧಾನವು ಮೂಡಿ ಬಂದಿದೆ.

ಂಗವರ್ಮನು ಸಮಾಸ ವಿಧಾನವನ್ನು ಸಂಸ್ಕೃತದಿಂದಲೇ ಸ್ವೀಕರಿಸಿದ್ದಾನೆ. ಟ್ಟು ವ್ಯತ್ಯಾಸಗಳನ್ನು ಮಾಡಿಕೊಂಡಿಲ್ಲ. ಕೇತನನಾದರೂ ಸಮಾಸ ಭಜನೆಯಲ್ಲಿ ಸಂಸ್ಕೃತ ವ್ಯಾಕರಣ ರೀತಿಯನ್ನು ಅನುಸರಿಸಿದರೂ, ಸಮಾಸ ಂಮಗಳನ್ನು ಸಂಸ್ಕೃತದಿಂದ ಸ್ವೀಕರಿಸದೆ, ಸ್ಥೂಲವಾದ ನಾಲ್ಕು ಭಾಗಗಳನ್ನು ಾಡಿಕೊಂಡಿದ್ದಾನೆ.

ಃ ನಾಲ್ಕು ವಿಭಾಗಗಳು ಅಷ್ಟಾಧ್ಯಾಯಿ, ಮಹಾಭಾಷ್ಯ ಮುಂತಾದವಲ್ಲಿ ರುವಂತಹವೇ. ಕರ್ಮಧಾರೆಯ ಮತ್ತು ದ್ವಿಗು ತತ್ಪುರುಷದ ೀದಗಳೆನ್ನಬಹುದು. ಅಷ್ಟಾಧ್ಯಾಯಿಯನ್ನು ಅನುಸರಿಸಿ ಮಹಾಭಾಷ್ಯವೂ, ರ್ೂರ್ವ ಪದಾರ್ಥ ಪ್ರಧಾನೋವ್ಯಯಿೂ ಭಾವ:, ಉತ್ತರ ಪದಾರ್ಥ ಧಾನಸ್ತತ್ಪುರುಷಃ, ಅನ್ಯಪದಾರ್ಥ ಪ್ರಧಾನೋ ಬಹುವ್ರೀಹಿಃ, ಉಭಯ ವಾರ್ಥ ಪ್ರಧಾನೋ ದ್ವಂದ್ವಃ" ಎಂದಿದೆ (೨-೧-೬).

ಮ.ದವು "ಷಟ್ ಸಮಾಸಂಗಳ್ಗಂ ಸಪ್ತ ವಿಭಕ್ತಿಯಂ ಪತ್ತಿಸುವುದು" (ಸೂ. ಂವರಣೆ) ಎಂದು ಹೇಳುವಾಗ ಆರು ಸಮಾಸಗಳನ್ನು ಹೇಳಿದೆ. ಸಂಸ್ಕೃತ ಗಳಲ್ಲಿಲ್ಲದ ಕ್ರಿಯಾ ಸಮಾಸವನ್ನು ಕ.ಭಾ.ಭೂ. ಹೇಳಿದೆ. ಗಮಕ ಸಮಾಸವನ್ನು ೯.ಮ.ದ. ಹೇಳಿದೆ.

ಗವರ್ಮನಾದರೂ 'ಭಾಷಾಭೂಷಣ'ದಲ್ಲಿ - "ಉತ್ತರ ಪದಾರ್ಥ ತ್ಪುರುಷಃ" (ಸೂತ್ರ ೧೩೫); ಪೂರ್ವ ಪದಾರ್ಥ ಪ್ರಧಾನೋವ್ಯಯಿೂಭಾವಃ ೧೩೬), ಸರ್ವ ಪದಾರ್ಥ ಪ್ರಧಾನೋ ದ್ವಂದ್ವಃ (ಸೂತ್ರ ೧೩೭)); ಅನ್ಯ

ಪದಾರ್ಥ ಪ್ರಧಾನೋ ಬಹುವ್ರೀಹಿಃ” -ಎಂದು ಮಹಾಭಾಷ್ಯಯನ್ನೇ ಅನುಸರಿಸಿ ಪ್ರಮುಖವಾದ ಸಮಾಸಗಳ ಲಕ್ಷಣಗಳನ್ನು ತಿಳಿಸಿದ್ದಾನೆ. ಅದೇ ಅಭಿಪ್ರಾಯವನ್ನೇ 'ಕಾವ್ಯಾವಲೋಕನ' ಹಾಗೂ 'ಶಬ್ದಮಣಿದರ್ಪಣ'ದಲ್ಲೂ ಕಾಣಬಹುದು.

ತೆಲುಗಿನ ಕೇತನನಾದರೂ ತನ್ನ ಆಂ.ಭಾ.ಭೂ.ದಲ್ಲಿ ತತ್ಪುರುಷಾದಿ ಸಮಾಸಗಳ ಹೆಸರುಗಳನ್ನು ಹೇಳದೆ ಕೇವಲ ಸಮಾಸಗಳ ಲಕ್ಷಣಗಳನ್ನು ವಿವರಿಸಿದ್ದಾನೆ. “ಪೂರ್ವ ಪದಾರ್ಥ ಪ್ರಧಾನಂಬುನು, ಉತ್ತರ ಪದಾರ್ಥ ಪ್ರಧಾನಂಬುನು, ನನ್ಯ ಪದಾರ್ಥ ಪ್ರಧಾನಂಬುನು, ಉಭಯ ಪದಾರ್ಥ ಪ್ರಧಾನಂಬುನು” - ಎಂದು ಚತುರ್ವಿಧವಾದ ಸಮಾಸಗಳ ಲಕ್ಷಣಗಳನ್ನು ತಿಳಿಸಿದ್ದಾನೆ (ಸೂತ್ರ ೧೧೦).

ಕರ್ನಾಟಕ ವೈಯಾಕರಣರು ದ್ವಂದ್ವ ಸಮಾಸಕ್ಕೆ “ಸರ್ವ ಪದಾರ್ಥ ಪ್ರಧಾನಂ” ಎಂದು ತಿಳಿಸಲಾಗಿ, ಕೇತನ, “ಉಭಯ ಪದಾರ್ಥ ಪ್ರಧಾನ” ಎಂದು ವಿವರಿಸಿದ್ದಾನೆ. ಇದು ಒಂದು ವ್ಯತ್ಯಾಸ.

ಕೇತನನು ನಿರೂಪಿಸಿದ ಉತ್ತರ ಪದಾರ್ಥ ಪ್ರಧಾನ ಸಮಾಸಗಳೆಲ್ಲವೂ ಕರ್ಮಧಾರೆಯ ಸಮಾಸವೇ ಎಂಬುದರಲ್ಲಿ ಸಂದೇಹವಿಲ್ಲ. ದ್ವಿಗು ಸಮಾಸವನ್ನಾಗಲಿ, ವ್ಯಧಿಕರಣ ತತ್ಪುರುಷವನ್ನಾಗಲಿ ಆತನು ಇದರ ಕೆಳಗೆ ವಿವರಿಸಿಲ್ಲ. ಇರುವದಿ, ಮುಪ್ಪದಿ, ನಲುವದಿ - ಈ ಮೊದಲಾದವುಗಳನ್ನು ಬೇರೆ ಸಂದರ್ಭದಲ್ಲಿ ಕೊಟ್ಟಿದ್ದಾನೆ. (ಸೂ. ೧೨೩). ತತ್ಪುರುಷದ ಉದಾಹರಣೆಗಳನ್ನು ಕೂಡ ಬೇರೆ ಸಂದರ್ಭದಲ್ಲಿ ಕೊಟ್ಟಿದ್ದಾನೆ. ಪಲುವರುಸ (ಹಲ್ಲಿನ ವರಸೆ), ಕನುಗೊನಲು (ಕಣ್ಣತುದಿ) ಮುಂತಾದವನ್ನು ಷಷ್ಠೀ ತತ್ಪುರುಷವೆಂದು ಭಾವಿಸಬಹುದು (ಪದ್ಯ ೧೨೨). ಉದಾಹರಣೆಗಳನ್ನು ಗಮನಿಸಿದರೆ ಅದು ಕರ್ಮಧಾರಯವೆಂಧು ತಿಳಿದುಬರುತ್ತದೆ. ಆ ಸಮಾಸದಲ್ಲಿ ನಿಗಾಗಮವು ಬರುವುದಲ್ಲದೆ, 'ಅನಿ' ಎಂಬುದು ಬರುವುದಾಗಿ ವಿವರಿಸಿದ್ದಾನೆ.

೪. ಕೇತನ ಅನ್ಯ ಪದಾರ್ಥ ಪ್ರಧಾನ ಸಮಾಸದಲ್ಲಿ ಉದಾಹರಿಸಿದವುಗಳಲ್ಲಿ - 'ಚೇತಲಾಡಿ' ಎಂಬುದೊಂದು. ಅದು ಸಮಾಸವಾಗಿರದೆ ತದ್ಭವವಾಗಿದೆ. ಕನ್ನಡದಲ್ಲಿ ಅದು ತದ್ಭವವೇ. ಚೇತಲಾಡಿ - ಸೋಗುಗಾರ್ತಿ. ಅದನ್ನು ಕೇತನ ಬಹುವ್ರೀಹಿ ಸಮಾಸವೆಂದಿದ್ದಾನೆ. ಬಹುವ್ರೀಹಿ ಸಮಾಸಕ್ಕೆ ಅವನು ಕೊಟ್ಟಿರುವ ಉದಾಹರಣೆಗಳಲ್ಲಿ ಇದೊಂದನ್ನು ಬಿಟ್ಟರೆ ಎಲ್ಲವೂ ಆ ಸಮಾಸದ ಲಕ್ಷಣಕ್ಕೆ ಸಮಂಜಸವಾಗಿಯೇ ಇದೆ.

ಕೇತನನ ನಿರೂಪಣೆಯು 'ಮೊದಲಿ ಪದಂಬು ವಿಭಕ್ತುಲು ಬುಚ್ಚಿ ಮೀದಿ ಪದಂಬುಲ ತೋಡ ಸಮ್ಯಕ್ಸಂಸಕ್ತಂಬುಲಗುಟಂ ಜೇಸಿ ಸಮಾಸಂಬುಲಯ್ಯೆ” ಎಂಬುದು

(ಆಂ.ಭಾ.ಭೂ. ಪದ್ಯ ೧೧೦) ಸಮಾಸದ ಲಕ್ಷಣವನ್ನು ನಿರೂಪಿಸುತ್ತದೆಯಷ್ಟೆ. ಇಲ್ಲಿ ಎರಡು ವಿಷಯಗಳನ್ನು ಗಮನಿಸಬೇಕಾಗಿದೆ. ಒಂದು ಮೊದಲ ಪದವು ಮೇಲಿನ ಪದದೊಂದಿಗೆ ಸಮೀಕರಿಸಿ ಸಮ್ಯಕ್ಸಂಸಕ್ತವಾದುದರಿಂದ ಅದಕ್ಕೆ ಸಮಾಸವೆಂಬ ಸಂಜ್ಞೆ ಸಲ್ಲುತ್ತದೆ. ಎರಡನೆಯ ಅಭಿಪ್ರಾಯವು ಅಂಥ ಎರಡು ಪದಗಳಲ್ಲಿ ಮೊದಲ ಪದದ (ಪೂರ್ವ ಪದ) ವಿಭಕ್ತಿ ಮಾತ್ರ ಲೋಪಿಸುತ್ತದೆ ಎಂಬುದು. ಇವುಗಳಲ್ಲಿ ಮೊದಲನೆಯದು ಪಾಣಿನೀಯ, ಕಾತಂತ್ರ ಪದ್ಧತಿಗಳ ಸಮನ್ವಯದಿಂದ ಬಂದಿರುವುದು. ಎರಡನೆಯದಕ್ಕೆ ಮಾತ್ರ ಪಾಣಿನೀಯವಾಗಲಿ ಇಲ್ಲವೇ ಕಾತಂತ್ರವಾಗಲಿ ಮೂಲವಲ್ಲ. ಅದು ಬೇರೆಯೇ ಆಗಿದೆ.

ಈ ದೃಷ್ಟಿಯಿಂದ ಕೇತನನು ವಿಭಕ್ತಿ ಲೋಪ ವಿಷಯದಲ್ಲಿ ಕನ್ನಡ ವ್ಯಾಕರಣ ಸಂಪ್ರದಾಯವನ್ನು, ಅದರಲ್ಲೂ ಮುಖ್ಯವಾಗಿ ನಾಗವರ್ಮನ ಕ.ಭಾ.ಭೂ.ವನ್ನು ಅನುಸರಿಸಿಯೇ ತನ್ನ ಕೃತಿಯನ್ನು ಬರೆದಿರುವುದಾಗಿ ನಿರ್ಣಯಿಸಬಹುದು[೮] ಎಂದಿರುವುದು ಗಮನಾರ್ಹ.

ಪಾಣಿನಿ ಮತ್ತು ಕಾತಂತ್ರಗಳ ಪ್ರಕಾರ ಪೂರ್ವೋತ್ತರ ವಿಭಕ್ತಿಗಳೆಲ್ಲ ಲೋಪಿಸುತ್ತವೆ. ಆದರೆ ನಾಗವರ್ಮಾದಿಗಳು 'ತ ತ್ರಾಂತರ್ವರ್ತಿನ್ಯೋ ವಿಭಕ್ತಯೋ ಲೋಪ್ಯಾಃ' ಎಂದು 'ನಡುವೆ ವರ್ತಿಸುವ' ವಿಭಕ್ತಿಗಳಿಗೆ ಮಾತ್ರ ಲೋಪ ವಿಧಿಸಿದ್ದಾನೆ. ಇದನ್ನೇ ಕೇತನನೂ ಅನುಸರಿಸಿದ್ದಾನೆ.

ಇಲ್ಲಿ ನಮಗೆ ಕನ್ನಡ ಮತ್ತು ತೆಲುಗುಗಳ ವ್ಯಾಕರಣ ಕಾರ್ಯಗಳಲ್ಲಿ ಹೋಲಿಕೆ ಕಂಡುಬರುತ್ತದೆ.

## ಅಡಿಟಿಪ್ಪಣಿ

೧. ಡಾ. ಟಿ.ವಿ. ವೆಂಕಟಾಚಲಶಾಸ್ತ್ರೀ : ಹೊಸಗನ್ನಡದ ವ್ಯಾಕರಣ, ಪು. ೮೩.

೨. ಭಟ್ಟಾಕಳಂಕ : ಶಬ್ದಾನುಶಾಸನಂ, ಸೂತ್ರ ೨೯೨.

೩. ತೆಕ್ಕುಂಜೆ ಗೋಪಾಲಕೃಷ್ಣಭಟ್ಟ : ಕನ್ನಡ ಸಮಾಸಗಳು, ಪು. ೪ ರಿಂದ ಉಲ್ಲಿಖಿತ.

೪. ಅದೇ, ಪು. ೧೮.

೫. ಎಂ.ವಿ. ಸೀತಾರಾಮಯ್ಯ : ಪ್ರಾಚೀನ ಕನ್ನಡ ವ್ಯಾಕರಣಗಳು, ಪು. ೧೭೫.

೬. ಡಾ. ಸಂಗಮೇಶ ಬಿರಾದಾರ : ವೈಯಾಕರಣಿ ಎರಡನೆಯ ನಾಗವರ್ಮ, ಪು. ೧೬೯.

೭. ಅದೇ.

೮. ಡಾ. ವಿ. ಶಿವಾನಂದ : ಶಬ್ದಮಣಿದರ್ಪಣ ವಿಳಾಸ, ಪು. ೧೫೪.

೯. ತೆಕ್ಕುಂಜೆ ಗೋಪಾಲ ಕೃಷ್ಣ ಭಟ್ಟ : ಕನ್ನಡ ಸಮಾಸಗಳು, ಪು. ೩೩.

೧೦. ಡಾ. ವಿ. ಶಿವಾನಂದ : ಶಬ್ದಮಣಿದರ್ಪಣ ವಿಳಾಸ, ಪು. ೧೫೩.

೧೧. ಡಾ. ಸಂಗಮೇಶ ಬಿರಾದಾರ : ವೈಯಾಕರಣಿ ಎರಡನೆಯ ನಾಗವರ್ಮ, ಪು.

೧೨. ಅದೇ ಪು. ೧೮೩.

೧೩. ಡಾ. ಎ. ರಾಜೇಶ್ವರ ಶರ್ಮ : ಆಂಧ್ರ ವ್ಯಾಕರಣ ವಿಕಾಸಮು, ಪು. ೨೦

# ತದ್ಧಿತಗಳು

ತದ್ಧಿತ (ತತ್ + ಹಿತ) ಎಂದರೆ - "ಅದಕ್ಕೆ ಅಥವಾ ಅವರಿಗೆ ಹಿತವಾದುದು" ಸುಬಂತಗಳಿಗೆ ಭಾವಾದ್ಯರ್ಥಗಳಲ್ಲಿ ವಿಹಿತವಾದ ಪ್ರತ್ಯಯಗಳಿಗೆ ತದ್ಧಿತ ಪ್ರತ್ಯಯಗಳೆಂದು ಹೆಸರು.[೧]

"ಧಾತು ಮತ್ತು ಅವ್ಯಯ ರಹಿತವಾದ ನಾಮಪದಗಳಿಗೆ ಹತ್ತುವ ಕೆಲವು ವಿಶಿಷ್ಟ ಪ್ರತ್ಯಯಗಳನ್ನು ತದ್ಧಿತ ಪ್ರತ್ಯಯಗಳೆಂದು ಕರೆಯುತ್ತಾರೆ. ತದ್ಧಿತವೆಂದರೆ ಇಲ್ಲಿ ಕೆಲವು ಪ್ರತ್ಯಯಗಳನ್ನೊಳಗೊಂಡ ನಾಮಪದ."[೨] "A noun formed by a Taddhita affix or a derivative noun"[3] ಎಂಬುದು ಕಿಟ್ಟೆಲ್‌ರವರ ಅಭಿಮತ. ಅವನು ಇವುಗಳನ್ನು ಸಾಧಿತನಾಮಗಳ ಗುಂಪಿಗೆ ಸೇರಿಸಿದ್ದಾನೆ.

ಕ್ರಿಯೆಯಂ ನುಡಿಯದುದು ವಿಭ
ಕ್ತಿಯನಿಲ್ಲದುದ (ದು) ಅರ್ಥಮುಳ್ಳುವಂತದು ಲಿಂಗಂ
ನಿಯತ ಚತುರ್ಭೇದಮದಾ
ರಯೆ ಕೃತ್ ತದ್ಧಿತ ಸಮಾಸ ನಾಮಸ್ಥಿತಿಯಿಂ॥

(ಶ.ಮ.ದ. ಸೂತ್ರ ೮೨)

ಕ್ರಿಯಾರ್ಥವನ್ನು ನುಡಿಯದೆ ಇರುವುದು, ವಿಭಕ್ತಿ ಪ್ರತ್ಯಯ ರಹಿತವಾದುದು, ಅರ್ಥವುಳ್ಳದುದು, ಲಿಂಗವೆನಿಸಿಕೊಳ್ಳುವುದು. ಕ್ರಮವಾಗಿ ಅದು ಕೃತ್, ತದ್ಧಿತ, ಸಮಾಸ, ನಾಮ ಲಿಂಗಗಳೆಂದು ಚತುರ್ವಿಧವಾದುದು.

ನಾಮ ಲಿಂಗಗಳು ನಾಮ ವಿಭಕ್ತಿ ಪ್ರತ್ಯಯಗಳನ್ನು ಪಡೆದು ನಾಮ ಪದಗಳನ್ನು ಸಿದ್ಧಿಸಿಕೊಳ್ಳುವಂತೆ, ತದ್ಧಿತ ಪ್ರತ್ಯಯಗಳನ್ನು ಪಡೆದ ತದ್ಧಿತ ಲಿಂಗಗಳು ಮುಂದೆ ತದ್ಧಿತಾಂತ ಪದಗಳನ್ನು ಸಾಧಿಸಿಕೊಳ್ಳುತ್ತವೆ. ಈ ದೃಷ್ಟಿಯಿಂದ ತದ್ಧಿತ ನಾಮಕ್ಕೆ ಹತ್ತುವ ವಿಭಕ್ತಿ ಪ್ರತ್ಯಯಗಳ ಪೂರ್ವದಲ್ಲಿರುವುದು ಪ್ರಾತಿಪದಿಕ ರೂಪ. ಇದಕ್ಕೆ ಮೂಲವೆನ್ನುತ್ತಾರೆ. ಈ ಪ್ರಾತಿಪದಿಕವೇ ತದ್ಧಿತಲಿಂಗ.

ಒಂದು ಉದಾ : ಅಡಪ ಎಂಬುದು ಪ್ರಾತಿಪದಿಕ. 'ವಳ' ಎಂಬುದು ತದ್ಧಿತ ಪ್ರತ್ಯಯ. ಇವೆರಡು ಸೇರಿ ಅಡಪ + ವಳ > ಅಡಪವಳ ಎನ್ನುವುದು ತದ್ಧಿತಲಿಂಗ. ಇದು ಸಪ್ತವಿಧ ವಿಭಕ್ತಿ ಪ್ರತ್ಯಯಗಳು ಪಡೆದಾಗ ಅವು ತದ್ಧಿತ ಪದಗಳಾಗುವುವು.

ಅಡಪವಳ್ + ಮ್ = ಅಡಪವಳಂ (ಮ್ ಪ್ರಥಮಾ ವಿಭಕ್ತಿ)

ಅಡಪವಳ್ + ಅಮ್ = ಅಡಪವಳನಂ (ಅಮ್ ದ್ವಿತೀಯ)

ಅಡಪವಳ್ + ಇಂ = ಅಡಪವಳಿಂ (ಇಂ ತೃತೀಯೆ)

ಹೀಗೆ ಅಡಪವಳಂಗೆ, ಅಡಪವಳತ್ತಣಿಂ, ಅಡಪವಳನ, ಅಡಪವನೊಳ್ ಇತ್ಯಾದಿ. ಕಾರಣ ಕಿಟ್ಟೆಲ್‌ರವರು ತದ್ಧಿತಾಂತ ಪದಗಳನ್ನು ಸಾಧಿತನಾಮ ರೂಪಗಳೆಂದು ಕರೆದುದು ಸಮಂಜಸವಾಗಿಯೇ ಇದೆ.

ಪ್ರಕೃತಿ + ಪ್ರತ್ಯಯ = ಪದವಾದಂತೆ ಮೇಲಿನ ಅಡಪವಳಕ್ಕೆ

ನಾಮ ವಿಭಕ್ತಿಗಳು (ತದ್ಧಿತ ಪ್ರತ್ಯಯಗಳನ್ನೊಳಗೊಂಡ) ಸೇರಿದಾಗ ತದ್ಧಿತ ಪದಗಳಾಗುತ್ತವೆ. ಈ ಕಾರಣ, "ಕೃತ್, ತದ್ಧಿತ, ಸಮಾಸ, ನಾಮಲಿಂಗಗಳಲ್ಲೇ ಶಬ್ದ ಪ್ರಪಂಚವೆಲ್ಲ ಬಹುಮಟ್ಟಿಗೆ ಅಡಗಿದೆಯೆಂಬುದನ್ನು ಮರೆಯಬಾರದು."[೪]

"ನಮ್ಮ ಕನ್ನಡ ವ್ಯಾಕರಣಕಾರರು ತದ್ಧಿತ ಪ್ರತ್ಯಯಗಳನ್ನು ಪ್ರಾತಿಪದಿಕಗಳಿಗೆ (ಅಥವಾ ನಾಮ ಪ್ರಕೃತಿಗಳಿಗೆ) ಹತ್ತಿಸಿ ನಿಷ್ಪನ್ನ ಶಬ್ದಗಳನ್ನು (Derivatives) ರೂಪಿಸಿಕೊಳ್ಳುವುದರಲ್ಲಿ ಸಂಸ್ಕೃತ ವ್ಯಾಕರಣಕಾರರನ್ನೇ ಅನುಸರಿಸಿದ್ದಾರೆ. ತದ್ಧಿತ ಪ್ರತ್ಯಯಗಳ ವರ್ಗೀಕರಣ ಅವುಗಳನ್ನು ಬೇರೆ ಬೇರೆ ಅರ್ಥಗಳಲ್ಲಿ ಪ್ರಯೋಗಿಸುವುದು - ಈ ಪ್ರಕ್ರಿಯೆಗಳು ಕನ್ನಡ ವ್ಯಾಕರಣಗಳಲ್ಲಿ ಸಂಸ್ಕೃತ ವ್ಯಾಕರಣಗಳಲ್ಲಿ ಇರುವಂತೆಯೇ ಇವೆ."[೫] ಆದರೆ ಕೆಲವು ಅಚ್ಚಗನ್ನಡ ತದ್ಧಿತ ಪ್ರತ್ಯಯಗಳು ಇಲ್ಲದೇ ಇಲ್ಲ. ಅವುಗಳನ್ನು ಸಂದರ್ಭೋಚಿತವಾಗಿ ಮುಂದೆ ವಿವರಿಸಲಾಗುವುದು.

**ಕನ್ನಡ ತದ್ಧಿತ ಪ್ರತ್ಯಯಗಳು :**

ನಾಗವರ್ಮ, ಕೇಶಿರಾಜ, ಭಟ್ಟಾಕಳಂಕರು ಕನ್ನಡ ತದ್ಧಿತ ಪ್ರತ್ಯಯಗಳನ್ನು ಕುರಿತು ವಿವರಿಸಿರುವವರಲ್ಲಿ ಪ್ರಮುಖರು. ನಾಗವರ್ಮನ ಕ.ಭಾ.ಭೂ.ದಲ್ಲಿ ತದ್ಧಿತ ಪ್ರತ್ಯಯಗಳಿಗೆ ಮೀಸಲಾದ ಸೂತ್ರಗಳು ಸುಮಾರು ೨೫ ಪ್ರತ್ಯಯಗಳನ್ನು ನೋಡಬಹುದು. ಕೇಶಿರಾಜನ ಶ.ಮ.ದಲ್ಲಿ ೪೦ಕ್ಕೂ ಮೀರಿದ ತದ್ಧಿತ ಪ್ರತ್ಯಯಗಳನ್ನು ಹೇಳಲಾಗಿದೆ. ಭಟ್ಟಾಕಳಂಕನು ಈರ್ವರ ಕೃತಿಗಳನ್ನು ಉಪಯೋಗಿಸಿಕೊಂಡು ಈ ವಿಷಯದಲ್ಲಿ ವ್ಯಾಪಕ ಚರ್ಚೆ ಮಾಡಿದ್ದಾನೆ. ನಾಗವರ್ಮನು ಕೊಟ್ಟಿರುವ ತದ್ಧಿತ ಪ್ರತ್ಯಯಗಳು ಹೀಗಿವೆ:

೧. ಇಗ :

"ತದಸ್ಯ ಪಣ್ಯಂ ಶಿಲ್ಪಂ ನಿಯೋಗಶ್ಚೇತ್ಯಸ್ಮಿನ್ನಿಗಃ" (ಸೂ. ೧೬೧)

'ಅದು ಅವನಿಗೆ ವ್ಯವಹಾರ (ಪಣ್ಯಂ)', 'ಅದು ಅವನಿಗೆ ಕೆಲಸವು', 'ಅದು ಅವನಿಗೆ ನಿಯೋಗ' - ಎಂಬ ಅರ್ಥದಲ್ಲಿ 'ಇಗ' ಪ್ರತ್ಯಯ ಬರುತ್ತದೆ.

ಉದಾ : ೧. ಪಣ್ಯ = ವ್ಯವಹಾರ : ತಂಬುಲಿಗಂ, ಗಂಧಿಗಂ, ದವಸಿಗಂ

ತಂಬುಲ + ಇಗ = ತಂಬುಲಿಗ > ತಂಬುಲಿಗಂ
(ತಾಂಬೂಲವನ್ನು ಮಾರುವವನು ಎಂದರ್ಥ)

ಗಂಧ + ಇಗ = ಗಂಧಿಗ > ಗಂಧಿಗಂ (ಗಂಧವನ್ನು ಮಾರುವವನು)
ದವಸ + ಇಗ = ದವಸಿಗ > ದವಸಿಗಂ (ದವಸವನ್ನು ಮಾರುವವನು)

ತಂಬುಲ, ಗಂಧ, ದವಸ - ಇವು ಪ್ರಸಿದ್ಧವಾದ ನಾಮಲಿಂಗಗಳೇ. 'ಇಗ' ಎಂಬ ತದ್ಧಿತ ಪ್ರತ್ಯಯವನ್ನು ಪಡೆದು ತದ್ಧಿತಾಂತ ಪದಗಳಾಗಿವೆ. ಕೆಲವಕ್ಕೆ ಉದಾಹರಣೆಗಳು : ಸರವಂದ + ಇಗ = ಸರವಂದಿಗ (ಬಾಣ ಹೂಡುವವನು), ಪಟ್ಟಸಾಲ + ಇಗ = ಪಟ್ಟಸಾಲಿಗ, ಚಿಪ್ಪು + ಇಗ = ಚಿಪ್ಪಿಗ.

ನಿಯೋಗಕ್ಕೆ ಉದಾ : ಭಂಡಾರ + ಇಗ = ಭಂಡಾರಿಗ; ಬಾಣಸ + ಇಗ = ಬಾಣಸಿಗ ಇತ್ಯಾದಿ (ನಿಯೋಗಂ)

ಕೇಶಿರಾಜನ ಪ್ರಯೋಗಗಳು : ಸರವಂದಿಗಂ, ಪಟ್ಟಸಾಲಿಗಂ, ಚಿಪ್ಪಿಗಂ - ಶಿಲ್ಪಂ 'ಇಗ' ಪ್ರತ್ಯಯ ಮತ್ತೆ ತಿಳಿಯುವವನು, ಓದುವವನು ಎಂಬ ಅರ್ಥದಲ್ಲೂ ಬರುತ್ತದೆ.

"ತದ್ವೇತ್ತ್ಯಧೀ ತೇವಾ" (ಸೂತ್ರ ೧೬೭)

ಉದಾ : ೧. ಜೋಯಿಸ + ಇಗ = ಜೋಯಿಸಿಗ, ಜೋಯಿಸಿಗಂ

೨. ಗಣಿತ + ಇಗ = ಗಣಿತಿಗ, ಗಣಿತಿಗಂ

೩. ಸಿದ್ಧಾಂತ + ಇಗ = ಸಿದ್ಧಾಂತಿಗ, ಸಿದ್ಧಾಂತಿಗಂ

"ತದಾಚರತಿ" (ಸೂತ್ರ ೧೬೮)

ಅವನು ಅದನ್ನು ಆಚರಿಸುವವನು ಎಂಬ ಅರ್ಥದಲ್ಲಿ 'ಇಗ' ಪ್ರತ್ಯಯ ಬರುತ್ತದೆ.

ಉದಾ : ಪಡಿಸಣ + ಇಗ > ಪಡಿಸಣಿಗ, ಪಡಿಸಣಿಗಂ

ಸುಂಕ + ಇಗ > ಸುಂಕಿಗ, ಸುಂಕಿಗಂ

ಸೂತ್ರ ೧೬೬,೧೬೭,೧೬೮ಗಳಲ್ಲಿ 'ಇಗ' ಪ್ರತ್ಯಯದ ಬಗ್ಗೆ ಹೇಳಲಾಗಿದೆ. ಶ.ಮ.ದ ಮತ್ತು ಕಾವ್ಯಾ. ಗಳಲ್ಲಿ ಇವೆಲ್ಲವನ್ನು ಸೇರಿಸಿ ಒಂದೇ ಸೂತ್ರದಲ್ಲಿ ಹೇಳಲಾಗಿದೆ. ಕೇಶಿರಾಜ ಅಸ್ಪತ, ಋಣ ಮೂಲ ಎಂಬವನ್ನೂ ಇಲ್ಲಿ ಸೇರಿಸಿದ್ದಾನೆ. ಪುಸಿಗಂ, ಸಾಲಿಗಂ, ಮೂಲಿಗಂ - ಇತ್ಯಾದಿ ಉದಾಹರಣೆಗಳನ್ನು ಕೊಟ್ಟಿದ್ದಾನೆ.

೨. ಇಚ :

"ಇಚಸ್ತತ್ರ ಜಾತೇಭವೇವಾ" (ಸೂತ್ರ ೧೬೯)

ಇದರಲ್ಲಿ ಹುಟ್ಟಿದವನು, ಇದರಲ್ಲಿ ವರ್ತಿಸುವವನು - ಎಂಬರ್ಥದಲ್ಲಿ 'ಇಚ' ಪ್ರತ್ಯಯ ಬರುತ್ತದೆ. ಉದಾ : ಪೊಱಲ್ + ಇಚ = ಪೊಱಲಿಚ, ಪೊಱಲಿಚಂ

'ಪೊಱಲಿಚಂ' ಎಂದರೆ ಪಟ್ಟಣ ಅಥವಾ ನಗರದಲ್ಲಿ ಹುಟ್ಟಿದವನು ಎಂದರ್ಥ. ಅಂತೆ ಕಾಲುರ್ + ಇಚ = ಕಾಲುರಿಚ, ಕಾಲುರಿಚಂ ಎಂದರೆ ಹಳ್ಳಿಯಲ್ಲಿ ಹುಟ್ಟಿದವನು ಎಂದರ್ಥ. ಕಾಲುರ್ ಎಂಬಲ್ಲಿ ಉಪಧೆಯಾದ ಉಕಾರವು ಹ್ರಸ್ವವಾಗಿರುವುದನ್ನು ಗಮನಿಸಬೇಕು. ಇದು ಲಕ್ಷ್ಯಾನುಗುಣವಾಗಿ ಆಯಿತೆಂದು ನಾಗವರ್ಮನು ಹೇಳಿದ್ದಾನೆ.

ಉದಾ : ಅರಲ್ + ಇಚ = ಅರಲಿಚ, ಅರಲಿಚಂ

ಕರಹಡ್ + ಇಚ = ಕರಹಡಿಚ, ಕರಹಡಿಚಂ

ಕೇಶಿರಾಜನು ಅಲರಿಚಂ ಪೊಱಲಿಚಂ ಎಂಬ ಉದಾಹರಣೆಗಳನ್ನು ಕೊಟ್ಟಿದ್ದಾನೆ. ಕಾಲೂರಿಚಂ, ಕಾಲುರಿಚಂ ಎಂಬ ಪ್ರಯೋಗಗಳನ್ನು ಕೊಟ್ಟು 'ಕೆಲವಱೊಳುಪಧೆಗೆ ಹ್ರಸ್ವಂ' ಎಂದಿದ್ದಾನೆ.

೩. ವಳ, ವಳ್ಳ :

"ವಳವಳ್ಳೌ ತತ್ರಾಧಿಕೃತೇ" (ಸೂತ್ರ ೧೭೦)

ಒಂದರ ಅಧಿಕಾರವನ್ನು ಈತನು ನಡೆಸುವವನು ಎಂಬ ಅರ್ಥದಲ್ಲಿ 'ವಳ, ವಳ್ಳ' ಎಂಬ ಪ್ರತ್ಯಯಗಳು ಬರುತ್ತವೆ.

ಉದಾ : ೧. ಅಡಪವಳಂ, ಅಡಪವಳ್ಳಂ, ೨. ಮಡಿವಳಂ, ಮಡಿವಳ್ಳಂ - ಇತ್ಯಾದಿ.

೪. ಕಾಱ : "ವ್ಯಾಪೃತೇ ಪ್ರವಣೇ ಚ ಕಾಱಃ" (ಸೂತ್ರ ೧೭೧)

'ಇದರೊಳಗೆ ಇವನು ವ್ಯವಹರಿಸುವವನು' (ವ್ಯಾಪೃತಂ), ಇದರೊಳಗೆ ಇವನು ಆಸಕ್ತಿಯುಳ್ಳವನು ಎಂಬ ಅರ್ಥದಲ್ಲಿ 'ಕಾಱ' ಪ್ರತ್ಯಯ ಬರುವುದು.

ಉದಾ : ಪಗೆಕಾಱು- ಪಗೆ + ಕಾಱಂ 'ಪಗೆ (ಶತ್ರು) ಯಿಂದ ಇವನು ವ್ಯವಹರಿಸುವನು' ಎಂದರೆ 'ಯುದ್ಧ ಮಾಡುವವನು' ಎಂದರ್ಥ.

ಅಂತೆ ಬಗೆಕಾರಂ, ನಡೆವಳಿಕಾರಂ, ದಿಂಡುಕಾರಂ, ಬಿಲ್ಕಾರಂ, ಮೊನೆಕಾರಂ

೫. **ವಂತ :**

"ತದಸ್ಯಾಸ್ತೀತಿ ವಂತಃ" (ಸೂತ್ರ ೧೭೨)

'ಅದು ಇವನಲ್ಲಿದೆ' ಎಂಬರ್ಥದಲ್ಲಿ 'ವಂತ' ಪ್ರತ್ಯಯ ಬರುವುದು.

ಉದಾ : ಸಿರಿವಂತಂ > ಸಿರಿ + ವಂತ = ಸಿರಿವಂತ, ಸಿರಿವಂತಂ
ಗುಣವಂತಂ > ಗುಣ + ವಂತ = ಗುಣವಂತ, ಗುಣವಂತಂ

'ವಂತ' ಒಂದನ್ನು ಮಾತ್ರ ಕ.ಭಾ.ಭೂ. ಹೇಳುತ್ತದೆ. ಕಾವ್ಯಾ. ಇದರ ಜೊತೆಗೆ ಒಡೆಯ, ಉಳ್ಳ ಎಂಬುದನ್ನೂ ಸೇರಿಸಿದೆ. ಕೇಶಿರಾಜ ಉಳ್ಳ, ಒಡೆಯ, ವಂತ, ವಣಿಗ ಎಂಬುವನ್ನು ಕೊಟ್ಟಿದ್ದಾನೆ. 'ಲಂಚ' ಎಂಬುದಕ್ಕೆ 'ವಣಿಗಂ' ಸೇರಿಸಿ 'ಲಂಚವಣಿಗಂ' ಎಂದೂ ಹೇಳುತ್ತಿದ್ದರು. ಈಗ ಲಂಚಕೋರ, ಲಂಚಗುಳಿ ಇತ್ಯಾದಿ ಪ್ರಯೋಗಗಳು ಕೇಳಿಬರುತ್ತವೆ. ಸಂಸ್ಕೃತದ ಮಂತ, ವಂತ ಎಂಬ ಎರಡರಲ್ಲಿ 'ಮಂತ' 'ಶ್ರೀಮಂತ' ಇತ್ಯಾದಿ ಸಂಸ್ಕೃತ ಪದಗಳಲ್ಲಿ ಹಾಗೆಯೇ ತತ್ಸಮವಾಗಿ ಬರುತ್ತದೆ. ಕನ್ನಡ ಪದಗಳಿಗೆ 'ವಂತ' ಪ್ರತ್ಯಯ ಸೇರುತ್ತದೆ (ಸಿರಿವಂತ ಇತ್ಯಾದಿ).

'ವಂತ' ಎಂಬ ಪ್ರತ್ಯಯವನ್ನು ತದ್ಧಿತಾಂತ ಭಾವನಾಮವೆಂದು ಕರೆಯಲಾಗಿದೆ. ಸಂಸ್ಕೃತದಲ್ಲಿ ವಂತ, ಮಂತ -ಈ ಎರಡೂ ಪ್ರತ್ಯಯಗಳುಂಟು. ಇವು ಯಾವ ಬದಲಾವಣೆಯಾಗದೆ ಕನ್ನಡ ಪದಗಳಿಗೆ ಹತ್ತುತ್ತವೆ. ಅಪಭ್ರಂಶ- 'ವಂತು' 'ವಂತ' ಆಗಿದೆ.[೬]

೬. **ವೊಲ್:**

"ಉಪಮಾನೇ ವೊಲ್" (ಸೂತ್ರ ೧೭೩)

ಉಪಮಾನಾರ್ಥದಲ್ಲಿ ವೊಲ್ ಎಂಬ ಪ್ರತ್ಯಯ ಬರುತ್ತದೆ.

ಉದಾ : ೧. ಕರಿಯಂತೆ ಭದ್ರಗುಣಂ > ಕರಿವೊಲ್ ಭದ್ರಗುಣಂ
೨. ಗಿರಿಯಂತೆ ಸುಸ್ಥಿರಂ > ಗಿರಿವೊಲ್ ಸುಸ್ಥಿರಂ
೩. ಹರಿಯಂತೆ ಧೀರಂ > ಹರಿವೊಲ್ ಧೀರಂ

ಉಪಮಾನವೆಂದರೆ ಹೋಲಿಕೆಯೆಂದು ಅರ್ಥ. ಗಿರಿಯವೋಲ್ ಎಂದರೆ ಪರ್ವತದಂತೆ ಸುಸ್ಥಿರವಾದುದು. 'ವೋಲ್' ಎಂಬ ಪ್ರತ್ಯಯವು 'ಅಂತೆ' ಹಾಗು, ಹಾಗೆ ಎಂಬ ಹೊಸ ಕನ್ನಡದ ಅರ್ಥವನ್ನು ಸೂಚಿಸುತ್ತದೆ.

ಉಪಮಾನಾರ್ಥದಲ್ಲಿ 'ಅಂತೆ' ಹಾಗೂ 'ವೋಲ್' ಎಂಬಿವು ಬರುವುದಾಗಿ ಕೇಶಿರಾಜನೂ ಹೇಳಿದ್ದಾನೆ. ಕೆಲವೊಮ್ಮೆ 'ಅಂತೆವೋಲ್' ಎಂಬಂತೆ ಎರಡನ್ನೂ ಒಂದಾಗಿ ಬಳಸುವುದುಂಟು. ಇವೆರಡು ಒಂದಾದಾಗ ಪುನರುಕ್ತಿ ದೋಷವಿಲ್ಲ. ಕೆಲವೊಮ್ಮೆ 'ವೋಲ್' ಎಂಬ ಪ್ರತ್ಯಯದ ದೀರ್ಘವು ಹ್ರಸ್ವವನ್ನು ಪಡೆದು 'ವೊಲ್' ಎಂದಾಗುವುದು. ಇವು ವಿಶೇಷದ ಉಪಮಾನ ಪ್ರತ್ಯಯಗಳು. ಮೇಲಿನ 'ಗಿರಿಯವೋಲ್' ಎಂಬ ಉದಾಹರಣೆಯಲ್ಲಿ ಗಿರಿಗೂ ಸುಸ್ಥಿರಕ್ಕೂ ಮಧ್ಯ ಬರುವ 'ವೋಲ್' ಒಂದು ಕೊಂಡಿಯಂತಿದೆ. ಕೊಂಡಿ ಕಳಚಿದರೆ ಅರ್ಥಕ್ಕೆ ಭಂಗ ಬರುವುದು.

ಜಲನಿಧಿಯವೋಲ್ ಗಂಭೀರಂ, ರವಿಸುತನಂತೆ ವೋಲಧಿಕದಾನಿ; ಪರಾಕ್ರಮದಂತೆ ವೋಲ್ ಭೀಮಸೇನಂ - ಇತ್ಯಾದಿ ಕೇಶಿರಾಜನ ಪ್ರಯೋಗಗಳು.

"ಹ್ರಸ್ವೋऽ ವಿವಾ" (ಸೂತ್ರ ೧೭೪)

"ಆ ವೋಲ್ ಪ್ರತ್ಯಯಕ್ಕೆ ವಿಕಲ್ಪದಿಂದ ಹ್ರಸ್ವಮಕ್ಕುಂ" -ಎಂದು ನಾಗವರ್ಮನ ಸೂತ್ರದ ಟೀಕುವಿನಲ್ಲಿದೆ. ಅದಕ್ಕೆ ಉದಾ : "ಹರಿಯವೊಲಿಂದ್ರಜನಾಂತಿರೆ ಭೀತಿಯಿಂ" ಕೆಲವು ಪ್ರಯೋಗಗಳಲ್ಲಿ ಹ್ರಸ್ವ 'ವೊಲ್' ಕೂಡ ಕಂಡುಬರುವುದರಿಂದ ನಾಗವರ್ಮ ಅದಕ್ಕೆ ಅವಕಾಶ ಕಲ್ಪಿಸಿದ್ದಾನೆ.

"ಅಕಾರಾಂತಾನ್ಮಾಗಮೋ ಬಶ್ರುತಿಶ್ಚ" (ಸೂತ್ರ ೧೭೫).

ಅಕರಾಂತ ಶಬ್ದಗಳಿಗೆ 'ವೊಲ್' ಪ್ರತ್ಯಯವು ಪರವಾಗಲು ಆ ಶಬ್ದಗಳ ಮುಂದೆ 'ಮ' ಕಾರಾಗಮವಾಗುವುದು. ವೋಲ್ ಎಂಬುದರ ವಕಾರಕ್ಕೆ ಬಕಾರವೂ ಬರುವುದು.

ಉದಾ : ಇಂದ್ರ + ವೋಲ್ = ಇಂದ್ರಂಬೋಲ್

ಚಂದ್ರ + ವೋಲ್ = ಚಂದ್ರಂಬೋಲ್

ನಿಗಳ್ + ವೋಲ್ = ನಿಗಳಂಬೋಲ್

"ಚಂದ್ರಂಬೋಲ್ ತೊಳಗಿತ್ತು" -ಪ್ರಯೋಗ.

ವೋಲ್, ವೊಲ್, ಂಬೋಲ್ - ಎಂಬಿವು ತದ್ಧಿತ ಪ್ರತ್ಯಯಗಳೆಂದಂತಾಯಿತು. ಈ ವಿಷಯಕ್ಕೆ ನಾಗವರ್ಮನು ಮೂರು ಸೂತ್ರಗಳನ್ನು ಬಳಸಿಕೊಂಡಿದ್ದಾನೆ.

ನಾಗವರ್ಮನು ನಿರೂಪಿಸಿದ ಪೋಲ್, ಪೊಲ್, ಂಬೋಲ್ ಹಾಗೂ ಕೇಶಿರಾಜನು ಹೇಳಿದ ಅಂತೆ, ಅಂತೆವೋಲ್, ಅಂತವೊಲ್ - ಎಂಬಿವು ಅವ್ಯಯಗಳಾದುದರಿಂದ ಇವುಗಳನ್ನು ತದ್ಧಿತಾಂತ ಅವ್ಯಯಗಳೆಂದು ಕರೆಯುತ್ತಾರೆ. ಇದನ್ನು ಕುರಿತು ಕಿಟ್ಟೆಲ್

"An affix which forms nouns from other nouns" ಎಂದಿದ್ದಾನೆ (ನಿಘಂಟು, ಪು ೬೮೬). ಎಂದರೆ ಒಂದು ನಾಮದಿಂದ ಇನ್ನೊಂದು ನಾಮವನ್ನು ರಚಿಸುವಲ್ಲಿ ಹತ್ತುವ ಪ್ರತ್ಯಯ ವಿಶೇಷ. ಇದಕ್ಕೆ 'ಪ್ರತ್ಯಯೀಕರಣ'ವೆನ್ನುತ್ತಾರೆ. ಇದು ಕೇವಲ ನಾಮಪದಗಳಿಗಲ್ಲದೆ ಉಳಿದ ಪದಗಳಿಗೂ ಹತ್ತಿರುವುದನ್ನು ನೋಡಬಹುದು.

**೭. ಅನೆಯ :**

"ಸಂಖ್ಯಾಯಾಃ ಪೂರಣೇऽನೆಯಃ" (ಸೂತ್ರ ೧೭೬)

ಸಂಖ್ಯೆಯ ಪೂರಣಾರ್ಥದಲ್ಲಿ ಅನೆಯ ಪ್ರತ್ಯಯ ಬರುವುದು.

ಉದಾ : ಅಯ್ದು + ಅನೆಯ - ಅಯ್ದನೆಯ

ಪದಿನಾಜ್ + ಅನೆಯ - ಪದಿನಾಜನೆಯ

ಕೇಶಿರಾಜ ಅನಿತು, ಇನಿತು, ಎನಿತು ಎಂಬ ಪ್ರಮಾಣ ಪೂರಣಾರ್ಥದಲ್ಲಿಯೂ ಎಣಿಸುವ ಸಂದರ್ಭದಲ್ಲಿಯೂ 'ಅನೆಯ' ಬರುತ್ತದೆ ಎಂದಿದ್ದಾನೆ. ಅಲ್ಲದೆ 'ಅನೆಯ' ಕ್ಕೆ ಕೆಲವೊಮ್ಮೆ 'ಮ' ಪ್ರತ್ಯಯವು ಬರುವುದಾಗಿ ವಿವರಿಸಿದ್ದಾನೆ.

ಉದಾ : ಅನಿತು + ಅನೆಯ = ಅನಿತನಯ, ಅನಿತನಯಂ

ಇನಿತು + ಅನೆಯ = ಇನಿತನಯ, ಇನಿತನಯಂ

ಎನಿತು + ಅನೆಯ = ಎನಿತನಯ, ಎನಿತನಯಂ

**ಸಂಖ್ಯೆಗೆ** : ಒಂದು + ಅನೆಯ = ಒಂದನೆಯ. ಹಾಗೆಯೇ ಎರಡನೆಯ, ಮೂರನೆಯ, ಪದಿನಾರನೆಯ, ನೂರನೆಯ, ಅಯ್ನೂರನೆಯ -ಇತ್ಯಾದಿ ಎಣಿಸುವಲ್ಲಿ 'ಮ' ಬರುತ್ತದೆ ಎಂದಿರುವುದರಿಂದ ಒಂದು : ಒರ್ + ಮೆ = ಒರ್ಮೆ ಹಾಗೆಯೇ ಎರಡು : ಇರ್ + ಮೆ = ಇರ್ಮೆ, ಅಂತೆ ಮೂರ್ಮೆ ನೂರ್ಮೆ ಸಾಸಿರ್ಮೆ -ಇತ್ಯಾದಿ. ಇವು ಇಂದು ಒರ್ಮೆ - ಒಮ್ಮೆ ಅಲ್ಲದೆ 'ಮೆ' ಎಂಬುದು 'ಸಲ' ಅಥವಾ 'ಬಾರಿ' ಎಂದಾಗಿದೆ. ಒರ್ಮೆ > ಒಮ್ಮೆ, ಒಂದು ಸಲ, ಒಂದು ಬಾರಿ; ಹಾಗೆಯೇ ಎರಡು ಸಲ, ಮೂರು ಸಲ, ಹಲವು ಸಲ, ಸಾವಿರ ಸಲ -ಮುಂತಾಗಿ ಬಳಕೆಯಲ್ಲಿದೆ. 'ಸಲ' ವೆಂಬುದು 'ಸಾರಿ' ಎಂದಾಗಿದೆ. ಉದಾ : ಒಂದು ಸಾರಿ ಎರಡು ಸಾರಿ ಇತ್ಯಾದಿ. 'ಮೆ' ಬರುವುದನ್ನು ನಾಗವರ್ಮ ಮುಂದಿನ ಸೂತ್ರದಲ್ಲಿ ಹೇಳಿದ್ದಾನೆ.

"ವಾರಾರ್ಥೇ ಮೆ ವಾ" (ಸೂತ್ರ ೧೭೭)

ಸಂಖ್ಯಾವಾಚಿಗಳಿಗೆ 'ಸೂಟ್' ಎಂಬರ್ಥವಲ್ಲಿ ವಿಕಲ್ಪವಾಗಿ 'ಮೆ' ಎಂಬ ಪ್ರತ್ಯಯ ಬರುತ್ತವೆ. ಒಂದು ಒರ್ + ಮೆ = ಒರ್ಮೆ, ಅಂತೆ ಇರ್ಮೆ, ಮೂರ್ಮೆ, ನಾಲ್ಕೆ ನೂರ್ಕೆ ಸಾಸಿರ್ಕೆ

ಸೂಟ್ (ಸರದಿ, ಸಲ, ಸಾರಿ, ಬಾರಿ) ಒಂದು ಸೂಟ್, ಎರಡು ಸೂಟ್, ಮೂರು ಸೂಟ್ ಇತ್ಯಾದಿ.

೮. ಕೆ,ಪು - ಪ್ರತ್ಯಯಗಳು:

"ಭಾವೇ ಕೆಪೂ" (ಸೂತ್ರ ೧೭೮)

ಭಾವಾರ್ಥವನ್ನು ಸೂಚಿಸುವ ಪದಗಳಲ್ಲಿ ಕೆ ಮತ್ತು ಪು ಎಂಬ ಪ್ರತ್ಯಯಗಳು ಬರುತ್ತವೆ.

ಉದಾ : ಕಾಣ್ಕೆ, ಪೂಣ್ಕೆ - ಇತ್ಯಾದಿ

**ಪುಗೆ ಉದಾಹರಣೆ :**

ತಿಣ್ಪು (ಭಾರವಾದುದು, ಅತಿಶಯವಾದುದು ಎಂಬ ಅರ್ಥದಲ್ಲಿ) ಹಾಗೆಯೇ ಗುಣ್ಪು, ಸೊಂಪು ಇತ್ಯಾದಿ.

ಕೇಶಿರಾಜನು ಕೊಟ್ಟ ಉದಾಹರಣೆಗಳು : ಪಡೆವು, ಬಲ್ಪು, ತಣ್ಪು, ಕರ್ಪು, ಕೆಂಪು, ಪೆಂಪು. ಕೇಶಿರಾಜ ಮತ್ತು ನಾಗವರ್ಮ ಕೊಟ್ಟ ಉದಾಹರಣೆಗಳಿಂದ ಇವು ಅಚೇತನ ಭಾವನಾಮ ರೂಪಗಳೆನ್ನಬಹುದು.

೯. ಇಕೆ, ಉ, ಮೆ, ತನ:

"ಚೇತ ನೇಷ್ವಿಕ್ ಉಮೆತನಾನಿ" (ಸೂತ್ರ ೧೭೯)

ಹಿಂದಿನ ಸೂತ್ರದಲ್ಲಿ ಅಚೇತ ಭಾವನಾಮಗಳನ್ನು ಕೊಟ್ಟ ನಾಗವರ್ಮ ಇಲ್ಲಿ ಚೇತನ ಭಾವನಾಮಗಳನ್ನು ಕೊಡುತ್ತಿದ್ದಾನೆ. ಚೇತನ ಭಾವನಾಮಗಳಿಗೆ ಇಕೆ ಉ ಮೆ ತನ ಪ್ರತ್ಯಯಗಳು ಬರುತ್ತವೆ ಎಂದು ಹೇಳಲಾಗಿದೆ.

ಉದಾ : ಮಾನಸಿಕೆ, ಆಯತಿಕೆ, ಉರ್ಕು, ಕೂರ್ಮೆ, ಕಲಿತನಂ - ಇತ್ಯಾದಿ.

ಮರುಳುತನಂ, ಎಗ್ಗತನಂ, ಪೆಣ್ತನಂ - ಎಂಬಿವು ಕೇಶಿರಾಜನ ಪ್ರಯೋಗಗಳು.

ಈ 'ತನ' ಎಂಬುದರ ಮೂಲದ ಬಗೆಗೆ ಭಿನ್ನಾಭಿಪ್ರಾಯಗಳಿವೆ.

ಸಂಸ್ಕೃತದ ತ್ವನ (=ತ್ವ) > ತಣ (ಪ್ರಾಕೃತ) > ತನ (ಕನ್ನಡ) ಆಗಿದೆ ಎಂಬುದು ಒಂದು ಅಭಿಪ್ರಾಯ. ತೆಲುಗು ಭಾಷೆಯಲ್ಲೂ 'ತನ' ಪ್ರತ್ಯಯ ಉಂಟು.

ಉದಾ : ಪೆದ್ದತನಂ (ದೊಡ್ಡತನ)

ಕನ್ಯತನಂ (ಕನ್ಯತ್ವ)

ದೊಂಗತನಂ (ಕಳ್ಳತನ) - ಇತ್ಯಾದಿ

ಕನ್ನಡ ಮತ್ತು ತೆಲುಗು ಉದಾಹರಣೆಗಳಲ್ಲಿ 'ತನ' ಪ್ರತ್ಯಯವು ಬಹುತೇಕ ಒಂದೇ ರೀತಿಯಾಗಿ ಹತ್ತುವುದು.

"ಸಂಸ್ಕೃತ ಇಲ್ಲವೆ ಪ್ರಾಕೃತ ಮೂಲದಿಂದ ಬಂದುವು ಎನ್ನಲಾದ ಪ್ರತ್ಯಯಗಳಲ್ಲಿ ಒಂದೆರಡು ಕನ್ನಡವವೇ ಎಂದು ತೋರುತ್ತದೆ. ತನ ಪ್ರತ್ಯಯವು ಆತ್ಮಾರ್ಥಕ ಸರ್ವನಾಮ ತಾನ್ (ತನ್) ಎಂಬುದರ ರೂಪಾಂತರವೆಂದು ತೋರುತ್ತದೆ."[೭] ಎಂದು ಶ್ರೀ ಎಂ.ವಿ. ಸೀತಾರಾಮಯ್ಯನವರು ಹೇಳಿರುವುದು ಗಮನಾರ್ಹ. ಇದೇ ಸಂದರ್ಭದಲ್ಲಿ ಅವರು ಮುಂದುವರಿದು "ನಾಗವರ್ಮನ ಮೇಲಿನ ಪ್ರತ್ಯಯಗಳಲ್ಲಿ ಕೆಲವು ಕನ್ನಡದ್ದಾಗಿವೆ ಮತ್ತೆ ಕೆಲವು ಪ್ರಾಕೃತ ಮತ್ತು ಅಪಭ್ರಂಶದಿಂದ ತದ್ಭವ ರೂಪಗಳಾಗಿ ನೇರವಾಗಿ ಕನ್ನಡದಲ್ಲಿ ಬಂದಿರುವಂತೆ ತಿಳಿಯುತ್ತದೆ. ಈ ದೃಷ್ಟಿಯಿಂದ ಎಲ್ಲ ತದ್ಧಿತ ಪ್ರತ್ಯಯಗಳ ಮೂಲ ಮತ್ತು ಸ್ವರೂಪಗಳನ್ನು ಕುರಿತು ಸಮಗ್ರ ಪರಿಶೀಲನೆ ನಡೆಯಬೇಕಾಗಿದೆ."[೮] ಎಂದಿದ್ದಾರೆ.

೧೦. ಅತ್ ಪ್ರತ್ಯಯ:

"ಕ್ರಿಯಾರ್ಥಾದತ್" (ಸೂತ್ರ ೧೮೦)

ಕ್ರಿಯಾಪದಗಳಿಗೆ ಭಾವಾರ್ಥದಲ್ಲಿ 'ಅತ್' ಎಂಬ ಪ್ರತ್ಯಯ ಬರುತ್ತದೆ.

ಉದಾ : ನೋಡು > ನೋಟಂ; ಓಡು > ಓಟಂ, ಊಡು > ಊಟಂ ಇತ್ಯಾದಿ. ಈ ಹಿಂದೆ "ಯುಷ್ಮದಾದಿ ವಿಧಾನಂ" ಸೂತ್ರ ೧೨೦ರಲ್ಲಿ 'ಅತಿಟಃ' ಎಂದಿದ್ದಾನೆ. ನಾಗವರ್ಮ 'ಡ' ಕಾರಕ್ಕೆ 'ಅ' ಪ್ರತ್ಯಯವು ಪರವಾಗಲು ಟ ಕಾರ ಬರುತ್ತದೆ ಎಂದಿರುವುದರಿಂದ ಕ್ರಿಯಾ ಧಾತುವಿನ ಡಕಾರಕ್ಕೆ ಟಕಾರವು ಆದೇಶವಾಗಿ ಬರುವುದು. 'ಟ' ಕಾರ ಆದೇಶವಾಗಿ ಬರುವ ಇಂಥ ಪದಗಳ ಜೊತೆಗೆ ನಾಗವರ್ಮನು ಸೋಲಂ, ಸಾಲಂ ಎಂಬ ಎರಡು ಉದಾಹರಣೆಗಳನ್ನು ಕೂಡ ಕೊಟ್ಟಿರುತ್ತಾನೆ.

ಈ ಸಂದರ್ಭದಲ್ಲಿ ಕೇಶಿರಾಜನು "ಧಾತುವಿನ ಕಡೆಯೊಳ್ ಅತ್ವಮಕ್ಕುಂ ಸಹಜ ಧಾತು ಭಾವನಾಮುಮಕ್ಕುಂ" ಎಂದಿದ್ದಾನೆ.

ಕೇಶಿರಾಜನ ಸೂತ್ರ ೨೨೪ ಧಾತುಗಳು ಭಾವನಾಮಗಳಾಗುವ ಬಗೆಯನ್ನು ಕುರಿತು ಹೇಳುತ್ತದೆ.

೧. ಧಾತುವಿನ ಮೊದಲ 'ಇ' ಕಾರಕ್ಕೆ ಭಾವದಲ್ಲಿ 'ಏ'ಕಾರ ಬರುವುದು

ಉದಾ : ಕಿಡು > ಕೇಡು; ಇಸು > ಏಸು

೨. ಧಾತುವಿನ ಮೊದಲಿಗೆ ದೀರ್ಘವು ಬರುವುದು :

ಉದಾ : ಬಿಡು > ಬೀಡು; ಇಡು > ಈಡು - ಎಂಬಂತೆ

೩. ಧಾತುವಿನ ಮೊದಲ ಉಕಾರಕ್ಕೆ ಓತ್ವವು ಪ್ರಾಪ್ತಿಸುವುದು :

ಉದಾ : ಕುಡು > ಕೋಡು, ತುಡು > ತೋಡು

೪. ಧಾತುವಿನ ಕಡೆಯಲ್ಲಿ ಅತ್ವ ಬರುವುದು :

ಉದಾ : ಆಡು > ಆಟಂ; ಪಾಡು > ಪಾಟಂ, ಓಡು > ಓಟಂ ಇತ್ಯಾದಿ

ಇನ್ನು ಸೋಲಂ ಮತ್ತು ಸಾಲಂ - ಇವುಗಳ ಬಗ್ಗೆ

ನೋಡು > ಸೋೞ್ (ರಳ) > ಸೋಳ್ (ಕುಳ) ಸೋಲಂ ಎಂದಾಗಿದೆ.

ಅತಿಪೀಡನದಿಂದ 'ಡ' ಕಾರವನ್ನು ಉಚ್ಚರಿಸಿದರೆ ರಳ (ೞ) ಕಾರ ಬರುವುದು. ಸೋಡು > ಸೋೞ್ ಎಂಬಂತೆ. ಈ ರಳ (ೞ) ಕಾರವನ್ನು ಕುಳಾಂತ ಭ್ರಮೆಯಿಂದ ಉಚ್ಚರಿಸಿದಾಗ ಸೋೞ್ > ಸೋಳ್ ಆಗಿ, ಮುಂದೆ ಅದು ಲಾಂತಗೊಂಡು ಸೋಲಂ ಆಗಿರಬೇಕು. ಅಂತೆ ಸಾಲಂ ಬಗ್ಗೆಯೂ ಕೂಡ. ಇದೆಲ್ಲವೂ 'ಡ' ಕಾರದ ವಿನ್ಯಾಸ ಕ್ರಮವೇ.

೧೧. ನಿತು, ನಿತ್ತು:

"ಅದು ಇದು ಏನ್ಸ್ಟು : ಪ್ರಮಾಣೇ ನಿತುಃ" (ಸೂ. ೧೮೧)

ಅದು, ಇದು, ಏನ್ - ಎಂಬಿವು ಪ್ರಮಾಣಾರ್ಥದಲ್ಲಿ 'ನಿತು' ಎಂಬ ಪ್ರತ್ಯಯಗಳನ್ನು ಪಡೆಯುತ್ತವೆ.

ಉದಾ : ಅದು + ನಿತು > ಅನಿತು (ಅದುವಿನ 'ದು' ಕಾರ ಲೋಪ)

ಇದು + ನಿತು > ಇನಿತು (ಇದುವಿನ 'ದು' ಕಾರ ಲೋಪ)

ಏನ್ + ನಿತು > ಎನಿತು (ವ್ಯಂಜನಾಂತ 'ನ್' ಕಾರಕ್ಕೆ ಲೋಪ ಮತ್ತು ಏಕಾರಕ್ಕೆ ಹ್ರಸ್ವ)

ಕೆಲವೊಮ್ಮೆ ತ ಕಾರಕ್ಕೆ ದ್ವಿತ್ವ ಬರುವುದುಂಟು. ಅನಿತು > ಅನಿತ್ತು, ಇನಿತು > ಇನಿತ್ತು, ಎನಿತು > ಎನಿತ್ತು - ಎಂಬಂತೆ.

ಪ್ರಯೋಗ :

"ಅನಿತ್ತೆನಿತ್ತಂಬುಜ ಪತ್ರ ನೇತ್ರೆಯಾ"

೧೨. ತು,ಂದು:

"ಪ್ರಕಾರಕಾಲಾರ್ಥೆಂತೂಂದೂ" (ಸೂ. ೧೮೨)

ಅದು, ಇದು, ಏನ್ ಎಂಬಿವುಗಳಿಗೆ ಪ್ರಕಾರಾರ್ಥದಲ್ಲಿ ಹಾಗೂ ಕಾಲಾರ್ಥದಲ್ಲಿ ಅನುಕ್ರಮವಾಗಿ ಂತು, ಂದು ಎಂಬ ಪ್ರತ್ಯಯಗಳು ಬರುತ್ತವೆ.

ಉದಾ : ೧. ಅದು + ಂತು > ಅಂತು (ದುಕಾರಲೋಪ)

ಇದು + ಂತು > ಇಂತು (ದುಕಾರಲೋಪ)

ಏನ್ + ಂತು > ಎಂತು (ನ್ ಗೆ ಲೋಪ ಮತ್ತು ಏಕಾರಕ್ಕೆ ಹ್ರಸ್ವ)

೨. ಅದು + ರಂದು > ಅಂದು

ಇದು + ರಂದು > ಇಂದು

ಏನ್ + ರಂದು > ಎಂದು

ಅನಿತು (ಅಷ್ಟು), ಇನಿತು (ಇಷ್ಟು), ಎನಿತು (ಎಷ್ಟು) ಎಂಬಿವುಗಳು ಪ್ರಮಾಣಾರ್ಥ ಪದಗಳು. ಅಂತು (ಹಾಗೆ), ಇಂತು (ಹೀಗೆ), ಎಂತು (ಹೇಗೆ) - ಇವು ಪ್ರಕಾರಾರ್ಥ ಅಥವಾ ರೀತಿ ವಾಚಕಗಳು. ಅಂದು, ಇಂದು, ಎಂದು - ಎಂಬಿವುಗಳು ಕಾಲಾರ್ಥ ಅಥವಾ ಕಾಲವಾಚಕ ಶಬ್ದಗಳು. ಇವು ವಾಸ್ತವವಾಗಿ ಅವ್ಯಯಗಳು. ಕೇಶಿರಾಜ ಇವುಗಳನ್ನು ಕುರಿತು ಹೇಳಿಲ್ಲ. ಅವು ಅವ್ಯಯ ಪ್ರಕರಣದಲ್ಲಿ ಸೇರಿವೆ. ಅವುಗಳನ್ನು ಭಾವವಾಚಕ ಅವ್ಯಯಗಳೆಂದು ಕರೆಯಲಾಗಿದೆ. ಕೇಶಿರಾಜನು ಅಂತು, ಇಂತು, ಎಂತು - ಎಂಬಿವುಗಳನ್ನು ಪಾದ ಪೂರಣಾರ್ಥ ಶಬ್ದಗಳಾಗಿ ಸ್ವೀಕರಿಸಿದ್ದಾನೆ. ಇವುಗಳನ್ನು ಕಾಲಾರ್ಥಕ ಅವ್ಯಯಗಳೆಂದರೆ ಚೆನ್ನ.

೧೩. ಆಳಿ:

"ಆಳಿಸ್ತಾಚ್ಛೀಲ್ಯೇ" (ಸೂತ್ರ ೧೮೩)

ಆಳಿ ಎಂಬ ಪ್ರತ್ಯಯವು ಶೀಲವನ್ನು ವ್ಯಕ್ತಪಡಿಸುವಲ್ಲಿ ಬರುವುದು.

ಉದಾ : ಓದು + ಆಳಿ = ಓದಾಳಿ

ಜೂದು + ಆಳಿ = ಜೂದಾಳಿ

ಏಱು + ಆಳಿ = ಏಱಾಳಿ

ಮಾತು + ಆಳಿ = ಮಾತಾಳಿ

ಸಿಗ್ಗು (ನಾಚಿಕೆ) + ಆಳಿ = ಸಿಗ್ಗಾಳಿ

ಪಡಪು + ಆಳಿ = ಪಡಪಾಳಿ

೧೪. ಕುಳಿ:

"ಕುಳಿಶ್ಚ" (ಸೂತ್ರ ೧೮೪)

ಕುಳಿಯೆಂಬುದು ಕೂಡ ಶೀಲಾರ್ಥದಲ್ಲಿ ಬರುತ್ತದೆ.

ಉದಾ : ಆಟಕುಳಿ, ಅಂಜುಕುಳಿ, ಓಡುಕುಳಿ - ಇತ್ಯಾದಿ.

ಆಟಕುಳಿ ಎಂದರೆ ಆಟದ ಸ್ವಭಾವದವನು, ಅಂಜುಕುಳಿಯೆಂದರೆ ಭಯಪಡುವ ಸ್ವಭಾವದವನು, ಓಡುಕುಳಿಯೆಂದರೆ ಓಡಿ ಹೋಗುವ ಸ್ವಭಾವದವನು ಎಂದರ್ಥ.

ಆಳಿ-ಕುಳಿ -ಎಂಬೀ ಪ್ರತ್ಯಯಗಳು ಮೇಲೆ ತಿಳಿಸಿದಂತೆ "ಇದರಲ್ಲಿ ಇವನಿಗೆ ಶೀಲ" ಎಂಬ ಅರ್ಥದಲ್ಲಿ ಬರುತ್ತದೆ ಎಂದು ನಾಗವರ್ಮನು ಸಂಕ್ಷಿಪ್ತವಾಗಿ ತಿಳಿಸಿದ್ದಾನೆ. ಕೇಶಿರಾಜ ಇದಕ್ಕೆ ಸಂಬಂಧಿಸಿದ ಇನ್ನೂ ಕೆಲವು ಉದಾಹರಣೆಗಳನ್ನು ಕೊಟ್ಟಿದ್ದಾನೆ. ಅಲ್ಲದೆ ಉಕ, ಕುಳಿ, ಆಳಿ, ಇಕ - ಎಂಬ ಪ್ರತ್ಯಯಗಳು "ಶೀಲಾದಿ ನಾನಾರ್ಥಗಳಲ್ಲಿ ಹತ್ತುತ್ತವೆ" ಎಂದು ಕೂಡ ಕೇಶಿರಾಜ ವಿವರಿಸಿದ್ದಾನೆ. ಪೋರ್ಕುಳಿ ಎಂದರೆ ಹೋರಾಟಗಾರ, ಓಡುಕುಳಿಯೆಂದರೆ ಓಡಿ ಹೋಗುವ ಸ್ವಭಾವದವನು, ಹಡಕುಳಿಯೆಂದರೆ ಹಡಕುನಾತದವನು ಅಂತೆ ಮರಕುಳಿ, ಅೞುಕುಳಿ, ಪೆಂಕುಳಿ - ಇತ್ಯಾದಿ. ಜೂದಾಳಿ (ಜೂಜುಕೋರ), ಮಾಱಾಳಿ (ವ್ಯಾಪಾರದಲ್ಲಿ ನಿರತನಾದವನು), ಏಱಾಳಿ (ಆಕ್ರಮ ಶೀಲದವನು) ಪರಾಕ್ರಮಿ. ಅಂತೆ ಮಾತಾಳಿ, ವಾಚಾಳಿ, ಕೇದಾಳಿ, ಸಿಗ್ಗಾಳಿ -ಇತ್ಯಾದಿ.

೧೫. ಗಾಱ:

"ತತ್ಕರೋವೇತ್ಯಸ್ಮಾದ್ಗಾಱಃ" (ಸೂತ್ರ ೧೮೫)

'ಅದನ್ನು ಅವನು ಮಾಡುವನು' ಎಂಬ ಅರ್ಥದಲ್ಲಿ ಗಾಱ ಪ್ರತ್ಯಯ ಬರುವುದು.

ಉದಾ : ಮಣಿಗಾಱಂ, ಕಂಚುಗಾಱಂ, ಬಳೆಗಾಱಂ - ಎಂಬಂತೆ.

ಮುಂದಿನ ಸೂತ್ರವೂ ಇದಕ್ಕೆ ಸಂಬಂಧಿಸಿದುದೇ ಆಗಿದೆ. ಗಾಱ ಪ್ರತ್ಯಯವು ಹತ್ತಿದಾಗ ವಿಕಲ್ಪದಿಂದ ಮಕಾರಾಗಮವಾಗುವುದನ್ನು ಕುರಿತು ಹೇಳಲಾಗಿದೆ. ಆ ಸೂತ್ರ ಇಂತಿದೆ : "ಉದಂತಾನ್ಮಾಗಮೋ ಬಹುಳಂ" (ಸೂ. ೧೮೬).

ಪಾಂಡುಂಗಾಱಿಂ, ಜೂದುಂಗಾಱಿಂ ಮುಂತಾದುವುಗಳಲ್ಲಿ ಮಕಾರ ಆಗಮವಾಗಿದೆ. ಇದನ್ನೇ ಕೇಶಿರಾಜನು "ಗಾಱಿ ಪ್ರತ್ಯಯಂ ಪರದೊಳಿರೆ ಪೂರ್ವದುದಂತಕ್ಕೆ ಬಿಂದುವುಂ ಅಕಾರಮುಮಕ್ಕುಂ" ಎಂದಿದ್ದಾನೆ (ಸೂತ್ರ ೨೧೧ರ ವೃತ್ತಿ).

ಉದಾ : ಪಾಂಡುಂಗಾಱಿಂ, ಅಲಸುಂಗಾಱಿಂ, ಓದುಂಗಾಱಿಂ, ಜೂದುಂಗಾಱಿಂ ಇತ್ಯಾದಿ. ಬಹುಳ ಗ್ರಹಣದಿಂದ ಕೆಲವೆಡೆ ಮಕಾರಾಗಮವಾಗದು. ಉದಾ : ಸೊಂಪುಗಾಱಿಂ, ಕೆಂಪುಗಾಱಿಂ.

೧೬. ಅಪಭ್ರಂಶ:

"ಅಪಭ್ರಂಶೇऽ ಪ್ಯೇವಂ ಕಾರಸ್ಯ" (ಸೂತ್ರ ೧೮೭)

ಅಪಭ್ರಂಶಗಳಲ್ಲಿ 'ಕಾಱಿ' ಪ್ರತ್ಯಯಕ್ಕೆ 'ಗಾಱಿ' ಎಂಬುದು ಆದೇಶವಾಗುವುದು. ಹಿಂದಿನ ಲಕ್ಷಣದಂತೆ ಮಕಾರವೂ ಬಹುಳವಾಗಿ ಪ್ರಾಪ್ತಿಸುವುದು.

ಉದಾ : ಮಾಲೆಗಾಱಿಂ, ಸಮ್ಮಗ್ಗಾಱಿಂ ಇತ್ಯಾದಿ. ಬಹುಳ ಗ್ರಹಣದಿಂದ ಕರ್ಮಾದಿಗಳಲ್ಲಿ ಆದಿ ಲೋಪವಾಗುವುದು. ಉದಾ : ಕಮ್ಮಾಱಿಂ, ಕಮ್ಮಱಿಂ, ಕುಂಬಾಱಿಂ, ಕುಂಬಱಿಂ, ಕಮ್ಮ, ಕುಂಬ ಶಬ್ದಗಳಿಗೆ ಗಾಱಿ ದ 'ಗ' ಕಾರಕ್ಕೆ ಲೋಪವೆಂದು ಕೇಶಿರಾಜನೂ ಹೇಳಿರುವನು (ಸೂತ್ರ ೨೧೦). "ಇದರೊಳ್ ಈತಂ ವ್ಯವಹರಿಸುವವನು" ಎಂಬಲ್ಲಿ ಕಾಱಿ ಪ್ರತ್ಯಯವು, "ಈತನಿದಂ ಮಾಡುವನೆಂಬ"ಲ್ಲಿ ಗಾಱಿ ಪ್ರತ್ಯಯ ಬರುವುದಾಗಿ ಕೇಶಿರಾಜನೇ ಸ್ಪಷ್ಟಪಡಿಸಿದ್ದಾನೆ. ಗಾಱಿ - ಕಾಱಿಗಳ ಸ್ಪಷ್ಟ ಮಾಹಿತಿ ಅಲ್ಲಿ ದೊರೆಯುತ್ತದೆ.

ನಾಗವರ್ಮನು "ಅಪಭ್ರಂತ ವಿಷಯದಲ್ಲಿ 'ಕಾಱಿ' ಶಬ್ದಕ್ಕೆ 'ಗಾಱಿ' ಆದೇಶವಾಗುತ್ತದೆ ಹಾಗೂ ಲಕ್ಷಾನುಸಾರವಾಗಿ ಮಕಾರ ಆಗಮವಾಗುತ್ತದೆ. ಬಹುಳ ಗ್ರಹಣದಿಂದ ಕರ್ಮಾದಿಗಳಲ್ಲಿ ಗಾಱಿ ಪರವಾದಾಗ ಆದಿಯ 'ಗ' ಕಾರಕ್ಕೆ ಲೋಪ ಉಂಟಾಗುವುದು" ಎಂದಿದ್ದಾನೆ. ಸಂಸ್ಕೃತದ ಕರ್ಮಕಾರ (ಕಮ್ಮಱ), ಕುಂಭಕಾರಗಳು (ಕುಂಭಾರ) ಕಮ್ಮಗ್ಗಾಱಿ > ಕಮ್ಮಾಱಿ > ಕಮ್ಮಱ; ಕುಂಭಕಾಱಿಂ > ಕುಂಬಾಱಿ > ಕುಂಭಱಿ -ಹೀಗೆ ಪರಿಣಮಿಸುವುವು ಎಂದು ನಿಷ್ಪತ್ತಿ ಹೇಳುವುದು ಸರಿಯೆಂದು ತೋರುತ್ತದೆ.

ನಾಗವರ್ಮನು ಹಂಪನ (ಪಂಪ) ಪ್ರಯೋಗವೆಂದು ಪಂಪಭಾರತದ ಒಂದು ಕಂದಪದ್ಯವನ್ನು ಕಮ್ಮಾಱಿಕ್ಕೆ ಉದಾಹರಣೆಯಾಗಿ ಕೊಟ್ಟಿದ್ದಾನೆ. "ಕಮ್ಮಱಿಂಬೊಲಿರ್ದಂ ಭೀಮಂ" ಅಂತೆ ಬಳೆ + ಗಾಱಿಂ > ಬಳೆಗಾಱಿಂ.

"ಕ್ರಿ.ಶ. ಸುಮಾರು ೧೨೭೨ಕ್ಕೆ ಎಷ್ಟೋ ಹಿಂದೆಯೇ ಕರ್ನಾಟಕದಲ್ಲಿ ಗಾಜಿನ ಬಗೆಗಳನ್ನು ತಯಾರಿಸುತ್ತಿದ್ದರೆಂಬುದನ್ನು ಗಮನಿಸಬೇಕು".[೧೧]

ಈ ಗಾಜ ಪ್ರತ್ಯಯಕ್ಕೆ ನಾಗವರ್ಮ ಮೂರು ಸೂತ್ರಗಳನ್ನು ಬಳಸಿಕೊಂಡಿದ್ದಾನೆ. ಮುಂದಿನ ಸೂತ್ರಗಳಲ್ಲಿ ಸ್ತ್ರೀಲಿಂಗ ಸೂಚಿ ತದ್ಧಿತ ಪ್ರತ್ಯಯಗಳನ್ನು ಕುರಿತು ಹೇಳಲಾಗಿದೆ.

೧೭. ಇತಿ ಪ್ರತ್ಯಯ:

"ಸ್ತ್ರೀಯಾಮಿತಿಟ" (ಸೂತ್ರ ೧೮೮)

ಸ್ತ್ರೀ ವಿಷಯಾರ್ಥದೊಳಗೆ ಪದದ ಕೊನೆಯಲ್ಲಿ ಇತಿ ಪ್ರತ್ಯಯ ಬರುವುದು.

ಉದಾ : ಬಾಣಸಿಗ + ಇತಿ = ಬಾಣಸಿಗಿತಿ

ಮಡಿವಳ + ಇತಿ = ಮಡಿವಳಿತಿ

ಘಟ್ಟಿವಳ + ಇತಿ = ಘಟ್ಟಿವಳಿತಿ

ಮೇಲಿನ ಉದಾಹರಣೆಗಳಲ್ಲಿಯ ಬಾಣಸಿಗ, ಮಡಿವಳ, ಘಟ್ಟಿವಳ -ಇವು ಅಕಾರಾಂತ ಶಬ್ದಗಳು. 'ಇತಿ' ಪ್ರತ್ಯಯ ಪಡೆದಾಗ 'ಅ' ಕಾರಕ್ಕೆ ಲೋಪ ಬಂದಿದೆ. ಇಲ್ಲೊಂದು ವಿಷಯ ಗಮನಾರ್ಹ. ಬಾಣಸಿಗ ಎಂಬ ಶಬ್ದದಲ್ಲಿಯೇ 'ಇಗ' ಪ್ರತ್ಯಯದ ಮೇಲೆ ಮತ್ತೊಂದು ಪ್ರತ್ಯಯ 'ಇತಿ' ಬಂದಿರುವುದು. ಎರಡು ಪ್ರತ್ಯಯಗಳು ಒಂದು ಶಬ್ದದ ಮೇಲೆ ಹತ್ತಿರುವುದು ಗಮನಾರ್ಹ.

ಕೇಶಿರಾಜನು ಚಾಮರಗಿತಿ, ಕನ್ನಡಗಿತಿ, ನೇಪಾಳಗಿತಿ, ತೆಲುಂಗಿತಿ, ಚಿಪ್ಪಿಗಿತಿ, ಒಕ್ಕಲಗಿತಿ -ಎಂಬ ಉದಾಹರಣೆಗಳನ್ನು ಕೊಟ್ಟಿರುವನು.

ಮುಂದಿನ ಸೂತ್ರದಲ್ಲಿ ನಾಗವರ್ಮ ಆದೇಶವಾದ ಶಬ್ದಗಳಿಗೆ ಪರವಾದ ಇತಿ ಪ್ರತ್ಯಯದ ಇಕಾರಕ್ಕೆ ಲೋಪವಾಗುತ್ತದೆ ಎಂದಿದ್ದಾನೆ. 'ಇ ಲೋಪಃ ಪರಿಣಾಮಿನಃ' (ಸೂ. ೧೮೯) ಇದಕ್ಕೆ ಉದಾಹರಣೆಯಾಗಿ ಮಾಲೆಗಾರ್ತಿ, ಬಳೆಗಾರ್ತಿ, ಗಲ್ಲಗಾರ್ತಿ, ಆಟಗಾರ್ತಿ ಎಂಬ ಶಬ್ದಗಳನ್ನು ಕೊಟ್ಟಿದ್ದಾನೆ.

೧೮. ಅಳ್ ಪ್ರತ್ಯಯ:

"ಅಲೇ ಚ ಗುಣ ವಚನೇಭ್ಯಃ" (ಸೂ. ೧೯೦) ಗುಣವಚನಗಳು ಸ್ತ್ರೀಲಿಂಗದಲ್ಲಿದ್ದಾಗ 'ಅಳ್' ಮತ್ತು 'ಎ' ಎಂಬ ಪ್ರತ್ಯಯಗಳು ಬರುತ್ತವೆ. ಉದಾ : ಒಳ್ಳಿದಳ್, ನಲ್ಲಳ್, ಪೊಲ್ಲಳ್, ಇನಿಯಳ್ - ಎಂಬಂತೆ.

ಸ್ತ್ರೀಲಿಂಗ ಗುಣವಚನಗಳಲ್ಲಿ 'ಎ' ಪ್ರತ್ಯಯ ಬರುವುದಕ್ಕೆ-

ಉದಾ : ಚದುರೆ, ಪಾಣ್ಬೆ, ಸಿತಗೆ, ಜಾಣೆ - ಇತ್ಯಾದಿ.

"ಅಕಾರಾಂತ ತದ್ಧಿತಗಳಿಗೆ ಸ್ತ್ರೀಲಿಂಗ ವಿವಕ್ಷೆಯಾದಾಗ ಇತಿ ಪ್ರತ್ಯಯವಲ್ಲದೇ, 'ಹೂಸ್ಯವಂತೆ' ಎಂಬಂತೆ 'ಎ' ಪ್ರತ್ಯಯ ಬರುವುದುಂಟು. ಈ 'ಎ' ಪ್ರತ್ಯಯ ಮತ್ತು 'ಇ' ಪ್ರತ್ಯಯವು ಸ್ತ್ರೀಲಿಂಗವನ್ನು ಸೂಚಿಸಲು ನಾಮಲಿಂಗಗಳ ಮೇಲೆ ಹತ್ತುವುದುಂಟು. ಚದುರ, ಚದುರೆ, ಅರಸು, ಅರಸಿ - ಎಂದು ಮುಂತಾಗಿ".[೧೦]

೧೯. ಇಲಿ ಪ್ರತ್ಯಯ:

"ಇದುದಂತ ಪುಂ ಸಿವಾ" (ಸೂತ್ರ ೧೯೧) ಇಕಾರಾಂತ, ಉಕಾರಾಂತ ಶಬ್ದಗಳಿಗೆ ವಿಕಲ್ಪದಿಂದ ಪುಲ್ಲಿಂಗಕ್ಕೆ ಸಮರೂಪ ಬರುವುದು. ಉದಾ : ನಾಣಿಲಿ, ನಾಚಿಕೆ ಇಲ್ಲದವಳು ಮತ್ತು ನಾಚಿಕೆ ಇಲ್ಲದವನು ಎಂದು ಎರಡು ಲಿಂಗಗಳಿಗೆ ಸಮರೂಪ ಬಂದಿದೆ. ಅಂತೆ ಸಿಗ್ಗಾಳಿ (ಲಿ). ನಾಚಿಕೆ ಇಲ್ಲದವ ಎಂದು ಶ.ಮ.ದ ದಲ್ಲಿದೆ. ಇಂಥದೇ ಮಾತಾಳಿ, ಪುಲ್ಲಿಂಗ ಸ್ತ್ರೀಲಿಂಗಗಳೆರಡಕ್ಕೂ ಸಮವಾಗಿ ಬರುವ ಇನ್ನೂ ಕೆಲವು ತದ್ಧಿತ ಪದಗಳನ್ನು ನೋಡಬಹುದು. ಉದಾ : ಸೊಂದಿ, ಗಾಳು, ಪಾಱು - ಇತ್ಯಾದಿ.

ಸೂತ್ರ ೧೯೨ ವಿಪ್ಸಾದಿ ಅರ್ಥಗಳಲ್ಲಿ ದ್ವಿವಚನ ಬರುವುದನ್ನು ಹೇಳುತ್ತದೆ.

ಇನ್ನು ಸೂತ್ರ ೧೯೩ ತದ್ಧಿತ ಪ್ರಕರಣದಲ್ಲೂ ಕೂಡ ಸಮಾಸ ಪ್ರಕರಣದಂತಮ ಲೋಪ, ಆಗಮ, ಆದೇಶಗಳೆಂಬ ಕಾರ್ಯಗಳಿವೆ ಎಂದು ಹೇಳುತ್ತದೆ. ವೀಪ್ಸೆ, ಅನುಕರಣೆ, ಅಭೀಕ್ಷ್ಣ್ಯ, ಕ್ರಿಯಾಸಮಭಿಹಾರ, ಚಾಪಲ - ಈ ಮೊದಲಾದವುಗಳ ಅರ್ಥವನ್ನು ಕುರಿತು ಹೇಳುವಲ್ಲಿ ಪದಕ್ಕೆ ದ್ವಿರುಕ್ತಿ ಹೇಗೆ ಸಂಭವಿಸುತ್ತದೆ ಎಂದು ತಿಳಿಸಿದ್ದಾನೆ, ನಾಗರ್ಮ.

ಉದಾ : **ವೀಪ್ಸೆಗೆ** : ಊರೊರ್, ಮನೆಮನೆ, ಕೇರಿಕೇರಿ - ಇತ್ಯಾದಿ

**ಅನುಕರಣೆ** : ಭೋರ್ಭೋರೆನೆ, ಗಳಗಳನೆ - ಇತ್ಯಾದಿ

**ಅಭೀಕ್ಷ್ಣಗೆ** : ನೋಡಿ ನೋಡಿ, ಓದಿ ಓದಿ - ಇತ್ಯಾದಿ

**ಕ್ರಿಯಾಸಮಭಿಹಾರ** : ನಡೆನಡೆಯೆಂದು ನಡೆದರ್

**ಚಾಪಾಲೆಗೆ** : ಒಪ್ಪಿಸೊಪ್ಪಿಸು - ಇತ್ಯಾದಿ

ಮುಖ್ಯವಾಗಿ ನಾಗವರ್ಮನು ನಿರೂಪಿಸಿದ ತದ್ಧಿತ ಪ್ರತ್ಯಯಗಳನ್ನು ಹೀಗೆ ವಿಂಗಡಿಸಬಹುದು:

೧. **ತದ್ಧಿತ ನಾಮ ಪ್ರತ್ಯಯಗಳು** : ಇಗ, ವಳ, ಕಾಜಿ, ಗಾಜಿ, ಇಚ, ಆಳಿ, ಇತ್ತಿ, ಎ - ಈ ಮೊದಲಾದುವು ಪುಲ್ಲಿಂಗ ಮತ್ತು ಸ್ತ್ರೀಲಿಂಗ ಶಬ್ದಗಳಿಗೆ ಜಾತಿ ವಸ್ತು, ಉದ್ಯೋಗ, ಗುಣ, ಶೀಲ, ಸ್ವಭಾವಗಳ ಅರ್ಥದೊಂದಿಗೆ ಹತ್ತುತ್ತವೆ.

೨. **ತದ್ಧಿತ ಭಾವನಾಮ ಪ್ರತ್ಯಯಗಳು** : ತನ, ಇಕೆ, ಕೆ, ಮೆ, ಪು - ಇವು ಚೇತನಾಚೇತನಾ ಭಾವನಾಮಗಳ ಮೇಲೆ ವರ್ತಿಸುವ ಪ್ರತ್ಯಯಗಳು.

೩. **ತದ್ಧಿತಾಂತ ವಿಶೇಷಣಗಳು** : ವಂತ (ಮಂತ), ಆನೆಯ ಇವು ತದ್ಧಿತಾಂತ ನಾಮ ಪ್ರಮಾಣವಾಚಿ, ಸಂಖ್ಯಾವಾಚಿ ಪ್ರತ್ಯಯಗಳು.

೪. **ತದ್ಧಿತ ಅವ್ಯಯಗಳು** : ವೋಲ್, ಬೋಲ್, ಂಬೋಲ್ - ಇವು ಉಪಮಾನ, ಅಲಂಕಾರಗಳಲ್ಲಿ ಗೋಚರಿಸುವ ಪ್ರತ್ಯಯಗಳು,

ನಾಗವರ್ಮ ಕೇಶಿರಾಜಾದಿಗಳು ಗುರುತಿಸದೆ ಇರುವ ಇನ್ನೂ ಅನೇಕ ತದ್ಧಿತ ಪ್ರತ್ಯಯಗಳುಂಟು. ಅವುಗಳನ್ನು ಸಂಶೋಧಿಸಿ, ವಿವರಿಸಬೇಕಾದ ಅಗತ್ಯವಿದೆ. ಅನ್ಯಭಾಷಾ ಸಂಪರ್ಕದಿಂದ ಪ್ರತ್ಯಯಗಳು ಬೆಳೆಯಬಹುದು.

"ಎಲ್ಲ ತದ್ಧಿತ ಪ್ರತ್ಯಯಗಳ ಮೂಲ ಮತ್ತು ಸ್ವರೂಪಗಳನ್ನು ಕುರಿತು ಸಮಗ್ರ ಪರಿಶೀಲನೆ ನಡೆಯಬೇಕಾಗಿದೆ."[೧] ಎಂಬ ಮಾತನ್ನು ಒಪ್ಪಬಹುದು.

**ತೆಲುಗು ತದ್ಧಿತ ಪ್ರತ್ಯಯಗಳು**

ತದ್ಧಿತವೆಂಬ ಸಂಜ್ಞೆ ಆಂ.ಭಾ.ಭೂ.ದಲ್ಲಾಗಲೀ, ಆಂ.ಶ.ಚಿಂ., ವಿಕೃತಿ ವಿವೇಕಗಳಲ್ಲಾಗಲಿ ಇಲ್ಲ. 'ಕಾವ್ಯಾಲಂಕಾರ ಚೂಡಾಮಣಿ' ಎಂಬ ಅಲಂಕಾರ ಗ್ರಂಥ ಇದನ್ನು ಮೊದಲು ಬಳಸಿದೆ. ಆದರೆ ಇದರ ಕರ್ತೃ ಪೆದ್ದನ. ತದ್ಧಿತಗಳನ್ನು ಎರಡೇ ಪದ್ಯಗಳಲ್ಲಿ ಹೇಳಿ ಮುಗಿಸಿದ್ದಾನೆ. ಕೇತನನು ತದ್ಧಿತ ಪ್ರಕರಣವನ್ನು ಪ್ರತ್ಯೇಕವಾಗಿ ಹೆಸರಿಸಿಲ್ಲವಾದರೂ ಆಂ.ಭಾ.ಭೂ. ಕೃತಿಯ ಪದ್ಯ ೧೩೨ ರಿಂದ ೧೩೮ರ ವರೆಗೂ ತದ್ಧಿತ ಪ್ರತ್ಯಯಗಳ ವಿವರಣೆ ಇದೆ. ಅವನು ವಿವರಿಸಿದ ತದ್ಧಿತ ಪ್ರತ್ಯಯಗಳೆಂದರೆ- ಕಾಡು, ಈಡು, ಇಂಡಿ, ಡು, ಅರಿ, ಆಮಿ, ಇಮಿ, ಕತ್ತೆ, ಜೋಡಿ, ಆಲು- ಎಂಬುವು.

ಸಂಸ್ಕೃತ ಹಾಗೂ ಕನ್ನಡ ವ್ಯಾಕರಣಕಾರರು ಹೇಳಿದ ಹಾಗೆ ತೆಲುಗು ವೈಯಾಕರಣರು ಕೂಡ ತದ್ಧಿತ ಪ್ರತ್ಯಯವನ್ನು ತದ್ಧಿತಾಂತ ಲಿಂಗಗಳಿಗೆ ಹತ್ತಿಸಿ ತದ್ಧಿತಾಂತ ಪದಗಳನ್ನಾಗಿ ಸ್ವೀಕರಿಸಿದ್ದಾರೆ. 'ತದ್ಧಿತಾಂತ' ಪದದ ಅರ್ಥವೊಂದೇ ಆದರೂ, ಪ್ರತ್ಯಯಗಳು ಮಾತ್ರ ಭಿನ್ನವಾಗಿವೆ.

ಆಡು, ಈಡು, ಕಾಡು - ಎಂಬ ಪ್ರತ್ಯಯಗಳು ಪುಲ್ಲಿಂಗದಲ್ಲೂ, ಕತ್ತೆ, ಜೋದಿ- ಎಂಬವುಗಳು ಸ್ತ್ರೀಲಿಂಗದಲ್ಲೂ ಬರುವುದಾಗಿ ಕೇತನ ತನ್ನ ಕೃತಿಯ ೧೬೭ನೆಯ ಪದ್ಯದಲ್ಲಿ ಹೇಳಿದ್ದಾನೆ.

ಆಡುನು ನೀಡುನ ಗತ್ತೆಯು
ಗಾಡನುಜೋಗರ್ತಯಗು ಜಗಂಬೆರುಗಂಗಾ
ಜೋಡಿಯಸಂಗ ನೆಲ್ಲೆಡಲನು
ನಾಡುಂ ಬೇಳ್ಳಕುನು ಜೆಲ್ಲು ಅಭಿನವ ದಂಡೀ

೧. ಕಾಡು:

'ಕಾಡು' ಎಂಬ ಪ್ರತ್ಯಯ ತಿಳುವಳಿಕೆಯನ್ನು ಅಥವಾ ಯಾವುದಾದರೂ ವಿಷಯದಲ್ಲಿ ಜಾಣ್ಮೆಯನ್ನು ತಿಳಿಸುತ್ತದೆ.

ಏಕಪದಮುವ್ವೆ ಗಾಡು ನೇರ್ಪೆಲ್ಲದೆಲುಪು
ಗೊನಬುಕಾಡು ಬಲಿಮಿಕಾಡು ಕೊಂಡೆಕಾಡು
ಚನುವುಕಾಡು ಚೆಲಮಿಕಾಡು ಜಾಡಗಾಡು
ಬಂದಿಕಾಡನ ನೆಲ್ಲೆಡ ಬರಗುಚುಂಡು (ಪದ್ಯ ೧೬೨)

ಉದಾ : ಗೊನಬು + ಕಾಡು = ಗೊನಬುಗಾಡು (ಸೊಗಸುಗಾರ)
ಬಲಿಮಿ + ಕಾಡು = ಬಲಿಮಿಕಾಡು (ಬಲಶಾಲಿ)
ಕೊಂಡೆ + ಕಾಡು = ಕೊಂಡೆಕಾಡು (ಚಾಡಿಕೋರ)
ಚನುವು + ಕಾಡು = ಚನುವುಕಾಡು (ಒಲವಿನವನು)
ಚೆಲಿಮಿ + ಕಾಡು = ಚೆಲಿಮಿಕಾಡು (ಸ್ನೇಹಿತ)
ಜಾಡ + ಕಾಡು = ಜಾಡಕಾಡು (ಜಾಡು ತಿಳಿಸುವವನು)
ಬಂದಿ + ಕಾಡು = ಬಂದಿಕಾಡು (ಬಂದಿ)

ಕಾಡು ಪ್ರತ್ಯಯ ವೃತ್ತಿಯನ್ನು ಕೂಡ ಹೇಳುತ್ತದೆ.

ನನ್ನಯನ ಪ್ರಯೋಗಗಳು : ತಾವಿಕಾಡು (ಆದಿ-೪-೨೬೨)
ಪರಿಕಾಡು (ಆದಿ-೪-೨೦೨)
ನೇರ್ಪುಕಾಡು (ಆದಿ-೬-೩೨)

ಆಟ, ಎಮ್ಮೆ, ಕಟಾದಿ, ಕೊಲ್ಲು, ಚೆಲಿಮಿ, ಚೇರುವ, ಚೊರವ, ಪಟ್ಟಿ, ಜೂದಮು, ತೇರ, ದೊಡ್ಡ ಇತ್ಯಾದಿಗಳಿಗೆ 'ಕಾಡು' ಪ್ರತ್ಯಯ ಸೇರುವುದೆಂದು ಬಿನ್ನಯಸೂರಿಯ ಅಭಿಮತ.

ಆಟದಲ್ಲಿ ಆಸಕ್ತಿಯಿರುವವನು ಎಂಬ ಅರ್ಥದಲ್ಲಿ 'ಆಟಕಾಡು' ಆಗುತ್ತದೆ. 'ಕಾಡು' ಇರುವಿಕೆಯ ಪ್ರತ್ಯಯ. 'ಡು' ಪ್ರಥಮ ಪುರುಷ ಪುಲ್ಲಿಂಗ. ಆಟ + ಕಾ + ಡು = ಆಟ + ಕಾಡು = ಆಟಕಾಡು. ಅಂತೆ ಉಳಿದವನ್ನು ಸಾಧಿಸುವುದು. ಆಸಕ್ತಿ, ವೃತ್ತಿ ಎಂಬ ಅರ್ಥದಲ್ಲಿ 'ಕಾಡು' ಬರುತ್ತದೆ.

'ಆಟ' ಮೊದಲಾದುವುಗಳಿಗೆ 'ಕಲವಾಡು' (ಇರುವವನು) ಎಂಬ ಅರ್ಥದಲ್ಲಿ 'ತಾ' ಎಂಬ ಪ್ರತ್ಯಯ ಇರುವಿಕೆಯನ್ನು ಸೂಚಿಸಿ, ಕಾಡು ಆದಂತೆಯೇ; 'ಕಲದಿ' (ಇರುವವಳು) ಎಂಬ ಅರ್ಥದಲ್ಲಿಯ 'ಕತ್ತಿಯ' ಎಂಬ ಪ್ರತ್ಯಯವು ಸೇರುವುದು. ಇಯ > ಎ ಆಗುವುದರಿಂದ 'ಕತ್ತೆ' ಎಂಬ ರೂಪ ದೊರೆಯುತ್ತದೆ. ಒಟ್ಟಾರೆ 'ಕಾಡು' ಮತ್ತು 'ಕತ್ತಿ'ಯ ಎಂಬಿವು ಎರಡೂ ತದ್ಧಿತ ಪ್ರತ್ಯಯಗಳು.

ಉದಾ : ಆಟಕಾಡು; ಆಟಕತ್ತೆ, ಗೊನಬುಕಾಡು, ಗೊನಬುಕತ್ತೆ

ಈ 'ಕಾಡು' ಮತ್ತು 'ಕತ್ತೆ' ಎಂಬ ಪ್ರತ್ಯಯಗಳು ಒಮ್ಮೊಮ್ಮೆ 'ಗಾಡು' ಮತ್ತು 'ಗತ್ತೆ' ಎಂಬ ರೂಪಗಳಲ್ಲೂ ಕಂಡು ಬರುತ್ತದೆಂದು ಚಿನ್ನಯ ಸೂರಿ ಹೇಳಿದ್ದಾನೆ (ತದ್ಧಿತ ಪರಿ. ೧೨).

ಉದಾ : ಅಂದಗಾಡು; ಅಂದಗತ್ತೆ, ಕೊಂಡೆಗಾಡು, ಕೊಂಡೆಗತ್ತೆಯ -ಈ ಮೊದಲಾದು.

೨. **ಈಡು:**

ಈಡು ಬಾಸದೆಲ್ಪು ನೀಡುಗುಣಮುದೆಲ್ಪು
ನೀಡು ಕುಲಮುದೆಲ್ಪು ನೆಲ್ಲಯೆಡಲ
ಗನ್ನಡೀಡು ನಾಗ ಗಪಟೀಡು ನಾಗ ಸಾ
ಲೀಡು ನಾಗ ವೇರು ಲೇಕಚನುಟ (ಪದ್ಯ ೧೬೩)

'ಈಡು' ಎಂಬ ಪ್ರತ್ಯಯ ಭಾಷೆಯನ್ನು ತಿಳಿಸಲು, ಗುಣವನ್ನು ತಿಳಿಸಲು ಹಾಗೂ ಕುಲವನ್ನು ತಿಳಿಸಲು ಬಳಸುವ ತದ್ಧಿತ ಪ್ರತ್ಯಯವಾಗಿದೆ.

ಉದಾ : ಕನ್ನಡ + ಈಡು = ಕನ್ನಡೀಡು (ಭಾಷೆ)
ಕಪಟ + ಈಡು = ಕಪಟೀಡು (ಗುಣ)
ಸಾಲೆ + ಈಡು = ಸಾಲೀಡು (ಕುಲ)

೩. ಇಂಡಿ ಪ್ರತ್ಯಯ :

ಕೇತನ 'ಇಂಡಿ' ಎಂಬ ಪ್ರತ್ಯಯವನ್ನು ಕುರಿತು ಪದ್ಯ ೧೬೪ರಲ್ಲಿ ಹೇಳಿದ್ದಾನೆ. 'ಇಲ್ಲದಿರುವುದು' ಎಂಬ ಅರ್ಥದಲ್ಲಿ (ಅಭಾವ ದ್ಯೋತಕ) 'ಇಂಡಿ' ಪ್ರತ್ಯಯ

ಬರುವುದಾಗಿ ಹೇಳಿದ್ದಾನೆ. ಆದರೆ ಪ್ರಯೋಗಗಳಲ್ಲಿ 'ಇಡಿ' ಎಂದೇ ಕಾಣುತ್ತವೆ. ಮುಕ್ಕುಂಡಿ, ವೆರವಿಂಡಿ ಮುಂತಾದುವು ಕೇತನನ ಪ್ರಯೋಗಗಳು. ಮುಕ್ಕುಡಿ (ಮೂಗು ಇಲ್ಲದವನು), ವೆರವಿಡಿ (ಭಯವಿಲ್ಲದವನು) ಎಂದೇ ಕಾಣುತ್ತದೆ

ಚಿನ್ನಯ ಸೂರಿಯು ಕೂಡ 'ಇಡಿ' ಎಂಬುದನ್ನೇ ಉಪಯೋಗಿಸಿದ್ದಾನೆ.

"ಮುಕ್ಕು ಲೋನಗು ವಾನಿಕಿಂ ದದಭಾವ ದ್ಯೋತಕಂಬಯಿ ಮತು
ಬರ್ಥಂಬು ನದಿಂಡಿವರ್ಣಕಂಬಗು" (ತದ್ಧಿತ ಪರಿ. ಸೂ. ೨೪)

ಇಂಡಿಯನುಟ ಲೇದನುಟಯೆ
ಯೊಂಡೊಕ ಯರ್ಥಂಬು ಗಲುಗ ನೋಪದು ಧರಮು
ಕ್ಕಿಂಡಿಯು, ವೆರವಿಂಡಿಯು ವಾ
ಯಿಂಡಿಯು ಮುಪ್ಪಿಂಡಿಯನಂಗ ನೇರ್ಪಡಿಯುನಿಕಿನ್ (ಅಂ.ಭಾ.ಭೂ.ಪ. ೧೬೪)

ಕೇತನನ ಉದಾಹರಣೆಗಳನ್ನು ನೋಡಿದರೆ ಆ ಪ್ರಯೋಗಗಳೆಲ್ಲವೂ ಅತಿ ಪ್ರಾಚೀನ ರೂಪಗಳಾಗಿರಬಹುದೆಂದು ತಿಳಿದು ಬರುತ್ತದೆ. ತನ್ನ ದಶಕುಮಾರ ಚರಿತೆ ಮತ್ತು ವಿಜ್ಞಾನೇಶ್ವರ ಕೃತಿಗಳಲ್ಲಿ ವೆರವಿಡಿ ಎಂಬ ಬಿಂದು ರಹಿತ ಉದಾಹರಣೆಯನ್ನು ಕೊಟ್ಟಿದ್ದಾನೆ.

**೪. ಆಡು ಪ್ರತ್ಯಯ:**

ಆಡು ನರಿಯನು ನಧಮ ಕಾರ್ಯಮುಲ ದೆಲುಪು
ಬೊಕುಲಾಡು ತಗವುಲಾಡು ಟಿಂಕುಲಾಡು
ವೆಂಟೆ ಪೆನಪರಿ ಮುಂಡರಿ ತುಂಟರಿಯನು
ಗಲ್ಲರಿಯು ನನ ನೆಲ್ಲೆಡ ಜಿಲ್ಲುಗಾನ- (ಅಂ.ಭಾ.ಭೂ. ಪದ್ಯ ೧೬೫)

'ಆಡು' ಮತ್ತು 'ಆರಿ' ಎಂಬ ಪ್ರತ್ಯಯಗಳು ಅಧಮ ಕಾರ್ಯಗಳನ್ನು ತಿಳಿಸುತ್ತವೆ.

ಉದಾ: ಬೊಂಕುಲ + ಆಡು = ಬೊಂಕುಲಾಡು (ಸುಳ್ಳ) ಹಾಗೆಯೇ ತಗವುಲಾಡು

(ಜಗಳಗಂಟ), ಜಿಂಕುಲಾಡು (ಹಾದರಿಗ) ಈ ಮೊದಲಾದವು.

ಕೇತನ ಹಿಂದೆ ತಿಳಿಸಿದ 'ಈಡು' ಭಾಷೆಯನ್ನು ತಿಳಿಸಲು, ಗುಣವನ್ನು ತಿಳಿಸಲು ಹಾಗೂ ಕುಲವನ್ನು ತಿಳಿಸಲು ಬಳಸುವ ಪ್ರತ್ಯಯ, 'ಆಡು' ಅಧರ್ಮ ಕಾರ್ಯ ತಿಳಿಸುವುದೆಂದು ಹೇಳಲಾಗಿದೆ. ಆದರೆ 'ಆಡು' ನೀಚಾರ್ಥವನ್ನು ತಿಳಿಸುವ ವಿಷಯವನ್ನು ಚಿನ್ನಯಸೂರಿ ಒಪ್ಪಿದಂತಿಲ್ಲ.

ಸೂರಿ ಸ್ತ್ರೀಲಿಂಗದಲ್ಲಿ 'ಅಡಿ' ಸೇರುವ ಅನೇಕ ಪದಗಳನ್ನು ಸೂಚಿಸಿದ್ದಾನೆ. ನಗ, ಚಿನ್ನ, ಕುಲುಕು, ವನ್ನೆ, ದೊಮ್ಮಿ, ಎಮ್ಮೆ ಮುಂತಾದ ಶಬ್ದಗಳ ಏಕ ಮತ್ತು ಬಹುವಚನಗಳಲ್ಲಿ 'ಆಡಿ' ಪ್ರತ್ಯಯ ಸೇರುತ್ತದೆ. 'ಆಡಿ' ಎಂಬುದು 'ಇರುವಿಕೆ' ಎಂಬ ಅರ್ಥದಲ್ಲಿ ಬರುತ್ತದೆ.

೫. ಅರಿ:

ಕೇತನನ ಮೇಲಿನ ಪದ್ಯ ೧೬೫ರಲ್ಲಿಯ ಉತ್ತರಾರ್ಧದಲ್ಲಿಯೇ 'ಅರಿ' ಪ್ರತ್ಯಯವನ್ನು ಕುರಿತು ತಿಳಿಸಲಾಗಿದೆ. ಪೆನಪೆರಿ, ಮುಂದರಿ, ಮಂಟರಿ -ಇತ್ಯಾದಿ.

'ಅರಿ' ಎಂಬುದು ಕೂಡ ಕೇತನನ ಪ್ರಕಾರ ಅಧರ್ಮ ಕಾರ್ಯಗಳನ್ನು ತಿಳಿಸುವಂಥದು. ಮುಂಡರಿ, ತುಂಟರಿ ಮುಂತಾದವು ಅಧರ್ಮ ಕಾರ್ಯಗಳನ್ನು ತಿಳಿಸುವಂತಿದ್ದರೂ, ಬೇರೆ ಸಂದರ್ಭದಲ್ಲಿಯೂ ಈ ಪ್ರತ್ಯಯ ಬರದೆ ಇಲ್ಲ. ಜಾಲರಿ, ಚದುವರಿ ಮುಂತಾದ ಸಂದರ್ಭಗಳಲ್ಲಿ ವೃತ್ತಿಯನ್ನು ಸೂಚಿಸಲು ಅಥವಾ ಓದುಗ (ಚದುವರಿ) ಎಂಬ ಅರ್ಥದಲ್ಲೂ 'ಆರಿ' ಬರಬಹುದು. ಪಿಸನಾರಿ, ಪಿಂಜಾರಿ- ಮುಂತಾದ ಉದಾಹರಣೆಗಳನ್ನು ತಿಳಿಸಿದ್ದಾನೆ. ಚಿನ್ನಾರಿ, ಪೊನ್ನಾರಿ ಇತ್ಯಾದಿ ಭಾವನಾಮ ಪದಗಳಲ್ಲೂ 'ಅರಿ' ಬರುವುದನ್ನು ಸೂಚಿಸಲಾಗಿದೆ.

೬. ಅಮಿ; ಇಮಿ:

ಅಮಿಲೇಮಿಕಿ ನಿಮಿ ಕಲ್ಮಿಕ್ರಿ
ನಮರಂಗಾಧನಮು ಧರ್ಮಮಗುಟ ಕುದಗು ತಾ
ನಮಿ ವಿನಮಿ ತಾಲ್ಮಿ ಕೂರಿಮಿ
ತಮ ಮಂಚಿತನಂಬು ಲೋಭಿತನ ಮನ ಜನುಟನ್ (ಪದ್ಯ ೧೬೬)

ಅಮಿ ಎಂಬುದು ಒಂದು ತದ್ಧಿತ ಪ್ರತ್ಯಯ. 'ಅಮಿ', 'ಇಲ್ಲ' ಎಂಬ ಅರ್ಥದಲ್ಲಿ ಬರುತ್ತದೆ. 'ಇಮಿ' 'ಇರುವುದು' ಎಂಬ ಅರ್ಥದಲ್ಲಿ ಬರುತ್ತದೆ. 'ತನಮು' ತತ್ ಧರ್ಮವನ್ನು ತಿಳಿಸುವುದು. ಇವುಗಳಲ್ಲಿ 'ಅಮಿ' ಪ್ರತ್ಯಯ ಕೇವಲ ಕ್ರಿಯಾ ಪದಗಳ ಮೇಲೆ ಕಾಣಿಸುತ್ತದೆ. ಚಿನ್ನಯ ಸೂರಿ ಇದನ್ನು 'ಮಿಜ್' ಎಂದು ನಿರ್ದೇಶಿಸಿ ಇದನ್ನು ಕ್ರಿಯಾ ಪ್ರಕರಣದಲ್ಲಿ ಸೇರಿಸಿರುತ್ತಾನೆ. (ಬಾ.ವ್ಯಾ.ಕ್ರಿಯಾ. ೩೭)

'ಇಮಿ' ಎಂಬ ಪ್ರತ್ಯಯ 'ಇರುವಿಕೆ' ಎಂಬ ಅರ್ಥದಲ್ಲಿ ಬರುತ್ತದೆ.

ಉದಾ: ತಾಲ್ಮಿ (ತಾಳ್ಮೆ), ಕೂರಿಮಿ (ಪ್ರೀತಿ).

ಆಧುನಿಕ ಭಾಷಾಶಾಸ್ತ್ರಜ್ಞರು ಕೇತನನು ನಿರೂಪಿಸಿದ 'ಅಮಿ' ಮತ್ತು 'ಇಮಿ' ಎಂಬ ಪ್ರತ್ಯಯಗಳನ್ನು ಅವು ಪ್ರತ್ಯಯಗಳಲ್ಲ ಎಂದೇ ಅಭಿಪ್ರಾಯ ಪಟ್ಟಿದ್ದಾರೆ.

ಇವು ಅವರ ದೃಷ್ಟಿಯಲ್ಲಿ ಕೃತ್ ಪ್ರತ್ಯಯಗಳು. 'ತನಮು' ಎಂಬುದು ಮಾತ್ರ ತದ್ಧಿತ ಪ್ರತ್ಯಯ.

'ಪೇರು' ಮುಂತಾದ ಶಬ್ದಗಳಿಗೆ ಭಾವಾರ್ಥದಲ್ಲಿ 'ಇಮಿ' ಪ್ರತ್ಯಯ ಬರುವುದೆಂದು ಚಿನ್ನಯ ಸೂರಿ ಹೇಳಿದ್ದಾನೆ. (ತದ್ಧಿತ. ಸೂತ್ರ ೫).

ಪೇರು + ಇಮಿ = ಪೇರಿಮಿ; ಕಡಿ + ಇಮಿ = ಕಡಿಮಿ. ಇವು ಭಾವನಾಮ ಪದಗಳು. ಪೇರು, ಕಡು, ಮ್ರುಚ್ಚು, ಪೇಲು, ಚೆಲ, ಪ್ರೋಡಿ, ವಾಡಿ, ವೇಡಿ- ಮುಂತಾದವು ಪೇರ್ವಾದಿಗಳು.

೭. ತನಮು:

'ತನ ಎಂಬುದು ಇದು ಇದರ ಗುಣ' ಎಂಬ ಅರ್ಥದಲ್ಲಿ (ಧರ್ಮಮಗುಟುಕು) ಬರುತ್ತದೆಯೆಂದು ಕೇತನ ಹೇಳಿದ್ದಾನೆ. ಮಂಚಿತನಮು (ಒಳ್ಳೆಯತನ), ಲೋಭಿತನಮು (ಜಿಪುಣತನ) - ಇವು ಉದಾಹರಣೆಗಳು. ತನ ಎಂಬುದು ಹಲವು ದೇಶ್ಯ ಪದಗಳಿಗೆ ಸೇರುತ್ತದೆ.

ಚಿನ್ನಾದಿಗಳಿಗೆ 'ಅಿಕ' ಪ್ರತ್ಯಯ ಬರುವುದೆಂದು ಚಿನ್ನಯಸೂರಿ ಹೇಳಿದ್ದಾನೆ. (ಬಾ.ವ್ಯಾ.ತದ್ಧಿತ ಸೂ. ೩) ಉದಾ: ಚಿನ್ನ + ತನಮು = ಚಿನ್ನತನಮು. ಇದೇರೀತಿ ಚುಟ್ಟರಿತಮು, ಪೆದ್ದರಿತಮು, ತೊತ್ತರಿತಮು ಇತ್ಯಾದಿ ನೋಡಬಹುದು.

೮. ಬೋಡಿ:

೧೬೭ನೆಯ ಪದ್ಯದಲ್ಲಿ ಕೇತನ ಆಡು, ಈಡು, ಕಾಡು ಎಂಬಿವು ಪುಲ್ಲಿಂಗದಲ್ಲಿ ಕತ್ತೆ, ಬೋಡಿ ಎಂಬಿವು ಸ್ತ್ರೀಲಿಂಗದ ಬರುವ ವಿಷಯವನ್ನು ಹೇಳಿದ್ದಾನೆ.

ಆಡು, ಈಡು, ಕಾಡುಗಳ ಬಗ್ಗೆ ಹಿಂದಿನ ಪದ್ಯಗಳಲ್ಲೇ ಹೇಳಲಾಗಿದೆ. ಕತ್ತೆ, ಗತ್ತೆ ಎಂಬುವು ಸ್ತ್ರೀಲಿಂಗದಲ್ಲಿ ಸೇರುತ್ತವೆ. 'ಬೋಡಿ' ಎಂಬುದು ಅಲರುಬೋಡಿ, ಪೂಬೋಡಿ ಮುಂತಾದ ಪದಗಳಲ್ಲಿ ಸ್ತ್ರೀಯೆಂಬ ಅರ್ಥದಲ್ಲಿ ಬರುತ್ತದೆ. ಪೋಡಿಮಿ (=ಕಾಂತಿ) ಎಂಬುದೇ 'ಬೋಡಿ' ಆಗಿದೆ ಎಂದು ಭಾಷಾ ವಿಜ್ಞಾನಿಗಳ ಅಭಿಪ್ರಾಯ. 'ಹೂವಿನಂತೆ ಕಾಂತಿಯುಳ್ಳವಳು' ಎಂಬ ಅರ್ಥದಲ್ಲಿ ಅಲರುಬೋಡಿ, ಪೂಬೋಡಿ ಎಂಬ ಪದಗಳು ಸಾಧ್ಯವಾಗುತ್ತವೆ.

೯. ಆಲು; ರಾಲು:

ಆಲಿಕಿ ರಾಲಗು ದಿಗುವಗು
ಣಾಲಿ ನಿಲಿಪಿ ಪಲುಕು ಚೋಟನನುವಗುನೆಡಗೊ

ಪ್ರಾಲು ಜವರಾಲು ಪಾತಕು

ರಾಲು ಗೆಡಪುರಾಲು ಮುದ್ದುರಾಲನಜನುಟಿನ್ (ಆಂ. ಭಾ.ಭೂ. ೧೬೮)

'ಆಲು'ಗೆ ಕೆಲವೊಮ್ಮೆ 'ರಾಲು' ಬರುತ್ತದೆ. ಉದಾ: ಗೊಡ್ಡು + ಆಲು= ಗೊಡ್ಡುರಾಲು > ಗೊಡ್ರಾಲು. ಕನ್ನಡದಲ್ಲಿ ಬಂಜೆ ಇದ್ದಂತೆ. ಅಂತೆ ಜವ + ಆಲು = ಜವರಾಲು. ಇಂತಹುದೇ ಪಾತಕುರಾಲು, ಗೆಡಪುರಾಲು, ಮುದ್ದರಾಲು ಮುಂತಾದುವುಗಳನ್ನು ತಿಳಿಯಬಹುದು.

ಕೇತನ ಹೇಳದೆ ಇರುವ ಇನ್ನು ಹಲವು ಪ್ರಮುಖ ಪ್ರತ್ಯಯಗಳಿವೆ. ಅವುಗಳನ್ನು ಚಿನ್ನಯ ಸೂರಿ ಮುಂತಾದ ವ್ಯಾಕರಣಕಾರರು ನಿರೂಪಿಸಿದ್ದಾರೆ.

**ಎತ:** ಕೆಲವರು ಇದನ್ನು 'ತ' ಪ್ರತ್ಯಯವೆಂದು, ಮತ್ತೆ ಕೆಲವರು 'ಎತ' ಪ್ರತ್ಯಯವೆಂದು ನಿರೂಪಿಸಿರುವರು. ಉದಾ: ಚಾಕೆತ (ಚಾಕಿ + ಎತ)- ರಜಕಸ್ತ್ರೀ

**ಮಾರಿ:** ಜಗಡಾಲ ಮಾರಿ
ಮಂಟಮೂರಿ
ಇತ್ಯಾದಿ ಪದಗಳಲ್ಲಿ 'ಮಾರಿ' ಎಂಬ ಪ್ರತ್ಯಯ ಬರುವುದು (ಹಠಮಾರಿಯಂತೆ)

**ಪೋತು** : ಕನ್ನಡದ 'ಪೋತ' ಪ್ರತ್ಯಯಕ್ಕೆ ಸಂವಾದಿಯಾಗಿ 'ಪೋತು' ಪ್ರತ್ಯಯ ಬರುವುದು. ಉದಾ: ತಿಂಡಿಪೋತು, ತಿರುಗುಬೋತು ಇತ್ಯಾದಿ

**ಆಯಿ** : ಅಮ್ಮಾಯಿ, ಅಬ್ಬಾಯಿ, ಬಾಬಾಯಿ, ನೀತಾಯಿ, ರಾಮಾಯಿ

ಎಡು: ತೊಮೆಡು, ಮೂರೆಡು, ಗಂಪೆಡು, ದೋಸೆಡು (ಅಳತೆಯನ್ನು ಹೇಳುವಾಗ)

**ಗೊಟ್ಟು** : ಪಿಸಿನಿಗೊಟ್ಟು (ಜಿಪುಣತನ)

ಇಂತಹ ಅನೇಕ ಪ್ರತ್ಯಯಗಳಿವು. ಇವನ್ನು ಐತಿಹಾಸಿಕವಾಗಿ ಪರಿಶೀಲಿಸಬೇಕಾದ ಅಗತ್ಯವಿದೆ.

**ಸಮೀಕ್ಷೆ:**

೧. ನಾಗವರ್ಮನ ಕ.ಭಾ.ಭೂ.ದಲ್ಲಿ ತದ್ಧಿತ ಪ್ರತ್ಯಯಗಳಿಗೆ ಒಂದು ಪ್ರತ್ಯೇಕ ಪ್ರಕರಣವುಂಟು. ಅದಕ್ಕೆ ಅವನು 'ತದ್ಧಿತ ವಿಧಾನಂ' ಎಂದು ಕರೆದಿದ್ದಾನೆ. ಕೇತನನಲ್ಲಿ ಇಂಥ ಪ್ರತ್ಯೇಕ ಪ್ರಕರಣ ಕಾಣದು. ಬದಲಾಗಿ ಅವುಗಳನ್ನು ಪ್ರಕೀರ್ಣ ವಿಷಯಗಳನ್ನು ಹೇಳುವಾಗ ನಿರೂಪಿಸಿದ್ದಾನೆ.

೨. ನಾಗವರ್ಮ ಸುಮಾರು ೨೦ ತದ್ಧಿತ ಪ್ರತ್ಯಯಗಳನ್ನು ೧೫ ಸೂತ್ರಗಳಲ್ಲಿ ನಿರೂಪಿಸಿದ್ದಾನೆ. ಒಂದೊಂದು ಪ್ರತ್ಯಯದ ಲಕ್ಷಣವನ್ನು ಕುರಿತು ಹೇಳಿ ಅವುಗಳಿಗೆ ಪ್ರಯೋಗಗಳನ್ನು ಕೊಟ್ಟಿರುತ್ತಾನೆ. ಕೇಶಿರಾಜನ ಶ.ಮ.ದ.ದಲ್ಲಿ ಇದಕ್ಕೂ ಮಿಗಿಲಾಗಿ ಸುಮಾರು ೪೦ ತದ್ಧಿತ ಪ್ರತ್ಯಯಗಳಿವೆ. ಕೇತನನಲ್ಲಿ ಕೇವಲ ೧೧ ತದ್ಧಿತ ಪ್ರತ್ಯಯಗಳಿದ್ದು ಅವುಗಳನ್ನು ೭ ಪದ್ಯಗಳಲ್ಲಿ ಸಂಕ್ಷೇಪಗೊಳಿಸಿದ್ದಾನೆ.

೩. ನಾಗವರ್ಮನು ನಿರೂಪಿಸಿದ ಇಗ, ವಳಿ, ಗಾರ, ಇಚ, ಆಳಿ, ಇತಿ, ಎ ಇತ್ಯಾದಿ ತದ್ಧಿತ ಪ್ರತ್ಯಯಗಳು ಪುಂ ಸ್ತ್ರೀಲಿಂಗಗಳ ಜಾತಿ, ವಸ್ತು ಉದ್ಯೋಗ ಗುಣ, ಶೀಲ, ಸ್ವಭಾವಗಳನ್ನು ನಿರ್ದೇಶಿಸುತ್ತವೆ. ತನ, ಇಕೆ, ಕೆ, ಮೆ, ಪು, ತ ಇತ್ಯಾದಿ ಪ್ರತ್ಯಯಗಳು ಚೇತನಾಚೇತನ ಭಾವನಾಮ ಪದಗಳ ಮೇಲೆ ಬಂದಿದೆ. ಇವುಗಳಿಗೆ ತದ್ಧಿತಾಂತ ಭಾವ ನಾಮಗಳೆನ್ನುತ್ತಾರೆ. ವಂತ, ಅನೆಯ ಪ್ರತ್ಯಯಗಳು ಪ್ರಮಾಣವಾಚಿ, ಸಂಖ್ಯಾವಾಚಿ ಪದಗಳ ಮೇಲೆ ಹತ್ತಿವೆ. ಇವುಗಳಿಗೆ ತದ್ಧಿತಾಂತ ವಿಶೇಷಣಗಳು ಎನ್ನುತ್ತಾರೆ. ವೋಲೆ, ವೊಲ್, ಂಬೋಲ್-ಎಂಬ ಪ್ರತ್ಯಯಗಳು ಅಲಂಕಾರಾದಿ ಪ್ರತ್ಯಯಗಳಾಗಿದ್ದು ತದ್ಧಿತಾಂತ ಅವ್ಯಯಗಳೆನಿಸಿಕೊಂಡಿವೆ. ಕೇತನನ ತದ್ಧಿತ ಪ್ರತ್ಯಯಗಳ ವಿವರಣೆ ನಾಗವರ್ಮನಷ್ಟು ವಿಸ್ತಾರ, ವೈವಿಧ್ಯಮಯವಾಗಿಲ್ಲ. ಅವನು ನಿರೂಪಿಸಿದ ಪ್ರತ್ಯಯಗಳು ಕೇವಲ ೧೧ ಆಗಿದ್ದು ಅವು-ಕಾಡು, ಈಡು, ಆಡು, ಇಂಡಿ, ಅರಿ, ತನಮು, ಕತ್ತೆ, ಬೋಡಿ, ಆಲು, ರಾಲುಗಳು ಮಾತ್ರ. ಪುಂ ಸ್ತ್ರೀ ಲಿಂಗಾದಿಗಳಲ್ಲಿ ಎಲ್ಲವೂ ವರ್ತಿಸಲಿದ್ದು, ಸ್ತ್ರೀವಾಚಿ ಪ್ರತ್ಯಯಗಳು ಕಡಮೆ ಎಂದೇ ಹೇಳಬಹುದು ಬೋಡಿ, ರಾಲು, ಆಡಿ- ಈ ಮುಂತಾದವು ಮಾತ್ರ ಸ್ತ್ರೀವಾಚಿ ಪ್ರತ್ಯಯಗಳು. ಕನ್ನಡದಂತೆ ಭಾವನಾಮಗಳೂ ಕಡಮೆ.

೪. ಕನ್ನಡ ಪ್ರತ್ಯಯಗಳಂತೆ ತೆಲುಗು ಪ್ರತ್ಯಯಗಳು ಕೂಡ ಪುಂ ಸ್ತ್ರೀಲಿಂಗ, ಜಾತಿ, ವಸ್ತುವಿನ, ಉದ್ಯೋಗ, ಗುಣ, ಶೀಲ, ಸ್ವಭಾವಗಳನ್ನು ನಿರ್ದೇಶಿಸುತ್ತಿದ್ದರೂ ಪ್ರತ್ಯಯಗಳಲ್ಲಿ ವ್ಯತ್ಯಾಸ ಕಂಡುಬರುತ್ತದೆ. ಎಲ್ಲೋ ಒಂದೆರಡು ಮಾತ್ರ ಎರಡು ಭಾಷೆಗೂ ಹೋಲಿಕೆ ಕಂಡು ಬರುತ್ತದೆ.

ಇದೇನೇ ಇದ್ದರೂ ಕನ್ನಡ ಮತ್ತು ತೆಲುಗು ವ್ಯಾಕರಣಕಾರರು ಎಲ್ಲ ತದ್ಧಿತ ಪ್ರತ್ಯಯಗಳನ್ನು ನಿರೂಪಿಸಿದರೆಂದು ಹೇಳುವಂತಿಲ್ಲ. ಎಲ್ಲ ತದ್ಧಿತ ಪ್ರತ್ಯಯಗಳನ್ನು ಗುರುತಿಸಿ, ಬೇರೆ ಬೇರೆ ಭಾಷೆಗಳೊಂದಿಗೆ ಹೋಲಿಸಿ ನೋಡಿದಾಗ ಮಾತ್ರ ಅವುಗಳ ಸಂಪೂರ್ಣ ಚಿತ್ರ ನಮಗೆ ಕಾಣುತ್ತದೆ.

## ಅಡಿಟಿಪ್ಪಣಿ

೧. ಡಾ. ಬಿ. ಪುರುಷೋತ್ತಂ, ಬಾಲವ್ಯಾಕರಣಮು, (ವ್ಯಾಖ್ಯಾನ), ಪು. ೨೬೩.

೨. ಡಾ. ವಿ. ಶಿವಾನಂದ, ಶಬ್ದಮಣಿದರ್ಪಣ ವಿಳಾಸ, ಪು. ೧೬೭.

೩. ಕಿಟ್ಟೆಲ್ ಡಿಕ್ಷನರಿ, ಪು. ೬೮೭.

೪. ಡಾ. ಎಲ್. ಬಸವರಾಜು, ಶಬ್ದಮಣಿದರ್ಪಣಂ, ಪು. ೮೭.

೫. ಎಂ.ವಿ. ಸೀತಾರಾಮಯ್ಯ, "ಪ್ರಾಚೀನ ಕನ್ನಡ ವ್ಯಾಕರಣಗಳು", ಪು. ೧೮೫.

೬. ಎಂ.ವಿ. ಚಿತ್ರಲಿಂಗಯ್ಯ, ಶ್ರೀಕಂಠ ತೀರ್ಥ, ಪು. ೬೧೨.

೭. ಎಂ.ವಿ. ಸೀತಾರಾಮಯ್ಯ ಪ್ರಾಚೀನ ಕನ್ನಡ ವ್ಯಾಕರಣಗಳು, ಪು. ೧೯೧.

೮. ಅದೇ, ಪು. ೧೯೨.

# ಆಖ್ಯಾತಗಳು

'ಆಖ್ಯಾತ'ವೆಂದರೆ ಕ್ರಿಯಾಪದ. 'ಭಾವ ಪ್ರಧಾನಮಾಖ್ಯಾನಂ' ಎಂದು ನಿರುಕ್ತ. ಆಖ್ಯಾತವೆಂದರೆ ಪೂರ್ತಿಯಾಗಿ ಹೇಳುವುದು ಎಂದರ್ಥ. 'ಕ್ರಿಯಾ ವಚನ ಮಾಖ್ಯಾತಮ್' ಹಾಗೂ 'ಕ್ರಿಯತೇ ಇತಿ ಕ್ರಿಯಾ' ಎಂದೂ ಇದೆ. ಕ್ರಿಯೆ ಎಂದರೆ ಚೇಷ್ಟೆ ಅಥವಾ ವ್ಯಾಪಾರ.

ಸಂಸ್ಕೃತ ವ್ಯಾಕರಣ ವಾಙ್ಮಯದಲ್ಲಿ ಕ್ರಿಯೆ, ಆಖ್ಯಾತ, ಧಾತು -ಎಂಬ ಮೂರು ಪದಗಳು ಬಹುಪಾಲು ಸಮಾನಾರ್ಥದಲ್ಲಿ ಬಳಕೆಯಾಗಿವೆ. ಆಖ್ಯಾತವೆಂಬ ಈ ಸಂಜ್ಞೆಯನ್ನು ಪ್ರಾಚೀನ ಸಂಸ್ಕೃತ ವ್ಯಾಕರಣ ವಾಙ್ಮಯದಲ್ಲಿ ಕಾಣುತ್ತೇವೆ. ಆಖ್ಯಾತವೆಂಬ ಸಂಜ್ಞೆಯನ್ನೇ ಕನ್ನಡ ಪ್ರಾಚೀನ ವೈಯಾಕರಣರಾದ ನಾಗವರ್ಮ, ಕೇಶಿರಾಜ, ಸ್ವೀಕರಿಸಿದ್ದಾರೆ. ಭಟ್ಟಾಕಳಂಕನು ಕೂಡ ಅವರನ್ನೇ ಅನುಸರಿಸಿದ್ದಾನೆ. ಕನ್ನಡ ಕೈಪಿಡಿಯಲ್ಲಿ ಮಾತ್ರ 'ಕ್ರಿಯಾ ಪ್ರಕರಣ' ಎಂದೇ ಇದೆ. ತೆಲುಗು ವ್ಯಾಕರಣಕಾರರು ಯಾರೂ ಆಖ್ಯಾತವೆಂಬ ಸಂಜ್ಞೆಯನ್ನು ಬಳಸದೆ 'ಕ್ರಿಯ' ಎಂಬುದನ್ನೇ ಬಳಸಿದ್ದಾರೆ. ತಮಿಳು ಭಾಷೆಯಲ್ಲೂ ಆಖ್ಯಾತ ಸಂಜ್ಞೆ ಕಾಣುತ್ತಿಲ್ಲ. ಅಲ್ಲಿ ಕ್ರಿಯೆಯ ಸಂವಾದಿಯಾದ 'ವಿನೈ' ಎಂದೇ ಬಳಕೆಯಾಗಿದೆ. 'ವಿನೈ' ಎಂದರೆ ಕಾರ್ಯ ಎಂದು ಅರ್ಥ. ಈ ಅರ್ಥವನ್ನೇ ತಮಿಳಿನ ಪ್ರಾಚೀನ ವ್ಯಾಕರಣ ಗ್ರಂಥವಾದ 'ತೊಲ್‌ಕ್ಕಾಪ್ಪಿಯಮ್' ಸೂಚಿಸಿದೆ. ನಾಗವರ್ಮನು ತನ್ನ ಕ.ಭಾ.ಭೂ.ದ 'ಆಖ್ಯಾತ ವಿಧಾನಂ' ಎಂಬ ಪ್ರಕರಣದ ಪ್ರಾರಂಭದಲ್ಲಿ (ಸೂತ್ರ ೧೯೪) "ಕ್ರಿಯಾರ್ಥೋ ಧಾತುಃ" ಎಂದಿದ್ದಾನೆ. ಕೇಶಿರಾಜನು ನಾಗವರ್ಮನನ್ನೇ ಅನುಸರಿಸಿ, ತನ್ನ ಶ.ಮ.ದ ಸೂತ್ರ ೨೨೭ರಲ್ಲಿ "ಕ್ರಿಯೆ ಅರ್ಥದ ಮೂಲಂ ಪ್ರತ್ಯಯ ರಹಿತಂ ಧಾತು" ಎಂದೇ ತಿಳಿಸಿದ್ದಾನೆ. ಭಟ್ಟಾಕಳಂಕನು ಇದನ್ನೇ ಅನುಸರಿಸಿದ್ದಾನೆ.

ನಾಗವರ್ಮನು ಮುಂದಿನ ಸೂತ್ರ ೧೯೫ರಲ್ಲಿ ಧಾತುವಿಗೆ ಹತ್ತುವ ವಿವಿಧ ಆ.ವಿ. ಪ್ರತ್ಯಯಗಳನ್ನು ಕುರಿತು ತಿಳಿಸಿರುತ್ತಾನೆ.

"ತಸ್ಮಾದಮರಯಿರೆ ನೆವ್ರೋ ವಿಭಕ್ತಯಃ"

"ಧಾತುಗಳ ಮುಂದೆ ಅಮ್ (೦), ಅರ್, ಅಯ್, ಇರ್, ಎನ್, ಎವ್ -ಎಂಬ ಆ. ವಿ. ಪ್ರ.ಗಳು ಹತ್ತುತ್ತವೆ". ಇವುಗಳನ್ನು ಜ್ಞಾಪಕದಲ್ಲಿಟ್ಟುಕೊಳ್ಳಲು ನಾಗವರ್ಮ ಹಾಗೂ ಕೇಶಿರಾಜರು 'ಅಮರಯಿರೆನೆವು' ಎಂದಿದ್ದಾರೆ.

## ಪುರುಷಾರ್ಥಕ ಆ.ವಿ.ಪ್ರ.

| | ಏಕ ವಚನ | ಬಹುವಚನ |
|---|---|---|
| ಪ್ರಥಮ ಪುರುಷ | ಅಮ್ | ಅರ್ |
| ಮಧ್ಯಮ ಪುರುಷ | ಅಯ್ | ಇರ್ |
| ಉತ್ತರ ಪುರುಷ | ಎನ್ | ಎನ್ > ಎವು |

ಅಮ್, ಅರ್, ಅಯ್, ಇರ್, ಎನ್, ಎವು - ಎಂಬಿವು ಆ.ವಿ.ಪ್ರ.ಗಳು. ಇವು ವಾಸ್ತವವಾಗಿ ದ, ದಪ, ವ -ಎಂಬ ಕಾಲ ಸೂಚಕ ಪ್ರತ್ಯಯಗಳನ್ನು ಮೊದಲಿಗೆ ಪಡೆದು ಅನಂತರ ಧಾತುಗಳಿಗೆ ಹತ್ತುವುವು. ಆದರೆ ಪ್ರತಿಷೇಧ ಮತ್ತು ನಿಷೇದಾರ್ಥದಲ್ಲಿ ನೇರವಾಗಿ ಧಾತುಗಳಿಗೆ ಹತ್ತುವುದುಂಟು.

ಉದಾ :

| | | |
|---|---|---|
| ಅ. ಮಾಡು (ಧಾತು) + ಅಮ್ (೦) | ಮಾಡಂ | ಪ್ರ. ಪುರುಷದಲ್ಲಿ |
| ಮಾಡು (ಧಾತು) + ಅರ್ | ಮಾಡರ್ | |
| ಆ. ಮಾಡು (ಧಾತು) + ಅಯ್ | ಮಾಡೈ | ಮ. ಪುರುಷದಲ್ಲಿ |
| ಮಾಡು (ಧಾತು) + ಇರ್ | ಮಾಡಿರ್ | |
| ಇ. ಮಾಡು (ಧಾತು) + ಎನ್ | ಮಾಡೆನ್ | ಉ. ಪುರುಷದಲ್ಲಿ |
| ಮಾಡು (ಧಾತು) + ಎವು | ಮಾಡೆವು | |

ಮೇಲಿನ ಉದಾಹರಣೆಗಳೆಲ್ಲವು ನಿಷೇದಾರ್ಥವನ್ನು ಸೂಚಿಸುವ ಕ್ರಿಯಾಪದಗಳಾಗಿವೆ. ಕೇಶಿರಾಜನಾದರೂ ನಾಗವರ್ಮನನ್ನೇ ಅನುಸರಿಸಿ "ಅದಂ ಅಭಾವ ಕ್ರಿಯೆಯೊಳ್ ನಿಯತಂ ನಿಶ್ಚಯಿಪುದು ಬುಧಚಯಂ" (ಸೂ. ೨೨೭) ಎಂದಿದ್ದಾನೆ. ಎರಡೂ ಒಂದೇ ಅರ್ಥವನ್ನು ಕೊಡುತ್ತವೆ. ಮಾಡಂ- ಮಾಡಲಾರ ಎಂಬುದು ಅಭಾವ ಕ್ರಿಯೆ. ನಿಷೇಧಾರ್ಥ.

ವಾಸ್ತವವಾಗಿ ಧಾತುಗಳನ್ನು ಕಾಣಬೇಕಾದರೆ ನಿಷೇಧಾರ್ಥಕ್ಕಿಂತ ವಿಧ್ಯರ್ಥವನ್ನು ಗಮನಿಸಬೇಕು.

ಹೀಗಾಗಿ ಯಾವುದೇ ಕ್ರಿಯಾಪದದ ಮೂಲ ಧಾತುವನ್ನು ಕಾಣಬೇಕಾದರೆ ಆ ಪದದ ವಿಧ್ಯರ್ಥದ ಮಧ್ಯಮ ಪುರುಷ ಏಕವಚನವನ್ನು ಗಮನಿಸಿದರೆ ಸಾಕು, ಅದೇ ಧಾತುವಾಗಿರುತ್ತದೆ. ಅರ್ಥಾತ್ ಕನ್ನಡದಲ್ಲಿ ಧಾತುವೇ ವಿಧ್ಯರ್ಥದ ಮಧ್ಯಮ ಪುರುಷ ಏಕವಚನವನ್ನು ಸೂಚಿಸುತ್ತದೆ.[೧] ಎಂಬೀ ಮಾತು ಕೇವಲ ಕನ್ನಡ ಭಾಷೆಗೆ ಮಾತ್ರವಲ್ಲ ಪ್ರಪಂಚದ ಯಾವುದೇ ಭಾಷೆಗೂ ಅನ್ವಯಿಸುವುದು ಎಂದು ಅವರೇ ತಿಳಿಸಿರುತ್ತಾರೆ. ಅದು ನಿಜ.

"ದ ದಪ ವ ಕಾರಾದ್ಯಾಸ್ತಾ ಭೂತವತೀವರ್ತಮಾನಾ ಭವಿಷ್ಯಂತ್ಯಃ"

-ಸೂ. ೧೯೬

(ದ, ದಪ, ವ ಎಂಬ ಕಾಲ ಸೂಚಕ ಪ್ರತ್ಯಯಗಳು ಭೂತ, ವರ್ತಮಾನ, ಭವಿಷ್ಯತ್ ಕಾಲಗಳಲ್ಲಿ ಧಾತುಗಳಿಗೆ ಹತ್ತುವುವು).

ಧಾತುಗಳು ಆ.ವಿ.ಪ್ರ.ಗಳನ್ನು ಪಡೆಯುವುದರ ಮೊದಲಿಗೆ ಮತ್ತೊಂದು ವಿಧವಾದ ಪ್ರತ್ಯಯಗಳನ್ನು ಪಡೆಯುತ್ತವೆ. ಅವೇ ಕಾಲ ಸೂಚಕ ಪ್ರತ್ಯಯಗಳು. ಇವು ಭೂತಕಾಲ, ವರ್ತಮಾನಕಾಲ, ಭವಿಷ್ಯತ್‌ಕಾಲ ಎಂಬ ಮೂರು ಕಾಲಗಳಲ್ಲಿ ಹತ್ತುವುವು.

೧. ಭೂತಕಾಲದಲ್ಲಿ ದ + ಅಮ್ = ದಮ್ > ದಂ ; ದರ್ (ಬ.ವ)

೨. ವರ್ತಮಾನಕಾಲದಲ್ಲಿ ದಪ + ಅಮ್ = ದಪಮ್ ; ದಪರ್ (ಬ.ವ)

೩. ಭವಿಷ್ಯತ್ ಕಾಲದಲ್ಲಿ ವ + ಅಮ್ + ವಮ್ ; ವರ್ (ಬ.ವ)

ಇದು ಪ್ರಥಮ ಪುರುಷ ಏಕ ಮತ್ತು ಬಹುವಚನಗಳಲ್ಲಿರುವ ಕಾಲ ಸೂಚಕ ಪ್ರತ್ಯಯ. ಅಂತೆ ಮಧ್ಯಮ ಹಾಗೂ ಉತ್ತಮ ಪುರುಷಾರ್ಥಗಳಲ್ಲಿ ಮೇಲಿನಂತೆ ಇರುತ್ತವೆ.

ಈ ಹಿಂದೆ ತಿಳಿಸಿರುವಂತೆ ಪ್ರತಿಷೇದಾರ್ಥದಲ್ಲಿ ಈ ದ, ದಪ, ವ-ಗಳು ಬರಲಾರವು. ಇದನ್ನು ಕುರಿತು ಮುಂದಿನ ಸೂತ್ರ ತಿಳಿಸುತ್ತದೆ.

"ನೈವಂ ನ ಞ ರ್ಥೇ" (ಸೂತ್ರ ೧೯೭)

"ಪ್ರತಿಷೇಧಾರ್ಥದಲ್ಲಿ ದ, ದಪ, ವ ಕಾರಗಳು ಹತ್ತುವುದಿಲ್ಲ. ಅವು ಸ್ವ ಸ್ವ ರೂಪದಲ್ಲಿಯೇ ಇರುವುವು"

ಉದಾ : ಮಾಡು + ಅಂ - ಮಾಡಂ - ಮಾಡಲಾರನು

ಮಾಡು + ಅರ್ - ಮಾಡರ್ - ಮಾಡಲಾರರು

ಭಟ್ಟಾಕಳಂಕನ ಶಬ್ದಾನುಶಾಸನದಲ್ಲಿ ಇದನ್ನೇ ಹೇಳಿದೆ.

ದ, ದಪ, ವ - ಪುರುಷವಾಚಿಗಳಿಗೆ ತಕ್ಕಂತೆ ಹೇಗೆ ಹತ್ತುವುವು ಎಂಬುದನ್ನು ಕುರಿತು ನಾಗವರ್ಮನು ಮುಂದಿನ ಸೂತ್ರದಲ್ಲಿ ತಿಳಿಸಿದ್ದಾನೆ.

"ತಾ ಸುಪ್ತೇ ದ್ವೇ ಪ್ರಥಮ ಮಧ್ಯಮೋತ್ತಮ ಪುರುಷಾಃ" (ಸೂತ್ರ ೧೯೮)

ಪ್ರಥಮ, ಮಧ್ಯಮ, ಉತ್ತಮ ಪುರುಷಗಳಲ್ಲಿ ಆ.ವಿ.ಪ್ರ.ಗಳು ಹತ್ತುವುವು. ಪ್ರಥಮ ಪುರುಷಕ್ಕೆ : ಅಮ್, ಅರ್ ; ಮಧ್ಯಮ ಪುರುಷಕ್ಕೆ : ಅಯ್, ಇರ್; ಉತ್ತಮ ಪುರುಷಕ್ಕೆ : ಎನ್, ಎವು. ಇವು ಕ್ರಿಯೆಯ ಮೂಲ ಧಾತುಗಳಿಗೆ ಹತ್ತುವುದುಂಟು. ನಾಗವರ್ಮನು ಕೇವಲ ಆರು ಪ್ರತ್ಯಯಗಳನ್ನು ಮಾತ್ರ ಹೆಸರಿಸಿದ್ದಾನೆ. ಅವನು ಹೇಳದೆ ಇರುವ ಇನ್ನೂ ಅನೇಕ ಪ್ರತ್ಯಯಗಳನ್ನು ಪ್ರಾಚೀನ ಶಾಸನಗಳಲ್ಲಿ ಕಾಣಬಹುದು.

**ಪ್ರಥಮ ಪುರುಷಕ್ಕೆ (ಭೂತಕಾಲ)** : ದ + ಅಮ್ = ದಂ ; ದ + ಅರ್ = ದರ್. ಮಾಡಿದಂ ; ಮಾಡಿದರ್

**ಮಧ್ಯಮ ಪುರುಷಕ್ಕೆ** : ದ + ಅಯ್ = ದಯ್; ದ + ಇರ್ = ದಿರ್; ಮಾಡಿದಯ್ ; ಮಾಡಿದರ್

**ಉತ್ತಮ ಪುರುಷಕ್ಕೆ** : ದ + ಎನ್ = ದೆನ್; ದ + ಎವು = ದೆವು ; ಮಾಡಿದೆನ್ ; ಮಾಡಿದೆವು

ಮಾಡಿದಂ - ಮಾಡಿದನು ; ಮಾಡಿದರ್- ಮಾಡಿದರು (ಹೊ.ಗ. ಅನು/ಅರು)

ಮಾಡಿದಯ್ - ಮಾಡಿದಿ ; ಮಾಡಿದಿರ್- ಮಾಡಿದಿರಿ (ಹೊ.ಗ. ಇ/ಇರಿ)

ಮಾಡಿದೆನ್ - ಮಾಡಿದೆನು ; ಮಾಡಿದೆವು- ಮಾಡಿದೆವು (ಹೊ.ಗ. ಎನು/ಎವು)

**ವರ್ತಮಾನದಲ್ಲಿ :**

ದಪ + ಅಮ್ ದಪಂ; ದಪ + ಅರ್ ದಪರ್; ಮಾಡಿದಪಂ; ಮಾಡಿದಪರ್

ದಪ + ಅಯ್ ದಪಯ್; ದಪ + ಇರ್ ದಪಿರ್: ಮಾಡಿದಪಯ್; ಮಾಡಿದಿರ್

ದಪ + ಎನ್ ದಪೆನ್; ದಪ + ಎವು ಪವೆವು; ಮಾಡಿದಪೆನ್; ಮಾಡಿದೆಪೆವು

**ಭವಿಷತ್ ಕಾಲದಲ್ಲಿ :**

ವ + ಅಮ್ ವಂ; ವ + ಅರ್ ವರ್; ಮಾಡುವಂ; ಮಾಡುವರ್

ವ + ಅಯ್ ವಯ್; ವ + ಇರ್ ವಿರ್; ಮಾಡುವಯ್; ಮಾಡುವಿರ್

ವ + ಎನ್ ವೆನ್; ವ + ಎವು ವೆವು; ಮಾಡುವೆನ್; ಮಾಡುವೆವು

ಆ.ವಿ.ಪ್ರ.ಗಳಾದ ಅಮ್, ಅರ್, ಅಯ್, ಇರ್, ಎನ್, ಎವು -ಗಳು ಹಾಗು ತಾನ್ (೦); ತಾಮ್ (೦) ಎಂಬಿವುಗಳು ಪ್ರಥಮ ಪುರುಷದ ಏಕ ಮತ್ತು ಬಹುವಚನಗಳು ಎಂದು ನಾಗವರ್ಮನು ಮುಂದಿನ ಸೂತ್ರವೊಂದರಲ್ಲಿ ತಿಳಿಸಿದ್ದಾನೆ. ಅಲ್ಲದೆ ಪ್ರಥಮೆಯ ಸ್ತ್ರೀಲಿಂಗದಲ್ಲಿ ಅಳ್, ಅರ್ ಬರುವುದಾಗಿ ಹೇಳಿದ್ದಾನೆ. ಇನ್ನು ಪ್ರಥಮೆಯ ನಪುಂಸಕಲಿಂಗ ಏಕ ಮತ್ತು ಬಹುವಚನಗಳಲ್ಲಿ ಉದು, ಉವು ಬರುವುದಾಗಿಯೂ ತಿಳಿಸಿದ್ದಾನೆ.

"ಅನ್ಯಾರ್ಥೇ ಪ್ರಥಮಃ" (ಸೂತ್ರ ೧೯೯)

"ತಾನ್, ತಾಮ್- ಎಂಬಿವು ಪ್ರಥಮ ಪುರುಷ ಏಕ, ಬಹುವಚನಗಳಲ್ಲಿ ಬಳಕೆಯಾಗುತ್ತವೆ."

ಅಮ್ - ಅನು (ಅವನು); ಅಳ್ - ಅಳು (ಅವಳು); ಅದ್ - (ಅದು), ತಾನ್ - ತಾಮ್ ಇವುಗಳು ಪ್ರಥಮೆಯ ಸರ್ವನಾಮಗಳು. ಇವುಗಳಿಗೆ ಬಹುವಚನದಲ್ಲಿ ಅರ್ - ಅರು (ಅವರು) ಅಳ್ - ಅವರು; ಅದು-ಉದು (ಉವು >ಅವು); ತಾನ್ - ತಾಮ್ ಎಂದಾಗುತ್ತವೆ. ಇವೆಲ್ಲವೂ ಸರ್ವನಾಮಗಳೇ. ನಾಗವರ್ಮನು ಹೇಳಿದ ಒಂಭತ್ತು ಪ್ರತ್ಯಯಗಳನ್ನು ಹೀಗೆ ಸಂಗ್ರಹಿಸಬಹುದು.

| **ಪುರುಷ** | **ಕಾಲ** | **ಏಕವಚನ** | **ಬಹುವಚನ** |
|---|---|---|---|
| ಪ್ರಥಮ | ಭೂತಕಾಲ (ದ) | ಅಮ್ (ಪುಲ್ಲಿಂಗ) | ಅರ್ |
| | | ಅಳ್ (ಸ್ತ್ರೀಲಿಂಗ) | ಅರ್ |

| | | | |
|---|---|---|---|
| | | ಅದು-ಉದು (ನಪುಂಸಕ) | ಅವು |
| | | ಇದು - ತಾಂ | ತಾವು |
| ಮಧ್ಯಮ | - | ಅಯ್ | ಇರ್ |
| | | ನೀಮ್ (೦) | ನೀವ್ |
| ಉತ್ತಮ | - | ಎನ್ | ಎವು |

ನೀನ್ (೦), ಅನ್ (೦) ಎಂಬಿವೆರಡು ಕೂಡ ಮಧ್ಯಮ ಪುರುಷ, ಉತ್ತಮ ಪುರುಷಗಳಲ್ಲಿ ಬಳಕೆಯಾಗುತ್ತವೆ - ಎಂದು ಮುಂದಿನ ಸೂತ್ರ ತಿಳಿಸುತ್ತದೆ.

ಯುಷ್ಮದಸ್ಮದೋರ್ಮಧ್ಯಮೋತ್ತಮೌ ।। ೨೦೦ ।।

ನೀಂ, ಅಂ ಎಂಬ ಎರಡರ್ಥದಲ್ಲಿ ಕ್ರಮವಾಗಿ ಮಧ್ಯಮ, ಉತ್ತಮ ಪುರುಷಗಳಾಗಿರುತ್ತವೆ.

ಉದಾ : ೧. ಮಧ್ಯಮ ಪುರುಷ - ಆಡಿದಯ್ ಆಡಿದಿರ್
ನೀಂ ಆಡಿದಯ್ (ಏ.ವ.)
ನೀಂ ಆಡಿದಿರ್ (ಬ.ವ.)

೨. ಉತ್ತಮ ಪುರುಷ - ಆಡಿದೆನ್ ಆಡಿದೆವು
ಅಂ ಆಡಿದನ್ (ಏ.ವ.)
ಅಂ ಆಡಿದೆವು (ಬ.ವ.)

ನೀಂ ಆಡಿದಪಯ್ ಮತ್ತು ನೀಂ ಆಡಿದಪಿರ್ - ಎಂಬಿವು ವರ್ತಮಾನ-ಕಾಲದ ಕ್ರಿಯಾಪದಗಳು. ನೀಂ ಎಂಬುದು ಸರ್ವನಾಮ. ಆಡಿದಪಯ್, ಆಡಿದಪಿರಿ - ಎಂಬಿವು ಕ್ರಿಯಾಪದಗಳು.

ಹಾಗೆಯೇ

ನೀಂ ಆಡುವಯ್

ನೀಂ ಆಡುವಿರ್ - ಎಂಬಿವುಗಳು ಭವಿಷತ್ ಕಾಲದ ಕ್ರಿಯಾಪದಗಳು.

'ನೀಂ' ಎಂಬಲ್ಲಿಯ ಬಿಂದು ನತ್ವ ಮತ್ವದ ಉಚ್ಚಾರಣೆಯನ್ನು ಪಡೆದು, ಏಕ ಮತ್ತು ಬಹುವಚನವನ್ನು ಅರ್ಥೈಯಿಸುತ್ತದೆ.

**ಅಂ :** ೧. ಅಂ ಆಡಿದೆನ್ (ಭೂತಕಾಲ. ಏಕ.ವ.)
ಅಂ ಆಡಿದೆವು (ಭೂತಕಾಲ. ಬಹು.ವ.)

೨. ಆಂ ಆಡಿದಪೆನ್ (ವರ್ತಮಾನ ಕಾಲ. ಏಕ.ವ.)
ಆಂ ಆಡಿದಪೆವು (ವರ್ತಮಾನ ಕಾಲ. ಬಹು.ವ.)

೩. ಆಂ ಆಡುವೆನ್ (ಭವಿಷತ್ ಕಾಲ. ಏಕ.ವ.)
ಆಂ ಆಡುವೆವು (ಭವಿಷತ್ ಕಾಲ. ಬಹು.ವ.)

"ಯುಷ್ಮದಾಶಿ ವಿಧಾನದಲ್ಲಿ ಸರ್ವನಾಮಗಳ ವಿಷಯ ಬಂದಿದೆ. (ಸೂತ್ರ. ಭಾ.ಭೂ. ೯೨-೯೪) ಅಲ್ಲಿ ಆನ್-ಆಮ್, ನೀನ್-ನೀಮ್, ತಾನ್-ತಾಮ್ -ಇವು ಉತ್ತಮ, ಮಧ್ಯಮ ಮತ್ತು ಪ್ರಥಮ ಪುರುಷ. ಏಕಾನೇಕ ವಚನಗಳೆಂದು ಹೇಳಿ ಅವುಗಳ ನಿಷೇಧ ರೂಪಗಳನ್ನು ಕೊಡಲಾಗಿದೆ. ಭೂಷಣದಲ್ಲಿಯ ಈ ೨೦೪-೨೦೫ ಸೂತ್ರಗಳು ಪುನರುಕ್ತಿಗಳೇ ಆಗಿವೆ."[೧(ಬ)]

ಸೂ || ಯುಗಪತ್ಪ್ರಯೋಗೇ ಪರಸ್ತೇಷಾಂ || ೨೦೧ ||

ಪ್ರಥಮ, ಮಧ್ಯಮ, ಉತ್ತಮ ಪುರುಷಗಳ ಏಕಕಾಲ ಪ್ರಯೋಗದಲ್ಲಿ (ಅವುಗಳಲ್ಲಿ) ಯಾವುದು ಮುಂದಿರುವುದೋ (ಕ್ರಿಯೆಯ ಹಿಂದೆ) ಅದುವೇ ಪುರುಷ ಪ್ರಾಪ್ತಿಸುವುದು (ಸೂತ್ರದ ಟೀಕು).

ಪ್ರಥಮ, ಮಧ್ಯಮ, ಉತ್ತಮ ಪುರುಷಗಳು ಸ್ವತಂತ್ರವಾಗಿದ್ದಾಗ ತಂತಮ್ಮ ನಿಯಮದಂತೆ ವರ್ತಿಸುತ್ತವೆ. ಆದರೆ ಅವು ಕೂಡಿ ನುಡಿಯುವಾಗ (ಪ್ರಯೋಗವಾಗುವಾಗ), ಈ ಮೂರು ಪುರುಷಗಳಲ್ಲಿ ಯಾವುದರ ಬಹುವಚನವನ್ನು ಬಳಸಬೇಕು? ಇದು ಪ್ರಶ್ನೆ. ಇಂಥ ಸಂದರ್ಭದಲ್ಲಿ ಯುಗಪತ್ಪ್ರಯೋಗದಲ್ಲಿ ಒಂದು ಉತ್ತಮ ಪುರುಷ ಕೊನೆಯಲ್ಲಿದ್ದರೆ ಕ್ರಿಯಾ ಪದವೂ ಉತ್ತಮ ಪುರುಷದಲ್ಲಿ ಬರುತ್ತದೆ. ಮಧ್ಯಮ ಪುರುಷವಿದ್ದರೆ ಅಂಥ ಕ್ರಿಯಾಪದವೂ ಬರುತ್ತದೆ. ಆದರೆ ಮೂರು ಪುರುಷಗಳಲ್ಲಿ ಉತ್ತಮ ಪುರುಷಕ್ಕೆ ಪ್ರಾಧಾನ್ಯ.

ಉದಾ : ಆತನುಂ ನೀನುಂ ಮಾಡಿದಿರ್.

ಮೇಲಿನ ವಾಕ್ಯದಲ್ಲಿ 'ನೀನು' (೦) ಮಧ್ಯಮ ಪುರುಷ. ಕಾರಣ ಅದಕ್ಕನುಗುಣವಾಗಿ - ಕೊನೆಯಲ್ಲಿರುವುದರಿಂದ - ಮಾಡಿದಿರ್ ಎಂಬ ಮಧ್ಯಮ ಪುರುಷ ಕ್ರಿಯಾಪದವು ಬರುತ್ತದೆ.

**ಇನ್ನುಳಿದ ಉದಾಹರಣೆಗಳು :**

ಆತನು ಮಾನುಂ ಮಾಡಿದೆವು : ಮಾಡಿದಪೆವು : ಮಾಡೆವೆವು
ನೀನುಂ ಆನುಂ ಮಾಡಿದೆವು : ಮಾಡಿದಪೆವು : ಮಾಡುವೆವು
ಆತನುಂ ನೀನುಂಮಾನುಂ ಕೂಡಿ ಮಾಡಿದೆವು : ಮಾಡಿದಪೆವು : ಮಾಡುವೆವು

ಈ ಸೂತ್ರ ಸರ್ವನಾಮಗಳ ಮತ್ತು ಕ್ರಿಯಾಪದಗಳ ನಿಕಟ ಸಂಬಂಧವನ್ನು ಸೂಚಿಸುತ್ತದೆ.

ನಾಗವರ್ಮನಂತೆ ಕೇಶಿರಾಜನು ಕೂಡ ನಾಮ ಪ್ರಕರಣದಲ್ಲಿ (ಸೂತ್ರ ೧೫೨) ಕೂಡಿ ನುಡಿವ ಕಡೆಯಲ್ಲಿ ಲಿಂಗತ್ರಯಕ್ಕೆ ತರತಮಭಾವ ಸಲ್ಲದೆಂದೂ, ಯಾವುದು ವಾಕ್ಯದ ಕೊನೆಯಿಲ್ಲದೆಯೋ ಅದೇ ಮುಖ್ಯವೆಂದು ತಿಳಿಸಿದ್ದಾನೆ. ಉದಾಹರಣೆಗೆ ಸೇನೆಯುಮಾರಸಿಯುಂ ಅರಸನು ಬಂದರ್ ಇತ್ಯಾದಿ. ಆದರೆ ಪುರುಷತ್ರಯಗಳಲ್ಲಿ ತರತಮಭಾವವಿದ್ದಾಗಲು, ಉತ್ತಮ ಪುರುಷಕ್ಕೆ ಪ್ರಾಧಾನ್ಯ. ಭಟ್ಟಕಳಂಕನಲ್ಲಿ ಈ ವಿಷಯವನ್ನು ಕಾಣುವುದಿಲ್ಲ.[೧(ಬ)]

ಸೂ॥ ಸ್ವಾರ್ಥೇಕಾಲೇ ॥ ೨೦೨ ॥

ಆಖ್ಯಾತ ಪ್ರತ್ಯಯಗಳ ಹಿಂದೆ ದ, ದಪ, ವ ಕಾರಗಳು ಬಂದು ಭೂತ, ವರ್ತಮಾನ, ಭವಿಷತ್ ಕಾಲಗಳನ್ನು ಸೂಚಿಸುತ್ತವೆ. ಇವುಗಳಿಗೆ ಕಾಲ ಸೂಚಕ ಪ್ರತ್ಯಯಗಳೆನ್ನುತ್ತಾರೆ. ಇವು ಎಲ್ಲ ಪುರುಷಗಳಲ್ಲೂ, ಎಲ್ಲ ವಚನಗಳಲ್ಲೂ ಸಮವಾಗಿ ವರ್ತಿಸುವುವು.

ಉದಾ : ಭೂತಕಾಲ : ಪುಟ್ಟಿದಂ, ಪುಟ್ಟಿದರ್

ವರ್ತಮಾನಕಾಲ : ಪುಟ್ಟಿದಪಂ, ಪುಟ್ಟಿದಪರ್

ಭವಿಷತ್‌ಕಾಲ : ಪುಟ್ಟುವಂ, ಪುಟ್ಟುವರ್

ಅಂತೆಯೇ ಮಧ್ಯಮೋತ್ತಮ ಪುರುಷಗಳಲ್ಲಿ ತಿಳಿಯುವುದು.

ಪ್ರಾಚೀನ ಶಾಸನಗಳಲ್ಲಿ ಕಾಲತ್ರಯದ ಪ್ರತ್ಯಗಳಾದ ದ, ದಪ, ವ, ಪ, ಪ್ಪ -ಇವುಗಳ ಕಾಲವನ್ನು ತಿಳಿಯಲು ಅಸದಳ. ಕೆಲವೊಮ್ಮೆ ವರ್ತಮಾನ, ಭೂತಕಾಲವನ್ನು ಸೂಚಿಸುವ ಧಾತುವಿಗೆ 'ಪ' ಮತ್ತು 'ವ' (-ಬ) ಪ್ರತ್ಯಯಗಳು ಸೇರುವುದುಂಟು. ಶಾಸನಗಳಲ್ಲಿ ಎರಡು ಸ್ವರಗಳ ನಡುವೆ 'ವ' ಕಾರವು ನಿತ್ಯವಾಗಿರುತ್ತದೆ. ಅವರ್ಗೀಯ ಹಾಗೂ ಅನುನಾಸಿಕಗಳಿಗೆ ಪದಗಳಲ್ಲಿ ಕೆಲವು ಕಡೆ 'ಪ' ಕಾರವು ಬಂದರೆ ಮತ್ತೆ ಕೆಲವು ಕಡೆ 'ವ' ಕಾರವು ಬರುವುದುಂಟು.ಇಂಥ ಸಂದರ್ಭದಲ್ಲಿ ಅದು ವರ್ತಮಾನವೇ ಇಲ್ಲ ಭವಿಷ್ಯತ್ತೇ ಎಂದು ನಿರ್ಧರಿಸಲು ಕಷ್ಟ. ಆ(ಗು), ಪೋ (ಗು) ಮೊದಲಾದ ಧಾತುಗಳಲ್ಲಿ ದ್ವಿತ್ವ ಪಕಾರವು ನಿತ್ಯವಾಗಿರುವುದು- ಸೋಜಿಗ.

ಉದಾ : ಪೋಗು - ಪೋ + ದಪ - ಪೋಪ - ಪೋವ. ದ್ವಿತ್ವ ಲೋಪವಾಗಿ ಪ ಕಾರ ಹಾಗೂ ವ ಕಾರ ಬಂದಾಗ ವರ್ತಮಾನ ಹಾಗೂ ಭವಿಷ್ಯತ್ ಕ್ರಿಯೆಗಳ ನಿರ್ದಿಷ್ಟ ಕಾಲ ಅಗೋಚರ.

ಬಹುವಚನ ಪ್ರತ್ಯಯ - ಅರ್ ಬಗ್ಗೆ

ಅಪ್ಪ ಅರ್ - ಅಪ್ಪರ್ - ಅಪ್ಪಾನ್ (ಏಕವಚನ)

ಎನ್ - ಕೊಳ್ + ವ + ಎನ್ - ಕೊಳ್ವನ್ - ಕೊಳ್ವೇನ್, ಉಣ್ವೋರುಂ, ಕೊಳ್, ನಿಲ್ - ಧಾತುಗಳಿಗೆ 'ವ' ಸೇರುವುದು. ಕೆಲವು ಕಡೆ 'ಪ' ಸೇರುವುದು. ಇಂಥ ಕಡೆ ಕಾಲ ನಿರ್ಧಾರ ಕಷ್ಟ. ಕೊಳ್ವೊನ್ - ಪ ಕಾರ.

**ವಚನಗಳು :** ನಾಗವರ್ಮನು ಮುಂದಿನ ೨ ಸೂತ್ರಗಳಲ್ಲಿ ಕ್ರಿಯಾ ವಚನಗಳನ್ನು ಕುರಿತು ಬಿತ್ತರಿಸಿದ್ದಾನೆ. "ಒಂದನ್ನು ಕುರಿತು ಹೇಳುವುದಾದರೆ ಏಕ ವಚನ"

ಪ್ರ.ಪ್ರಕ್ಕೆ ಉದಾ : ೧. ಆತನೊರ್ವನ್ ಮಾಡಿದಂ- ಆತಂ + ಒರ್ವಂ - ಆತನೊರ್ವ

ಆತನೊರ್ವ +ಅನೆ - ಆತನೊರ್ವನೆ ಆತನೊರ್ಪನೆ ಮಾಡಿದಂ, ಆತನೊರ್ಪನೆ ಮಾಡುವಂ.

ಮ.ಪು.ಕ್ಕೆ ಉದಾ : ೨. ನೀನೊರ್ವೆ ಮಾಡಿವಯ್ - ನೀನ್ + ಒರ್ವ -
ನೀನೊರ್ವನೆ
ನೀನೊರ್ವನೆ ಮಾಡಿದಪಯ್
ನೀನೊರ್ವನೆ ಮಾಡುವಯ್

ಉ.ಪು.ಕ್ಕೆ ಉದಾ : ೩. ಆನೊರ್ವನೆ ಮಾಡಿದೆಂ
ಆನೊರ್ವನೆ ಮಾಡಿದಪೆಂ
ಆನೊರ್ವನೆ ಮಾಡುವೆಂ

"ದ್ವಿತ್ವ ಹಾಗೂ ಬಹುವಚನವನ್ನು ಕುರಿತು ಹೇಳುವುದು ಬಹುವಚನವೇ ಆಗಿರುತ್ತದೆ."

**ಬಹುವಚನಕ್ಕೆ:**

ಪ್ರ.ಪು.ಕ್ಕೆ ಉದಾ : ೧. ಅವರ್ ಮಾಡಿದರ್
ಅವರ್ ಮಾಡಿದಪರ್
ಅವರ್ ಮಾಡುವರ್

ಮ.ಪು.ಕ್ಕೆ ಉದಾ : ೨. ನೀಮ್ ಮಾಡಿದಿರ್
ನೀಮ್ ಮಾಡಿದಪಿರ್
ನೀಮ್ ಮಾಡುವಿರ್

ಉ.ಪು.ಕ್ಕೆ ಉದಾ : ೩. ಆಂ ಮಾಡಿದೆವು
ಆಂ ಮಾಡಿದಪೆವು
ಆಂ ಮಾಡುವೆವು

ನೀನ್, ಆನ್, ತಾನ್ - ಎಂಬಿವು ಏಕವಚನದ ಸರ್ವನಾಮಗಳು. ಅವುಗಳಿಗೆ ಬಹುವಚನಗಳು ನೀಮ್, ಆಮ್, ತಾಮ್ - ಎಂಬಿವು. ಏಕವಚನದಲ್ಲಿ ಎನ್, ಅಯ್, ಅಮ್ ಹತ್ತಿದರೆ ಬಹುವಚನಗಳಲ್ಲಿ ಎವು, ಇರ್, ಅರ್ ಹತ್ತುವುವು. ಈ ಏಕವಚನ ಮತ್ತು ಬಹುವಚನ ಕ್ರಿಯಾ ಪದಗಳ ಅರ್ಥ ವಿಶ್ಲೇಷಣೆಗೆ ಈ ಕೆಳಗಿನ ಎರಡು ಸೂತ್ರಗಳನ್ನು ಬಳಸಿಕೊಳ್ಳಲಾಗಿದೆ.

"ಏಕಸ್ಮಿನ್ನೇಕ ವಚನಂ" (ಸೂತ್ರ ೨೦೩)

"ದ್ವಿತ್ವ ಬಹುತ್ವಯೋರ್ದನ್ಯತ್" (ಸೂತ್ರ ೨೦೪)

ಉದು ; ಉವು ಪ್ರತ್ಯಯಗಳು : : ನಪುಂಸಕಲಿಂಗ ಪ್ರಥಮೈಕವಚನ ಮತ್ತು ಬಹುವಚನಗಳಲ್ಲಿ ಯಥಾಕ್ರಮವಾಗಿ ಅಮ್, ಅರ್‌ಗಳಿಗೆ ಆದೇಶವಾಗಿ ಉದು, ಉವು ಬರುವುದಾಗಿ ಮುಂದಿನ ಸೂತ್ರದಲ್ಲಿ ತಿಳಿಸಲಾಗಿದೆ. ಅಲ್ಲದೆ ನಪುಂಸಕ ಲಿಂಗದ ಭಾವಾರ್ಥದಲ್ಲಿಯೂ ಉದು, ಉವು ಬರುವುವು.

"ಉದು, ಉವು ನವೆ ಪ್ರಥಮಸ್ಯ" (ಸೂತ್ರ ೨೦೫)

"ಭಾವೇಚ" (ಸೂತ್ರ ೨೦೬)

ಅದು ಉದುವಿಗೆ : : ಆದುದು- ಆ (ಗು) + ಅದು > ಆ + ಉದು>ಆದುದು
ಆದಪುದು, ಅಪ್ಪುದು (ವರ್ತ) ಭವಿಷ್ಯತ್ ಕಾಲಗಳಲ್ಲಿ
ಊದಿದುದು.

ಊದಿಪುದು, ಉಪ್ಪುದು.

**ಬಹುವಚನಕ್ಕೆ ಅವು, ಉವುಗೆ :**

ಆದುವು, ಆದಪುವು, ಅಪ್ಪುವು (ಮೂರು ಪುರುಷಗಳಲ್ಲಿ)

ಏಕ, ಬಹುವಚನಗಳಲ್ಲಿ 'ದ್ವಿತ್ವ' ಬಂದಿದೆ. ಅಂತೆ ನೆಗಟ್ಟುದು, ಕೂಗಿರ್ದುದು ನೆಗಟ್ಟುವು, ಕೂಗಿದುವು.

ಪ್ರಯೋಗ : : ೧. ಊದುದಿದು ತಣ್ಣೆಲರ್ (ಕಾ.ಲೋ. ೩೯೨)

೨. ನೆಗಟ್ಟುದು ಪದ್ಮಾಮೋದಂ (ಕಾ.ಲೋ. ೩೯೨)

೩. ಕೂಗಿದುವು ತಾಮ್ರಚೂಡ ಕುಳಂಗಳ್ (ಕಾ.ಲೋ. ೩೯೨)

ನೆಗಟ್ + (ಧಾತು) ಅದು = ನೆಗಟ್ + ಉದು - ನೆಗಟ್ಟುದು.

೨. ಭಾವಾರ್ಥದಲ್ಲಿಯೂ ಅದು, ಅವುಗಳಿಗೆ ಉದು, ಉವು ಬರುವುವು.

ಉದಾಹರಣೆ : ಇರ್ (ಧಾತು) + ಅದು (-ಉದು)- ಇರುಉದು - ಇರುವುದು -ಇರ್ದುದು (ದ್ವಿತ್ವ)

ಇರ್ (ದಾತು) + ಅವು (-ಉವು)=ಇರುಉವು-ಇರುವುವು-ಇರ್ದುವು

ಮಾಡು>ಮಾಟ್ + ಅದು = ಮಾಟ್ಟುದು- (ಉದು) ಮಾಟ್ಟುದು

ಮಾಡು>ಮಾಟ್ + ಅವು = ಮಾಟ್ - ಉವು-ಮಾಟ್ಟುವು

ಅಂತೆ ಕೂರ್ದುದು, ಕೂರ್ದುವು, ಬರ್ದುದು, ಬರ್ದುವು, ನೋಡಿದುದು, ನೋಡಿದುವು, ಬೇಡಿದುದು, ಬೇಡಿದುವು - ಎಂದು ತಿಳಿಯಬೇಕು. ನೋಡಿದುದು - ನೋಟ್ಟುದು. ನೋಡು ಎಂಬೀ ಧಾತುವಿನಲ್ಲಿ ಡ ಕಾರವನ್ನು ಕಳೆದುಕೊಂಡು ಟವನ್ನು ಪಡೆಯುವುದು. ಆಗ ನೋಟ್ - ನೋಟ್ಟಿ ಎಂದಾಗುವುದು. ಅಂತೆ ಮಾಟ್ಟಿ, ಬೇಟ್ಟಿ, ಕೊಟ್ಟಿ, ನೋಟ್ಟಿ - ಎಂಬಂತೆ 'ಡ' ಕಾರಕ್ಕೆ 'ಟ' ಅದೇ ಆದೇಶವಾಗುವುದು. ಅಂತೆಯೇ ಕೂರ್, ಬರ್, ಧಾತುಗಳು, ದಕಾರವನ್ನು ಪಡೆಯುವುವು. ಕೆಲವೊಮ್ಮೆ ದಕಾರಕ್ಕೆ ದ್ವಿತ್ವವು ಪ್ರಾಪ್ತಿಸುವುದು.

ಅದು-ಉದು ; ಅವು-ಉವು ಎಂಬಿವು ನಪುಂಸಕಲಿಂಗ ಏಕವಚನ ; ಬಹುವಚನ ಸರ್ವನಾಮಗಳೇ. ಭಾವಾರ್ಥದಲ್ಲಿಯೂ ಬಳಕೆಯಾಗುತ್ತದೆ. ಕನ್ನಡ - ತೆಲುಗು ಭಾಷೆಗಳ ಸರ್ವನಾಮಗಳಲ್ಲಿ ಹೆಚ್ಚು ವ್ಯತ್ಯಾಸವಿಲ್ಲ.

| **ಕನ್ನಡ** | **ತೆಲುಗು** |
|---|---|
| ಅದು (ದು) | ಅದಿ (ದಿ) |
| ಅವು (ವು) | ಅವಿ (ವಿ) |

'ದ್' ಮತ್ತು 'ವ್' ಎಂಬೀ ಅಕ್ಷರಗಳೇ ನಪುಂಸಕಲಿಂಗ ಏಕ ಬಹುವಚನಗಳನ್ನು ಸೂಚಿಸುವ ಎರಡೂ ಭಾಷೆಗಳಲ್ಲಿ 'ಲಿಂಗ' ಸೂಚಿ ಪ್ರತ್ಯಯವೆನ್ನಬಹುದು. 'ನ್' ಹಾಗೂ 'ಳ್' ಗಳು ಪುಲ್ಲಿಂಗ ಸ್ತ್ರೀಲಿಂಗ ಸೂಚಿ ಪ್ರತ್ಯಯಗಳಂತೆ 'ದ್' ನಪುಂಸಕಲಿಂಗ ಸೂಚಿಯೇ. ಅಂತೆ ಉಳಿದ ಸರ್ವನಾಮಗಳಲ್ಲೂ ಈ ಸಾಮಿಪ್ಯವನ್ನು ನೋಡಬಹುದು.

| ಕನ್ನಡ | ಸಾಮಿಪ್ಯ | ತೆಲುಗು |
|---|---|---|
| ನಾನ್-ಆಂ (ಅನ್) | ನಾ | ನೇನು (ಏನು ಮೂಲ) |
| ನಾವು-ನಾಂ (ಆಮ್) | | ಮೇಮು |
| ನೀನು-ನೀಂ (ನೀನ್) | ನೀ | ನೀವು (ನೀನು) |
| ನೀವು-ನೀಂ (ನೀಮ್) | | ಮೀರು |
| ಅದು, ಅವು, ಉದು, ಉವು | ದ,ವ | ಅದಿ, ಅವಿ |

ಮೇಲಿನ ಸರ್ವನಾಮಗಳನ್ನು ಎರಡೂ ಭಾಷೆಯ ದೃಷ್ಟಿಯಿಂದ ಪರಿಶೀಲಿಸಿದರೆ ಒಂದಕ್ಕೊಂದು ಸಾಮಿಪ್ಯ ಪಡೆದಿವೆ. ಹೆಚ್ಚು ವ್ಯತ್ಯಾಸವಿಲ್ಲ. ಮೂಲತಃ ಇವು ಸ್ವತಂತ್ರವಾದ ಶಬ್ದಗಳಾಗಿರಬೇಕು. ಉತ್ತಮ ಪುರುಷದಲ್ಲಿ 'ನಾ', ಮಧ್ಯಮ ಪುರುಷದಲ್ಲಿ 'ನೀ', ಪ್ರಥಮ ಪುರುಷದಲ್ಲಿ 'ದ್' ಹೆಚ್ಚು ಸಾಮಿಪ್ಯವಾಗಿದ್ದು, ಅವು ಒಂದು ಕಾಲಕ್ಕೆ ಸ್ವತಂತ್ರ ಶಬ್ದಗಳು ಆಗಿದ್ದವೆಂದು ತಿಳಿಯಬಹುದು. ಈಗ ಅವು ಸರ್ವನಾಮಗಳೂ ಹೌದು ; ಆ.ವಿ. ಪ್ರತ್ಯಯಗಳೂ ಹೌದು, ಕ್ರಿಯಾವಾಚಿಗಳೂ ಕೂಡ.

ನಾಗವರ್ಮನ ಕ.ಭಾ.ಭೂ.ದ ಸೂತ್ರ ೨೦೫ ಮತ್ತು ೨೦೬ಗಳು ಕೇಶಿರಾಜನ ಶ.ಮ.ದ. ಸೂತ್ರ ೨೩೬ ಮತ್ತು ೨೩೭ಕ್ಕೂ, ಭಟ್ಟಾಕಳಂಕನ ಶ.ಶಾ.ನದ ಸೂತ್ರ ೪೫೪ ಮತ್ತು ೪೫೫ಕ್ಕೂ ಸಂವಾದಿಯಾಗಿವೆ.

ಕೇಶಿರಾಜನು ಮಾತ್ರ 'ಉದು' ಪ್ರತ್ಯಯ ಭಾವಾರ್ಥದಲ್ಲಿ ಮಾತ್ರವಲ್ಲದೆ ವಿಧ್ಯರ್ಥದಲ್ಲಿಯೂ ಹತ್ತುವುದಾಗಿ ವಿವರಿಸಿದ್ದಾನೆ. ನಾಗವರ್ಮನಲ್ಲಿ ಈ ಅಭಿಪ್ರಾಯವಿಲ್ಲ. ಕೇಶಿರಾಜನು ವಿಧ್ಯರ್ಥಕ್ಕೆ ಕೊಡುವ ಉದಾಹರಣೆಗಳೆಂದರೆ-

ರಕ್ಷಿಪುದೆನ್ನಂ ; ಅವಧರಿಪುದು ಬಿನ್ನಪಂ - ಇತ್ಯಾದಿ

**೨. ತು-ತ್ತು:** "ತದೇಕ ವಚನಸ್ಯ ತುತ್ತೂ ವಾನ್ಯೇಷಾಂ" (ಸೂತ್ರ ೨೦೭)

"ನಪುಂಸಕ ಲಿಂಗ ಏಕವಚನದಲ್ಲಿ ತು, ತ್ತು ಬರುವುವು; ಉದುವಿನ ಪರವಾಗಿ ಕೆಲವೊಮ್ಮೆ ವಿಕಲ್ಪದಿಂದ ಉದು, ತು ಅಥವಾ 'ತ್ತು' ಆಗುವುದು.

ಉದಾಹರಣೆಗೆ : : ೧. ಕಿಡು (ಧಾತು) + ಉದು - ಕೆಡುದು-ಕೆಟ್ಟದು-
ಕೆಟ್ಟಿತು-ಕೆಟ್ಟಿತ್ತು

**ಪ್ರಯೋಗ** : ಕೆಟ್ಟಿತ್ತು ಭಾರತಂ (ಕಾವ್ಯಾ. ೩೯೬)

ಅಂತೆ ಉಳಿದ ಉದಾಹರಣೆಗಳಾದ ಪುಟ್ಟಿತು, ಪುಟ್ಟಿತ್ತು, ಓಡಿತು, ಓಡಿತ್ತು -ಇತ್ಯಾದಿ.

೨. ಸತ್ತು-ಸಾ ನಯ (ಧಾತು) ಉದು-ಸಾಉದು-ಸತ್ತಿದು-ಸತ್ತಿತು-ಸತ್ತಿತ್ತು ಆದತು; ಆದತ್ತು; ಪೋದತು; ಪೋದತ್ತು, ಹೀಗೆ ದ-ತ-ತ್ತ ಕಾರಗಳು ಆದೇಶವಾಗಿ ಬರುವುದನ್ನು ಮೇಲಿನ ಉದಾಹರಣೆಗಳಲ್ಲಿ ಕಾಣುತ್ತೇವೆ.

ದ್ರಾವಿಡ ಭಾಷೆಗಳಲ್ಲಿ 'ದ' ಕಾರವೊಂದೇ ಭೂತಕಾಲದ ಪ್ರತ್ಯಯವೆಂದು ತಿಳಿಯಲಾಗದು. 'ದ' ಕಾರಕ್ಕೆ ಪರ್ಯಾಯವಾಗಿ ತ,ಇ,ಎ ಕಾರಗಳೂ ಪ್ರತ್ಯಯಗಳಾಗಿದ್ದು ಇವುಗಳ ಮುಂದೆ ಪುರುಷವಾಚಕ ಆ.ವಿ.ಪ್ರ.ಗಳು ಬಂದಿರುವುದನ್ನು ಕಾಣುತ್ತೇವೆ. ಕೇಶಿರಾಜ ನಿರೂಪಿಸಿರುವ ಭೂತಕಾಲದ ಪ್ರತ್ಯಯ 'ದ' ಕಾರವೊಂದೇ ಅಲ್ಲದೆ ಇನ್ನೂ ಬೇರೆ ಪ್ರತ್ಯಯಗಳಿವೆ ಎಂದು ಮೇಲಿನ ಉದಾಹರಣೆಗಳಿಂದ ತಿಳಿಯಬಹುದು.

ಉದಾ : ಉಣ್ + ಡ ಉಂಡ 'ಡ' ಪ್ರತ್ಯಯ

ಓ -ಒತಂ; ಸಾಸಯ್-ಸತ್ತಂ. 'ತ' ಕಾರ ಪ್ರತ್ಯಯ

ಕೆಟ್ಟಿತ್ತು, ಪುಟ್ಟಿತ್ತು, ಓಡಿತ್ತು, ಮೆಟ್ಟಿತ್ತು, ತಟ್ಟಿತ್ತು -ಎಂಬೀ ಉದಾಹರಣೆಗಳಲ್ಲಿ 'ಡ' ಕಾರವೊಂದೇ ಸಾರ್ವತ್ರಿಕ ಪ್ರತ್ಯಯವೆಂದು ತಿಳಿದುಬರುತ್ತದೆ. ಇಲ್ಲಿ 'ದ' ಕಾರವಲ್ಲ.

ಕೆಟ್ಟಂ-ಕಿಡು (ಧಾತು)-ಕಿಡು + ದಂ-ಕೆಟ್ಟಂ

ಪೋಗು-ಪುಗು (ಧಾತು)-ಪುಗು + ದಂ-ಪುಗುತಂ-ಪೊಕ್ಕಂ

ಸೋಲ್-ಸೋಲು (ಧಾತು)-ಸೋಲ್ + ದಂ-ಸೋಲ್ತಂ-ಸೋತಂ

ಕಿಡು, ಕೊಡು, ಮಾಡು, ಬೇಡು, ಒಗು, ಪುಗು, ಆಗು, ಉಣ್, ಕಾಣ್, ಎಯ್, ಕೈಯ್, ಗೆಯ್, ಪೊಯ್, ತರ್, ಇರ್, ಬರ್, ನಿಲ್, ಗೆಲ್,

ಸಲ್, ಕೊಲ್, ಆಳ್, ಕೂಳ್, ತಾಳ್, ಆಸ್, ಎಸ್ -ಎಂಬಿವು ಮೂಲ ಧಾತುಗಳು. ಇವುಗಳನ್ನು ಪ್ರಾಚೀನ ಶಾಸನಗಳಲ್ಲಿ ಕಾಣಬಹುದು.

ಪುಗು, ಮಿಗು - ಧಾತುಗಳಿಗೆ ಪೊಕ್ಕಂ, ಮಿಕ್ಕಂ ಎಂದಾಗುವುವು. 'ಸಾ/ಸಯ್ ಧಾತುವಿಗೆ 'ತ್ತ' ಸೇರಿದರೆ 'ಸತ್ತಂ' ಎಂದಾಗುವುದು. ಅಂತೆ ಇತ್ತಂ, ನಿತ್ತಂ.

ಕ್ರಿ.ಶ. ೬,೭,೮ನೆಯ ಶತಮಾನದ ಪ್ರಾಚೀನ ಶಾಸನಗಳಲ್ಲಿ ಇತ್ತೂದಾನ್, ನಿತ್ತೋರ್, ಸತ್ತರ್, ಸತ್ತಾರ್, ಇತ್ತಾರ್ -ಎಂಬೀ ಪ್ರಯೋಗಗಳನ್ನು ಕಾಣಬಹುದು. ಸಾಯ್, ಆಗು, ಪೋಗು - ಎಂಬಲ್ಲಿ ಸಾ, ಆ, ಪೋ - ಎಂಬಿವುಗಳೇ ಏಕಾಕ್ಷರ ಧಾತುಗಳು. ಸಂಸ್ಕೃತ ಭಾಷೆಯಲ್ಲಿ ಇಂಥವು ಸುಮಾರು ೨೦೦ ಧಾತುಗಳಿವೆ ಎಂಬುದಾಗಿ ತಿಳಿದು ಬರುತ್ತದೆ.

ಆ.ವಿ.ಪ್ರ.ಗಳಾದ ಅಮ್, ಅರ್, ಅಯ್, ಇರ್, ಎಸ್, ಎವು - ಎಂಬಿವು ಈ ಮೊದಲೇ ತಿಳಿಸಿದಂತೆ ಲಿಂಗತ್ರಯ, ಕಾಲತ್ರಯ, ವಚನದ್ವಯಗಳಿಗೆ ಹತ್ತಿರುವುದು ಒಂದು ಗುಂಪು. ಇವು ಪ್ರಥಮ ಪುರುಷಗಳಿಗೆ ಲಿಂಗ, ವಚನ, ಭೇದವಿಲ್ಲದೆ ಹತ್ತುತ್ತವೆ ಎಂಬುದನ್ನು ನೋಡಿದ್ದಾಯಿತು.

ಇನ್ನು ಉದು, ಉವುಗಳಿಗೆ ಬದಲಾಗಿ ಬರುವ ತು, ತ್ತು ಮತ್ತು ಕುಂ, ಗುಂ ಗಳನ್ನು ಮತ್ತೊಂದು ಗುಂಪಿಗೆ ಸೇರಿಸಬಹುದು. ಈ ನಾಲ್ಕು ಪ್ರತ್ಯಯಗಳು ನಪುಂಸಕಲಿಂಗದಲ್ಲಿ ಬೇರೆ ಬೇರೆ ಅರ್ಥಗಳಿಂದ ಏಕವಚನದಲ್ಲಿ ಮಾತ್ರ ಬರುವುವು. ಅವುಗಳ ಬಗ್ಗೆ ನಾಗವರ್ಮ ಮುಂದಿನ ಸೂತ್ರಗಳಲ್ಲಿ ಹೇಳಿದ್ದಾನೆ.

೩. ಅಳ್ ಪ್ರತ್ಯಯ (ಸ್ತ್ರೀಲಿಂಗ) 'ಸ್ತ್ರೀಯಾಮಳಂತೇ' ಸೂತ್ರ (೨೦೮) "ಪ್ರಥಮ ಪುರುಷದ ಸ್ತ್ರೀಲಿಂಗ ಏಕವಚನದಲ್ಲಿ (ಕೊನೆಯಲ್ಲಿ) 'ಅಳ್' ಪ್ರತ್ಯಯ ಬರುವುದು.

ಉದಾ : ಅಜಿ + ದ + ಅಳ್ ಅಜಿದಳ್ (ಭೂತಕಾಲದ ಕ್ರಿಯೆ)

ಅಜಿ + ದಪ + ಅಳ್ ಅಜಿದಪಳ್ (ವರ್ತಮಾನ ಕಾಲದ ಕ್ರಿಯೆ)

ಅಜಿ + ವ + ಅಳ್ ಅಜಿವಳ್ (ಭವಿಷತ್ ಕಾಲದ ಕ್ರಿಯೆ)

ಅಂತೆ ಜನಿಸಿದಳ್, ಜನಿಸಿದಪಳ್, ಜನಿಸುವಳ್ - ಎಂದು ತಿಳಿಯುವುದು. ಇದೇ ಅಭಿಪ್ರಾಯವನ್ನು ಕೇಶಿರಾಜನ ಶ.ಮ.ದ. ಸೂತ್ರ ೨೩೭ರಲ್ಲಿ ಹಾಗೂ ಭಟ್ಟಾಕಳಂಕನ ಶ.ಶಾ.ದ ಸೂತ್ರ ೪೫೩ರ್ಲಲಿ ತಿಳಿಸಲಾಗಿದೆ. ಪ್ರಥಮ ಪುರುಷ ಪುಲ್ಲಿಂಗ ಏಕವಚನ 'ಅಮ್' ಆದರೆ ಸ್ತ್ರೀಲಿಂಗ 'ಅಳ್' ಎಂಬುದು ಪ್ರತ್ಯಯ.

ಈ ಅಳ್ ಸ್ತ್ರೀಲಿಂಗ ಸೂಚಿಯಾದುದರಿಂದ ಸ್ತ್ರೀಲಿಂಗ ಸರ್ವನಾಮವು ಅವ+ಳ್ ಅವಳ್ ಆಗಿದೆ.

"ಗುಂ ಕಮೌಭವಿಷ್ಯಂತ್ಯಾಃ ಸರ್ವತ್ರಃ" (ಸೂ. ೨೦೯)

"ಕುಂ, ಗುಂ ಎಂಬ ಪ್ರತ್ಯಯಗಳು ಪ್ರ.ಪು.ದ. ಭವಿಷ್ಯತ್ತಿನಲ್ಲಿ ಲಿಂಗ, ವಚನ, ಭೇದವಿಲ್ಲದೆ ಬರುವುವು." ಶ.ಮ.ದ. ದ ಸೂತ್ರ ೨೩೮ ಮತ್ತು ಶ.ಶಾ.ದ ಸೂತ್ರ ೪೬೩ ಇದನ್ನೇ ಹೇಳಿವೆ. ಉದಾ : ಮೊಱು + ಗುಂ ಮೊಱುಗುಂ : ಪ್ರಯೋಗ - ಮೊಱುಗುಂ ಆಕೆ. ಅಂತೆ ತೋಱುಗುಂ, ತೀಱುಗುಂ, ಪೇಱುಗುಂ, ತೂಱುಗುಂ - ಇತ್ಯಾದಿ ತಿಳಿಯುವುದು. (ಕಾವ್ಯಾವಲೋಕ, ಪ್ರಯೋಗ - ೩೯೮, ೩೯೯)

ಕು.ಗೆ : ಇರ್ + ಕುಂ - ಇರ್ಕುಂ (ಪುಲ್ಲಿಂಗ)

ಬರ್ + ಕುಂ - ಬರ್ಕುಂ

ಇರ್ಕುಂಗೆ ಸ್ತ್ರೀಲಿಂಗ ಮತ್ತು ನಪುಂಸಕ ಲಿಂಗಗಳಾದ ಆಕೆ, ಅದು ಪರವಾದರೆ-

ಇರ್ + ಕುಂ - ಇರ್ಕುಂ + ಆಕೆ - ಇರ್ಕುಂ ಆಕೆ

ಇರ್ + ಕುಂ - ಇರ್ಕುಂ + ಅದು - ಇರ್ಕುಂ ಅದು

"ಕುಂ.ಗುಂ ಪ್ರತ್ಯಯಗಳಲ್ಲಿ 'ಕುಂ' ಎಂಬುದನ್ನು ಸರ್ವನಾಮವೆಂದೇ ಪರಿಗಣಿಸಬೇಕೆಂಬ ತಿಳುವಳಿಕೆ ಇದು.[2] ಕಾಣ್ಗುಂ ಮತ್ತು ಬರ್ಕುಂ ಎಂಬಿವು ಕೂಡ ಭವಿಷ್ಯತ್ತನ್ನು ಸೂಚಿಸುತ್ತವೆ.

ಕಾಣ್ಗುಂ-(ನಾಳೆ) ಕಾಣ್ಗುಂ ; ಬರ್ಕುಂ-ನಾಳೆ (ಬರ್ಕುಂ)

ಪ್ರಯೋಗ - ಅಂತುಂ ಬರ್ಕುಂ (ಕಾವ್ಯಾ. ೩೯೯)

ಭಯಮಿರ್ಕುಮೆ (ಕಾವ್ಯಾ. ೩೯೯)

ಮಾತಂ ಮೊಱುಗುಮಾತಂ - ಪುಲ್ಲಿಂಗ

ಮಾತಂ ಮೊಱುಗುಮಾಕೆ - ಸ್ತ್ರೀಲಿಂಗ

ಮಾತಂ ಮೊಱುಗುಮದು - ನಪುಂಸಕಲಿಂಗ

ಕುಂ ಎಂಬ ಪ್ರತ್ಯಯವು ಹೊಸಗನ್ನಡದಲ್ಲಿ ವರ್ತಮಾನ ಹಾಗು ಭವಿಷತ್ ಕಾಲಗಳೆರಡರಲ್ಲೂ ಅರ್ಥೈಯಿಸುತ್ತದೆ.

ಉದಾ : ಆತಂ ಬರ್ಕುಂ - ಆತನು ಬರುವನು (ನಾಳೆ) ಆತನು ಬರುತ್ತಾನೆ (ವ.ಕಾ.)

ಆಕೆ ಬರ್ಕುಂ - ಆಕೆ ಬರವಳು (ನಾಳೆ) ಆಕೆ ಬರುತ್ತಾಳೆ (ವ.ಕಾ)

"ದಾದಾ ವಿಪಾಗಮೋ ಬಹುಳಂ" (ಸೂತ್ರ ೨೧೦)

"ದಕಾರವನ್ನಾದಿಯಾಗಿವುಳ್ಳ ವಿಭಕ್ತಿ ಪರವಾಗುತ್ತಿರಲು ಬಹುಳದಿಂದ ಇಕಾರಾಗಮ ಬರುವುದು" ಎಲ್ಲ ಪುರುಷಗಳಲ್ಲೂ, ಎಲ್ಲ ವಚನಗಳಲ್ಲೂ, ದ, ದಪ ಪರವಾಗಲು ಸಾಮಾನ್ಯವಾಗಿ ಇಕಾರಾಗಮ ಪ್ರಾಪ್ತಿಸುವುದು."

ದಕ್ಕೆ : ಮೆಚ್ಚು + ದ + ಅಂ-ಮೆಚ್ಚಿದಂ; ಮೆಚ್ಚಿದರ್ - ಭೂತಕಾಲ

ಮೆಚ್ಚು + ದಪ + ಅಂ - ಮೆಚ್ಚಿದಪಂ-ಮೆಚ್ಚಿದಪರ್ - ವರ್ತಮಾನಕಾಲ

ಉರ್ಚು, ಬೆರ್ಚು ಶಬ್ದಗಳಿಗೆ ಇತು ಅಥವಾ ಇತ್ತು ಆಗಮವಾಗುವುದು :

ಉರ್ಚು + ಇತು - ಉರ್ಚಿತು ; ಉರ್ಚಿತ್ತು

ಅಂತೆ ಬೆರ್ಚು + ಇತು - ಬೆರ್ಚಿತು ; ಬೆರ್ಚಿತ್ತು

ನಡೆ + ದ + ಅತು - ನಡೆದತು ; ನಡೆದತ್ತು (ಅತು ; ಅತ್ತು ಆದೇಶ)

ಅಂತೆ ಒಡೆದತ್ತು, ಪಡೆದತ್ತು, ಕಳೆದತ್ತು, ಬೆಳದತ್ತು - ಎಂಬಂತೆ ಹೇಳಕೂಡದು. ಕಾರಣ ಒಡೆ, ಪಡೆ, ಕಳೆ, ಬೆಳೆ - ಎಂಬಿವು ಧಾತುಗಳು. ಎಕಾರಂತಗಳು. ಏಕಾರಾಂತ ಧಾತುಗಳಿಗೆ ಭೂತಕಾಲದ 'ದ' ಕಾರವೇ ಬರುವುದು. ಅಲ್ಲಿ 'ಅತು' ಆಗಲಿ ಇಲ್ಲವೆ 'ಅತ್ತು' ಬರದು. ಇಕಾರವೂ ಇಲ್ಲ.

ಒಡೆ + ದ + ಅಂ - ಒಡೆದಂ

ಪಡೆ + ದ + ಅಂ - ಪಡೆದಂ, ಕಳೆದಂ, ಬೆಳೆದಂ - ಇತ್ಯಾದಿ.

ನಾಗವರ್ಮನು ಹೇಳಿರುವ ಇಕಾರಾಗಮ ಉದಾಹರಣೆಗಳನ್ನು ಗಮನಿಸಿದರೆ, ಇಕಾರಾಗಮವು ಉ ಕಾರಾಂತ ಧಾತುಗಳ ಮೇಲೆಯೇ ಬಂದಿದೆ.

ಉದಾ : ಓದು + ದ + ಅಂ - ಓದಿದಂ (ಇಕಾರ)

ಓಡು + ದ + ಅಂ - ಓಡಿದಂ (ಇಕಾರ)

ಓಡಿದಂ, ಕೂಡಿದಂ, ನೋಡಿದಂ ಎಂಬಲ್ಲಿ ಇಕಾರಾಗಮ ಇದೆ.
ಓಡು, ಕೂಡು, ನೋಡು - ಎಂಬಿವುಗಳು ಉಕಾರಾಂತ
’ ಕಾರ ಪಡೆದಾಗ ಇಕಾರವು ಬರುವುದು.

ವ ವಕಾರಾದಿಗಳಿಗೆ ವಿಭಕ್ತಿಗಳು ಪರವಾಗಲು ಅಲ್ಲಿಯೂ
ಎತ್ತು ಉಕಾರಾಗಮಗಳೆರಡೂ ಬರುವುದುಂಟು.

ವಂ - ಜಡಿ (ಧಾತು) + ವ + ಅಮ್ (ಭ. ಕಾಲ) - ಜಡಿವಂ
ಇದೆ. ಅಂತೆಯೇ ನುಡಿವಂ, ಜಡಿ, ನುಡಿ, ಬಡಿ, ಕುಡಿ -
ಲತಃ ಇಕಾರಾಂತ ಧಾತುಗಳು.

ಕೊಡು + ವ + ಅಮ್ ಕೊಡುವಂ; ಕೊಡುವರ್

ಮಾಡು + ವ + ಅಮ್ ಮಾಡುವಂ, ಮಾಡುವರ್

ಬೇಡು + ವ + ಅಂ - ಬೇಟ್ಟಿಂ; ಬೇಟ್ಟಿರ್

ೞ ಕೂಡು, ಪೂಡು, ಮಾಡು, ಓಡು, ಪಾಡು, ಎಂಬಿವು
ಳು.

ವ + ಅಂ=ಸೆಳವಂ; ಸೆಳೆವರ್. ಬೆಳೆವಂ, ಎಱೆವಂ ಇನ್ನಿತರ
ಳು.

ಸೂಚವೇ ॥ ೨೧೧ ॥ ಎಂಬಲ್ಲಿ ಇದನ್ನೂ ತಿಳಿಸಿರುತ್ತಾನೆ.

ತ ಧಾತುಗಳಾದ ಸೆಳೆ, ಬೆಳೆ, ಎಱೆ -ಗಳಲ್ಲಿ ಆಗಮವಿಲ್ಲ.

ವ + ಅಂ - ಸೆಳೆವಂ (ಯಾವ ಆಗಮ ಇಲ್ಲ)

- ವ + ಅಂ - ಬೆಳೆವಂ (ಯಾವ ಆಗಮ ಇಲ್ಲ)

ವ + ಅಂ - ಎವಂ (ಯಾವ ಆಗಮ ಇಲ್ಲ)

ಉಕಾರ, ಎಕರಾಂತ ಶಬ್ದಗಳ (ಅವು ಶಬ್ದಗಳಲ್ಲ, ಧಾತುಗಳು)
ಷ್ಯತ್ ಕಾಲದ ವ ಕಾರವು ಬರಲು ಇ, ಉ, ಎಕಾರಗಳೇ
ಹೇಳಿರುವುದು ಅಷ್ಟು ಸಮಂಜಸವಲ್ಲ.[1]

ವ ಪ : "ರಟೌಭ್ಯಾಂ ವಸ್ಯ ಪಃ" (ಸೂತ್ರ ೨೧೨)

"ಗಳಿಗೆ ಪರವಾದ 'ವ' ಕಾರಕ್ಕೆ ಪಕಾರ ಆದೇಶವಾಗುವುದು."

ಉದಾ : ಬರ್ಪಂ - ಬರ್ (ಧಾತು) + ಪ + ಅಮ್ (ಏ.ವ.), ವಕಾರಕ್ಕೆ ಪಕಾರಾದೇಶವಾಗಿದೆ. ಅಂತೆ ಉಳಿದ ಉದಾಹರಣೆಗಳಾದ ಇರ್ಪಂ, ಇರ್ಪರ್, ಸೋಲ್ಪಂ, ಸೋಲ್ಪರ್, ಬೇಳ್ಪಂ, ಬೇಳ್ಪರ್ - ಇತ್ಯಾದಿ. ಓಕಾರಕ್ಕೆ ಪರವಾದ ವಕಾರಕ್ಕೂ ಕೂಡ ಪರಾರಾದೇಶವಾಗುವುದು.

ಉದಾ : ಓಪಂ -ಓಪ (ಧಾತು) + ವ + ಅಂ ಓಪರ್-ಬಹುವಚನ

-ಓೀಗೆ ವತ್ವ, ಪತ್ವಗಳು ಭವಿಷ್ಯತ್ ಕಾಲದ ಪ್ರತ್ಯಯಗಳು. ಇವುಗಳನ್ನು ದಕ್ಷಿಣೋತ್ತರ ಮಾರ್ಗಗಳಲ್ಲಿ ನೋಡಬಹುದು. ಕೆಲವೊಮ್ಮೆ ಉತ್ತರೋತ್ತರ ಮಾರ್ಗಗಳಲ್ಲೂ ಕಾಣಬಹುದು.

ದಕ್ಷಿಣಮಾರ್ಗ - ಸೋಲ್ಪಂ, ಬೇಳ್ಪಂ - ಇತ್ಯಾದಿ.

ಉತ್ತರಮಾರ್ಗ - ಸೋಡುವೆನ್, ಬೇಡುವೆನ್ - ಇತ್ಯಾದಿ.

ಉತ್ತರೋತ್ತರಮಾರ್ಗ - ತರಿಪ್ಪೆನ್, ಬಿರಿಪ್ಪೆನ್ - ಇತ್ಯಾದಿ. ಇಲ್ಲಿ; ಪಕಾರ

ದ್ವಿತ್ವವನ್ನು ಪಡೆದಿದೆ. ಈ ದಕ್ಷಿಣೋತ್ತರ ಮಾರ್ಗಗಳಲ್ಲಿ ವಿದ್ವಾಂಸರಲ್ಲಿ ಭಿನ್ನಾಭಿಪ್ರಾಯಗಳಿವೆ.

ಮಾಳ್ಪಂ, ಬೇಳ್ಪಂ, ನೋಳ್ಪಂ -ಎಂಬಿವು ಉತ್ತಮ ಪುರುಷ ಬಹುವಚನದಲ್ಲಿ ವಿಧಿ ಮೊದಲಾದ ಅರ್ಥಗಳಲ್ಲಿ ಕಾಣಬಹುದೆಂದು ನಾಗವರ್ಮ ಸೂ. ೨೨೦ರಲ್ಲಿ ಹೇಳಿದ್ದಾನೆ.

ಇಸು ಪ್ರತ್ಯಯ : : "ಧಾತೋರನೇಕಾಕ್ಷರಾದಿಸುಃ"- (ಸೂ. ೨೧೩)

"ಅನೇಕಾಕ್ಷರ ಧಾತುಗಳಿಗೆ ವಿಭಕ್ತಿ ಪರವಾಗಲು ನಡುವೆ ಇಸು ಪ್ರತ್ಯಯ ಬರುವುದು."

ಸೊಗ + ಇಸು - ಸೊಗಯಿಸು + ಗುಂ ಸೊಗಯಿಸಗುಂ (ಗುಂ ಪ್ರತ್ಯಯ)

ಸೊಗ + ಇಸು - ಸೊಗಯಿಸು + ದ + ಅಂ ಸೊಗಯಿಸಿದಂ

ಅಂತೆ ಸ್ತ್ರೀಲಿಂಗದಲ್ಲಿ ಸೊಗಯಿಸಿದಳ್, ಬಹುವಚನದಲ್ಲಿ ಸೊಗಯಿಸಿದರ್ ಎಂದಾಗುವುವು.

ರಾಗ, ರಂಜ, ಭೋಗ, ಭಾವ, ಈ ಧಾತುಗಳಿಗೆ 'ಇಸು' ಪ್ರತ್ಯಯ ಪರವಾಗಲು, ರಾಗಿಸು, ರಂಜಿಸು, ಭೋಗಿಸು, ಭಾವಿಸು -ಎಂದಾಗಿ ಅನಂತರ ವಿವಿಧ ವಿಭಕ್ತಿ ಪ್ರತ್ಯಯಗಳನ್ನು ಪಡೆಯಲು ಅರ್ಹತೆಯನ್ನು ಪಡೆಯುತ್ತವೆ. ನಾಗವರ್ಮನ ದೃಷ್ಟಿಯಲ್ಲಿ ಇವೆಲ್ಲವೂ ಕ್ರಿಯಾ ಪ್ರಕೃತಿಗಳೇ.

ರಾಗಿಸು + ದ + ಅಂ - ರಾಗಿಸಿದಂ, ರಾಗಿಸಿದಪಂ, ರಾಗಿಸುವಂ ಎಂದು ಆಗುವುವು. ಮುಂದಿನ ಸೂತ್ರದಲ್ಲಿ ನಾಗವರ್ಮ ಇಸು ಪ್ರತ್ಯಯವನ್ನು ಮುಂದುವರಿಸಿದ್ದಾನೆ. ಕೇಶಿರಾಜನ ಸಂಧಿಪ್ರಕರಣದಲ್ಲಿ ಇಸು ಪ್ರತ್ಯಯವನ್ನು ಕುರಿತು ಹೇಳುವಾಗ- ಸದಮಳ ಸಂಸ್ಕೃತ ಕರ್ಣಾಟಕದಂತ ಪ್ರಕೃತಿಗಳಿಗೆ ಇಸು ಪ್ರತ್ಯಯಮ್ -ಎಂದಿದ್ದಾನೆ (ಶ.ಮ.ದ. ಸೂ. ೬೪). ಸಂಸ್ಕೃತ ಮತ್ತು ಕರ್ನಾಟಕ ಭಾಷೆಗಳಲ್ಲಿ ಅಕಾರಾಂತ ಶಬ್ದಗಳಲ್ಲಿ ಇಸು ಪ್ರತ್ಯಯ ಬರುತ್ತದೆ ಎಂದು, ಹಾಗೆ ಪ್ರತ್ಯಯ ಬಂದಾಗ ಮಧ್ಯದಲ್ಲಿ 'ಯ' ಕಾರಾಗಮವಾಗುವುದಾಗಿ ಸಂಧಿಯಲ್ಲಿ ಇಸು ಪ್ರತ್ಯಯವನ್ನು ವಿಧಿಸಿದ್ದಾನೆ.

ಉದಾ : ಶುದ್ಧ + ಇಸು + ದಂ - ಶುದ್ಧಯಿಸಿದಂ. ಅಂತೆ ತಾರಯಿಸಿದಂ, ಓಲಯಿಸಿದಂ, ಮೇಳಯಿಸಿದಂ.

"ಪ್ರಯೋಜಕೇಚ" (ಸೂತ್ರ ೨೧೪)

ಪ್ರಯೋಜನಾರ್ಥದಲ್ಲಿ ಕೂಡ ಇಸು ಪ್ರತ್ಯಯ ಬರುತ್ತದೆ. ಉದಾ : ಮೆಚ್ಚು+ಇಸು+ದ+ಅಂ ಮೆಚ್ಚಿಸಿದಂ. ಮೆಚ್ಚಿಸು, ಪಾಡಿಸು, ಕಣ್ಗೊಳಿಸು - ಇತ್ಯಾದಿಗಳು ಪ್ರಯೋಜಕಾರ್ಥಗಳ ಶಬ್ದಗಳು. ಪ್ರಯೋಜಕಾರ್ಥವೆಂದರೆ ಪ್ರೇರಣಾರ್ಥವೆಂದೇ ತಿಳಿಯಬೇಕು. ಮೆಚ್ಚಿಸುವುದು, ಪಾಡಿಸುವುದು ಬೇರೆಯವರನ್ನು ಪ್ರೇರೇಪಿಸುತ್ತಿರುವುದರಿಂದ ಇವುಗಳಿಗೆ ಪ್ರೇರಣಾರ್ಥ ಅಥವಾ ಪ್ರಯೋಜನಾರ್ಥ ಎಂದು ಹೆಸರು. ನಾಗವರ್ಮನು ಕೊಟ್ಟಿರುವ ಉದಾ : ಪಾಡಿಸಿದಂ, ಕಣ್ಗೊಳಿಸಿದಂ - ಇತ್ಯಾದಿ. ಆಡಿಸಿದಂ, ಪಾಡಿಸಿದಂ, ಸಾರಿಸಿದಂ, ತೋರಿಸಿದಂ - ಇವು ಕಾವ್ಯಾವಲೋಕನದ ಉದಾಹರಣೆಗಳು. ಮುಂದಿನ ಸೂತ್ರ ೨೨೦ ಕೂಡ ಇಸು ಪ್ರತ್ಯಯಕ್ಕೆ ಸಂಬಂಧಿಸಿದ್ದು, ಅದನ್ನು ಇಲ್ಲಿಯೇ ತಿಳಿಸುತ್ತಾನೆ.

"ಹೇತಂಪಿಸುಃ" (ಸೂತ್ರ ೨೨೦)

"ಹೇತು (ಕಾರಣ) ವಿನ ಧಾತುಗಳಿಗೆ ಇಸು ಪ್ರತ್ಯಯ ಬರುವುದು"

ಉದಾಹರಣೆ : ಮಾಡಿಸಿದಂ - ಮಾಡು + ಇಸು + ದಂ - ಮಾಡಿಸಿದಂ 'ಮಾಡಿಸು' ಎಂಬುದು ಹೇತು. ಅಂತೆ ಪಾಡಿಸು, ಇರಿಸು, ಬರಿಸು, ಬಿಡಿಸು, ತರಿಸು - ಎಂಬಿವು ಕೂಡ ಇಸು ಪ್ರತ್ಯಯವನ್ನು ಪಡೆದಿವೆ.

ನಾಗವರ್ಮನು ಇಸು ಪ್ರತ್ಯಯಕ್ಕಾಗಿ ಸೂತ್ರ ೨೧೩, ೨೧೪, ೨೨೦ -ಮೂರನ್ನು ಬಳಸಿಕೊಂಡಿದ್ದಾನೆ. ಅವುಗಳ ಸಾರಾಂಶವನ್ನು ಹೀಗೆ ವಿಶದೀಕರಿಸಬಹುದು :

೧. ಅನೇಕಾಕ್ಷರ ಧಾತುಗಳಿಗೆ - ಸೊಗಯಿಸಿದಂ ; ಸೊಗಯಿಸಿದರ್

೨. ಪ್ರಯೋಜಕಾರ್ಥದಲ್ಲಿ - ಮೆಚ್ಚಿಸಿದಂ ; ಕಣ್ಗೊಳಿಸುಗುಂ

೩. ಹೇತ್ವರ್ಥದಲ್ಲಿ - ಪಾಡಿಸಿದಂ ; ಮಾಡಿಸಿದಂ ; ತರಿಸಿದಂ ; ಬರಿಸಿದಂ

ಕಾವ್ಯಾವಲೋಕನದಲ್ಲಿ ನಾಗವರ್ಮನು ಉಪಾಂತ್ಯದಲ್ಲಿರುವ ಲಘು ಏಕಾಕ್ಷರಕ್ಕೆ ಇ ಕಾರದೊಂದಿಗೆ 'ಇಸು' ಸೇರುವುದಾಗಿ ಹೇಳಿ, ಭಾ.ಭೂ.ದಲ್ಲಿ ಹೇಳದೆ ಇರುವ 'ಇಸು'ವಿಗೆ ಸಂಬಂಧಿಸಿದ ಒಂದು ಹೆಚ್ಚಿನ ವಿಷಯವನ್ನು ಅಲ್ಲಿ ನಿರೂಪಿಸಿದ್ದಾನೆ. ಅದನ್ನು-

೪. ಧರ + ಇಸು - ಧರಿಸು-ಧರಿಯಿಸು. "ವಿಕ್ರಮ ಗುಣಮಂ ಧರಿಯಿಸಿ ಸಂದಿರ್ದಂ" ಎಂಬ ಪ್ರಯೋಗವನ್ನು ಕೂಡ ಕೊಟ್ಟಿರುತ್ತಾನೆ (ಕಾವ್ಯಾ. ಪ. ೪೧೯).

ವೈಶಿಷ್ಟ್ಯವೆಂದರೆ ಭಾ.ಭೂ.ದಲ್ಲಿ 'ಇಸು' ಪ್ರತ್ಯಯವನ್ನು ಕುರಿತು ೩ ಸೂತ್ರಗಳಲ್ಲಿ ನಿರೂಪಿಸಿದ್ದರೆ, ಕಾವ್ಯಾವಲೋಕನದ ಒಂದೇ ಒಂದು ಪದ್ಯದಲ್ಲಿ 'ಇಸು'ವಿನ ಬಗ್ಗೆ ತಿಳಿಸಿದ್ದಾನೆ. ಕೇಶಿರಾಜನು ಇದನ್ನೇ ಸೀಕರಿಸಿದ್ದಾನೆ. ಭಟ್ಟಾಕಳಂಕನು ಮಾತ್ರ 'ಇಸು'ವನ್ನು ಕೇವಲ ಹೇತುವಿನಲ್ಲಿ ಮಾತ್ರ ವ್ಯಾಖ್ಯಾನಿಸಿದ್ದಾನೆ. ಹೇತ್ವರ್ಥ ಮತ್ತು ಪ್ರಯೋಜಕಾರ್ಥ - ಇವುಗಳು ಬೇರೆ ಬೇರೆಯಾಗದ ಒಂದೇ ಅರ್ಥಕ್ಕೆ ಸಂಬಂಧಿಸಿರುವುದರಿಂದ ಇವೆರಡನ್ನು ಪ್ರೇರಣಾರ್ಥದಲ್ಲಿ ಸೇರಿಸಿದರೆ ಉಚಿತವಾದೀತು. ಪ್ರೇರಣಾರ್ಥದಲ್ಲಿ ಒಂದರಲ್ಲಿಯೇ ಇಸು ಪ್ರತ್ಯಯದ ಬಗ್ಗೆ ವಿವರಿಸಬಹುದಾಗಿತ್ತು. ಕಾಲ, ಸ್ಥಳ ಮಿತವ್ಯಯವನ್ನು ಸಾಧಿಸಬಹುದಿತ್ತು.

ನಾಗವರ್ಮನು ವಿವೇಚಿಸಿದ 'ಇಸು' ಪ್ರತ್ಯಯಾಂತ ಧಾತುಗಳೆಲ್ಲವೂ ಸಾಧಿತ ಧಾತುಗಳು. ಸಂಸ್ಕೃತದ ನಾಮಪದಗಳನ್ನು ಲಿಂಗಗಳಾಗಿ ಮಾಡಿಕೊಳ್ಳುವ ರೀತಿಯಲ್ಲಿ ಸಂಸ್ಕೃತದ ಕೃದಂತಗಳನ್ನು ಕೂಡ ಕನ್ನಡದ ಇಸು ಪ್ರತ್ಯಯವನ್ನು ಹತ್ತಿಸಿ, ಕನ್ನಡ ಧಾತುಗಳನ್ನಾಗಿ ಮಾಡಿಕೊಳ್ಳಬಹುದು. ಪೊರಯಿಸು, ಪೂಜಿಸು - ಎಂಬಂತೆ.

ಸಾಧಿತ ಧಾತುಗಳು ಮುಂದೆ ಆ.ವಿ.ಪ್ರ.ಗಳನ್ನು ಪಡೆಯುವುದಲ್ಲದೆ ನಾಮ.ವಿ. ಪ್ರತ್ಯಯಗಳನ್ನು ಪಡೆಯುವುವು.

ಇಸು ಪ್ರತ್ಯಯಾಂತ ಧಾತುಗಳು ಕೇವಲ ಕ್ರಿಯಾಪದಗಳು ಮಾತ್ರವಾಗಿರದೆ ನಾಮಪದಗಳೂ ಆಗಿರುತ್ತವೆ ಎಂಬುದನ್ನು ಗಮನಿಸಬೇಕು.

ಉತ್ಸವಿಸು, ಪ್ರಕಟಿಸು, ಲಿಖಿರ್ಚ (ಲಿಖಿಸು), ಪ್ರವರ್ತ್ತಿಚ್ಚು (ಪ್ರವರ್ತಿಸು), ಬಾಧಿಪ್ಪ (ಭಾದಿಸು), ಬಿಡಿಸು, ಕೆಡಿಸು, ಸಲಿಸು, ಮಾಡಿಸು, ನಡೆಯಿಸು - ಎಂಬೀ 'ಇಸು' ಪ್ರತ್ಯಯಾಂತ ಧಾತುಗಳನ್ನು ಪ್ರಾಚೀನ ಶಾಸನಗಳಲ್ಲಿ ಕಾಣಬಹುದು.

ಲಿಖಿರ್ಚ > ಲಿಖಿಸು (ಚ > ಸ)

ಪ್ರವರ್ತ್ತಿಚ್ಚು ಪ್ರವರ್ತಿಸು (ಚು > ಚ್ಚು > ಸು)

'ಸ' ಕಾರಕ್ಕೆ 'ಚ' ಕಾರವು ಶಾಸನಗಳಲ್ಲಿ ಬರುವುದನ್ನು ಕಾಣುತ್ತೇವೆ. ಮಾತ್ರವಲ್ಲ ಕೆಲವೊಮ್ಮೆ ತ ಕಾರವನ್ನು ಕಾಣುತ್ತೇವೆ.

"ಶಂಭುಶಕ್ತಿಯರ್ಲಿಖಿತಂ" -(ತರೀಕೆರೆ ಹಾದಿಕೆರೆಯ ಶಾಸನ)

**ಕೆ : ಗೆ ಪ್ರತ್ಯಯಗಳು** : : "ಗೆ ಕೆ ಪಾಪ್ರಥಮಸ್ಯಾಶಿಷಿ ವಿಧ್ಯಾದಿಷುಚ" (ಸೂ. ೨೧೫) "ಆಶೀರರ್ಥದಲ್ಲೂ, ವಿಧ್ಯರ್ಥದಲ್ಲೂ ಪ್ರಥಮ ಪುರುಷ ಪ್ರತ್ಯಯಗಳಾದ ಅಮ್, ಅರ್‌ಗಳ ಸ್ಥಾನದಲ್ಲಿ (ಕ್ಕೆ), ಗೆ, ಕೆ ಬರುವುವು" ಇದನ್ನೇ ಶ.ಮ.ದ. ದ ಸೂತ್ರ ೨೪೦ ಮತ್ತು ಶಬ್ದಾನುಶಾಸನದ ಸೂತ್ರ ೪೬೫ರಲ್ಲಿ ಹೇಳಲಾಗಿದೆ.

'ಆಶಿಷಿ' ಎಂದರೆ 'ಹರಕೆ'ಯಲ್ಲಿ ಎಂದರ್ಥ. ವಿಧ್ಯಾದಿಷುಚ - ವಿಧಿ ಮೊದಲಾದವುಗಳನ್ನು ವ್ಯಕ್ತಪಡಿಸುವಲ್ಲಿ ಎಂದರ್ಥ.

ಉದಾ : ಮಾಡು + ಗೆ - ಮಾಡುಗೆ ; 'ಮಾಡುಗೆ' ಗೆ ಮಾಟ್ಕೆ ಎಂಬ ಪ್ರಯೋಗವುಂಟು.

ಮಾಡು - ಮಾಟ್ + ಕೆ - ಮಾಟ್ಕೆ

ಹಾಗೆಯೇ ಬರ್ಕೆ ; ತರ್ಕೆ - ಇತ್ಯಾದಿ ಶಬ್ದಗಳು. ಪರಸಿರ್ಕೆ; ಪರೆದಿರ್ಕೆ; ಕೂರ್ಕೆ - ಇವು ಕಾವ್ಯ ಪ್ರಯೋಗಗಳು. ಅ + ಕೆ - ಅಕ್ಕೆ; ನಿಮಗಕ್ಕೆ, ಸಿರಿಯುಂ ಅಕ್ಕೆ ಪ್ರಯೋಗಗಳು. ಅನುಮತಿ, ಬಿನ್ನಹ, ಹರಕೆ, ಆಜ್ಞಪ್ತಿ - ಇವುಗಳಿಂದಾದ ಭಾವವನ್ನು ನಿರೂಪಿಸುವ ಕ್ರಿಯೆಗಳೆಲ್ಲವೂ ವಿಧ್ಯರ್ಥಕಗಳೇ. ವಿಧಿಯೆಂದರೆ ಅಪ್ಪಣೆ,

ಆಜ್ಞೆ ಎಂದರ್ಥ. ಕೇಶಿರಾಜನಾದರೂ ವಿಧ್ಯರ್ಥಕಕ್ಕೆ ನಿರ್ಧಾರಣವೆಂದೇ ಹೇಳಿದ್ದಾನೆ. ಇಡು; ಕೊಡು; ನೋಡು; ಮಾಡು; ಪೋಗು; ಬಾ; ತಾ -ಎಂಬಿವು ವಿಧ್ಯರ್ಥಕ ಧಾತುಗಳು. ಇಡು + ಕ್ಕೆ - ಇಡ್ಕೆ, ಕೂಡು + ಕೆ - ಕೂಡ್ಕೆ, ನೋಡ್ಕೆ, ಮಾಳ್ಕೆ, ಬರ್ಕೆ, ತರ್ಕೆ - ಎಂದು ಪ್ರಥಮ ಪುರುಷದ ಪ್ರತ್ಯಯ - ಅಮ್‌ಗೆ ಬದಲಾಗಿ ಕೆ; ಕ್ಕೆ; ಗೆ ಪ್ರತ್ಯಯಗಳನ್ನು ಪಡೆದಿವೆ.

ಕನ್ನಡ ಕ್ರಿಯಾ ಪದಗಳನ್ನು ಇಂಥ ವಿಧ್ಯರ್ಥದ ಶಬ್ದಗಳಲ್ಲೇ ಕಾಣಬಹುದೆಂದು ಎಲ್ಲ ವೈಯಾಕರಣರು ತಿಳಿಸಿದ್ದಾರೆ. ಕೇಶಿರಾಜನಾದರೂ ಕೆ; ಕ್ಕೆ, ಗೆ ಗಳನ್ನು ಕ್ರಿಯಾ ಪ್ರತ್ಯಯಗಳೆಂದು ಸ್ಪಷ್ಟವಾಗಿಯೇ ಹೇಳಿದ್ದಾನೆ.

ಇ : ಉ : ಎ : "ಮಧ್ಯಮೈಕ ವಚನಸ್ಯೇದುದೇತಃ ಪ್ರಾಯೋ ಲೋಪಶ್ಚ"

(ಸೂ. ೨೧೬)

"ಮಧ್ಯಮ ಪುರುಷ ಏಕವಚನದ ಅಯ್ ಸ್ಥಾನದಲ್ಲಿ ಇ : ಉ : ಎ ಕಾರಗಳಾದೇಶವಾಗುತ್ತವೆ" ಕೆಲವೊಮ್ಮೆ ಲೋಪವಾಗಬಹುದು.

ಇ : : ಕುಡಿ,ನೀಂ ಕುಡಿ - ಮಧ್ಯಮ ಪುರುಷ ಏಕವಚನ (ನೀ ಅಧ್ಯಾಹಾರ)

ಅಂತೆ ಪಿಡಿ, ಜಡಿ, ಕಡಿ, ಉಡಿ, ಬಡಿ, ಕಡಿ, ಬಿಗಿ

ಆಶೀರ್ವಾದ ಮತ್ತು ವಿಧ್ಯರ್ಥದಲ್ಲಿ ಮಾತ್ರ ಮಧ್ಯಮ ಪುರುಷ ಏಕವಚನದಲ್ಲಿ ಇ : ಉ : ಎ ಗಳು ಬಂದಿರುವುದನ್ನು ಕಾಣುತ್ತೇವೆ. ಕುಡಿ (ಧಾತು) + ಅಯ್ ಕುಡಿಯಯ್ - ಕುಡಿ, ನೀಂಕುಡಿ ಎಂದೇ ಅರ್ಥವಾಗುತ್ತದೆ. ನೀಂ ಕುಡಿಯಯ್ ಎನ್ನಬಾರದು. ನೀಂ ಕುಡಿ ಎಂದರಾಯ್ತು.

ಉ : : ಕೂಡು : ಮಾಡು : ಓಡು : ಪಾಡು - ಇವುಗಳೇ ಮುಂದೆ ಕೂಟ : ಮಾಟ : ಓಟ : ಪಾಟ - ಎಂಬಂತೆ ಟ ಕಾರವನ್ನು ಪಡೆದು ಕೃನ್ನಾಮ (ಭಾವ)ಗಳು.

ಪ್ರಯೋಗ : : ೧. ವಾಯಸದಂತೆ ನೋಡು - (ನೀಂ ನೋಡು) ಕಾ.ಲೋ. ೪೦೨

೨. ಬಕನಂತೆ ಮೆಟ್ಟು (ನೀಂ ಮೆಟ್ಟು) ಕಾ.ಲೋ. ೪೦೨

ಎ : : ಕಳೆ -ನೀಂ ಕಳೆ

ತೆಗೆ - ನೀಂ ತೆಗೆ, ಅಂತೆ ಬಗೆ ಎಂಬುದು.

ನಾಗವರ್ಮನು ಹೇಳಿರುವ ಮೇಲಿನ ಧಾತುಗಳೆಲ್ಲವೂ ದ್ವ್ಯಕ್ಷರ ಧಾತುಗಳು. ದ್ವ್ಯಕ್ಷರ ಎಂದರೆ 'ಎರಡಕ್ಷರದ ಅರ್ಥವಾದ ಒಂದು ಘಟಕವೆಂದರ್ಥ'. ಇವು ಸ್ವತಂತ್ರವೂ ಪ್ರತ್ಯಯರಹಿತವೂ ಆದ ಧಾತುಗಳು. ಇಂಥವನ್ನು ವ್ಯಾಕರಣದಲ್ಲಿ 'ನಿಜಧಾತು'ಗಳೆಂದು ಕರೆದಿದ್ದಾರೆ. ತ್ರ್ಯಕ್ಷರ ಹಾಗೂ ಐದಕ್ಷರಗಳ ಧಾತುಗಳೂ ಕನ್ನಡದಲ್ಲಿ ಇಲ್ಲದೇ ಇಲ್ಲ. ಆದರೆ ಅವು ಕ್ವಚಿತ್ ಪ್ರಯೋಗಗಳು. ಅಂತೆ ಅವು ನಿಜ ಧಾತುಗಳೂ ಅಲ್ಲ.

"ಕ್ರಿಯಾ ಸಮಭಿಹಾರೇ ಚ" (ಸೂತ್ರ ೨೧೭)

"ಮತ್ತೆ ಮತ್ತೆ ಮಾಡುವುದು ಎಂಬರ್ಥದಲ್ಲಿಯ ಮಧ್ಯಮ ಪುರುಷ ಏಕವಚನಕ್ಕೆ ಕೂಡ ಮೇಲಿನಂತೆ ಇ : ಉ : ಎ ಕಾರಗಳು ಬರುವುವು".

ಮತ್ತೆ ಮತ್ತೆ ಮಾಡುವುದು ಎಂಬರ್ಥದಲ್ಲೇ ಕ್ರಿಯಾ ಸಮಭಿಹಾರ ಎನ್ನುತ್ತಾರೆ.

ಉದಾ : ಕುಡಿ ಕುಡಿ ಎಂದು ಕುಡಿಸಿದರ್

ಕುಡಿಸು > ಕುಡಿ (ಧಾತು) + ಇಸು - ಕುಡಿಸು + ದ + ಅರ್ - ಕುಡಿಸಿದರು.

ಕುಡಿ ಕುಡಿ ಎಂಬುದನ್ನು (ಕ್ರಿಯಾ ಸಮಭಿಹಾರ) ಮಧ್ಯಮ ಪುರುಷ ಏಕವಚನಕ್ಕೆ ಅನ್ವಯಿಸಿಕೊಳ್ಳಬೇಕು. ಕುಡಿ ಕುಡಿ ಎಂದರೆ ನೀಂ ಕುಡಿ ಕುಡಿ ಎಂದೇ ಅರ್ಥ.

(ನೀಂ) ಕುಡಿ ಕುಡಿ ಎಂದು ಕುಡಿಸಿದರ್

ಅಂತೆ ನಡೆ ನಡೆ ಎಂದು ನಡೆಯಿಸಿದರ್. ಕೊಯ್ ಕೊಯ್ ಎಂದು ಕೊಯ್ಸಿದರ್. ಪಿಡಿ ಪಿಡಿ (ಇಕಾರ); ನಡೆ ನಡೆ (ಎಕಾರ); ಬಿಡು ಬಿಡು - (ಉಕಾರ) ಬಂದಿವೆ.

ಇಂ ಪ್ರತ್ಯಯ : : "ದ್ವಿತ್ವ ಬಹುತ್ವಯೋರಿಮ್" (ಸೂತ್ರ ೨೧೮)

"ದ್ವಿತ್ವ ಬಹುತ್ವಗಳ ವಿಧ್ಯರ್ಥದಲ್ಲಿ ಮಧ್ಯಮ ಪುರುಷಕ್ಕೆ 'ಇಮ್' ಆದೇಶವಾಗುವುದು"

ಉದಾ : ನುಡಿಯಿಂ - (ನೀಂ) < ನುಡಿ + ಇಂ

ವಿಧ್ಯರ್ಥದಲ್ಲಿ ಮಧ್ಯಮ ಪುರುಷ ದ್ವಿತ್ವ ಹಾಗೂ ಬಹುವಚನಗಳಲ್ಲಿ 'ಇಂ' ಬರುವುದಾಗಿ ನಾಗವರ್ಮನು ಮೇಲಿನ ಸೂತ್ರದಲ್ಲಿ ಸ್ಪಷ್ಟವಾಗಿ ಹೇಳಿರಬೇಕಾದರೆ, ಎಂ.ವಿ. ಸೀತಾರಾಮಯ್ಯನವರು "ಮಧ್ಯಮ ಪುರುಷ ಬಹುವಚನದಲ್ಲಿ (ಏಕವಚನ-?) ಅಯ್ ಪ್ರತ್ಯಯದ ಎಡೆಯಲ್ಲಿ ಇಂ ಆದೇಶವಾಗುವುದು"[೪]

ಎಂದಿದ್ದಾರೆ. 'ಇಂ' ನ್ನು ಏಕವಚನದಲ್ಲಿ ಉಪಯೋಗಿಸಬೇಕೋ ಬಹುವಚನದಲ್ಲಿ ಉಪಯೋಗಿಸಬೇಕೋ ತಿಳಿಯದಂತೆ ಸೂಚಿಸಿದ್ದಾರೆ.

ಶ.ಮು.ದ ಸೂತ್ರ ೨೪೦ ಶ.ಶಾಸನದ ಸೂತ್ರ ೪೬೨ಗಳು ನಾಗವರ್ಮನ ಈ ಸೂತ್ರಕ್ಕೆ ಸಂವಾದಿಯಾಗಿವೆ. ನುಡಿಯಿಂ ; ಮಾಡಿಂ - ಕೇಶಿರಾಜನ ಪ್ರಯೋಗಗಳು.

ನುಡಿಯಿಂ-ನೀಂ ನುಡಿಯಿಂ-ನೀವು ನುಡಿಯಿರಿ ಎಂದು ಅರ್ಥ. ಮಧ್ಯಮ ಪುರುಷದ ಬಹುವಚನಕ್ಕೆ ಸಂಬಂಧಿಸಿದ ಇಂ - ಇರ್ ಆಗಿದೆ. ಎಂದರೆ ಮಧ್ಯಮ ಪುರುಷ ಬಹುವಚನ ಪ್ರತ್ಯಯ ಇರ್‌ಗೆ ಆದೇಶವಾಗಿ ಇಮ್ - ಇಂ ಬಂದಿರುವುದು ಸ್ಪಷ್ಟ. ಆದರೆ ಕೆಲ ವಿದ್ವಾಂಸರು 'ಇಂ'ನ್ನು ಏಕವಚನದ 'ಅಯ್' ಪ್ರತ್ಯಯಕ್ಕೆ ಸ್ವೀಕರಿಸಬೇಕು ಎಂದಿರುವುದು ಸಮಂಜಸವಲ್ಲ. ಎಂ.ವಿ. ಸೀತಾರಾಮಯ್ಯನವರೇ ಮಧ್ಯಮ ಪುರುಷ ಏಕವಚನದ ಅಯ್‌ಗೆ ಇಂ ಬರುವುದಾಗಿ ತಿಳಿಸಿರುತ್ತಾರೆ. ಆದರೆ-

ನುಡಿಯಿಂ : ನೋಡಿಂ : ಇರಿಸಿರಿ : ವೇಚಿಂ - ಎಲ್ಲವೂ ಬಹುವಚನಗಳೇ.

ಪ್ರಯೋಗ : : ಹರಿ ನುಡಿಯೇ ನುಡಿಯಿಂ (ಕಾವ್ಯಾ. ೪೦೩)

(ಹರಿ ನುಡಿಯಲಾಗಿ ನೀವು ನುಡಿಯಿರಿ ಎಂದರ್ಥ)

ಹಾಗೆಯೇ ಉಳಿಯಲಿಂ : ಉಸಿರಲಿಂ : ಸೌರಿಂ ; ಮುಡುಕದಿರಿಂ - ಎಂಬಿವು ಉದಾಹರಣೆಗಳು.

**ಅಂ ಪ್ರತ್ಯಯ** : "ಅಮುತ್ತಮ ಸ್ಯೈಕವಚನಾದನ್ಯತ್ರ" (ಸೂ. ೨೧೯)

ಉತ್ತಮ ಪುರುಷದ, ಬಹುವಚನದ 'ಎ' ಪ್ರತ್ಯಯದ ಸ್ಥಾನದಲ್ಲಿ ಅಮ್ (-ವಮ್) ಆದೇಶವಾಗುವುದು.

ಸೂತ್ರ ವೃತ್ತಿಯಲ್ಲಿ ವಿಧಿ ಮೊದಲಾದ ಅರ್ಥಗಳಲ್ಲಿ ಏಕವಚನದಿಂದ ಹೊರತಾದ ಇತರ ವಚನಗಳಲ್ಲಿ ಅಂ ಪ್ರತ್ಯಯ ಬರುತ್ತದೆಂದು ಹೇಳಿದ್ದಾನೆ. ವಿಧಿ ಮೊದಲಾದ ಅರ್ಥಗಳೆಂದರೆ ವಿಧಿ, ನಿಯಂತ್ರಣ ; ಅಧ್ಯೇಷಣ, ಸಂಪ್ರಶ್ನೆ, ಪ್ರಾರ್ಥನಾದಿಗಳೆಂದು ತಿಳಿಯಬೇಕು.

ಉದಾ : ಮಾಳ್ಪಂ, ಮಾಡುವಂ
ನೋಳ್ಪಂ, ನೋಡುವಂ
ಬೇಳ್ಪಂ, ಬೇಡುವಂ

ಹಾಗೆಯೇ ಪೋಪಂ, ಬರ್ಪಂ, ಕೂಡುವಂ, ಆಡುವಂ - ಎಂದು ತಿಳಿಯುವುದು.

**ಪ್ರಯೋಗ :** ಅನಿಬರಮೊಂದಾಗಿ ತಾಗುವಂ ಫಲ್ಗುಣಂಸೊಳ್ - (ಕಾವ್ಯಾ. ೪೦೪)

ಅನಿಬರ್ + ಅಮ್ - ಅನಿಬರಮ್ - ಎಲ್ಲರ

"......ಎರಡನೆಯದಾಗಿ ಮಧ್ಯಮ ಪುರುಷದ ಬಹುವಚನದ ಇರ್‌ಗೆ ಇಂ ಎಂದೂ, ಉತ್ತಮ ಪುರುಷದ ಬಹುವಚನದ ಎವುಗೆ ಅಮ್ (೦) ಎಂದೂ ಆದೇಶವಾಗುವುದನ್ನು ಹೇಳಿದೆ."[೫]

ಮೇಲಿನ ಇಂ ಬಗೆಗೆ ವಿವೇಚಿಸುತ್ತ ಪ್ರೊ.ತೀ.ನಂ. ಶ್ರೀಕಂಠಯ್ಯನವರು "ಇಂ (-ಇ) ಎಂಬುದಕ್ಕೆ ಮಧ್ಯಮ ಪುರುಷದ ಬಹುವಚನದ ಅರ್ಥವನ್ನು ಕೊಡುವ ಶಕ್ತಿ ಎಲ್ಲಿಂದ ಬಂತು? ಹಳಗನ್ನಡದಲ್ಲಿ 'ಇಂ' ಮಧ್ಯಮ ಪುರುಷ ಬಹುವಚನದ ಪ್ರತ್ಯಯಗಳಲ್ಲೊಂದು. ವಿಧ್ಯರ್ಥದಲ್ಲಿಯೂ ನಿಷೇಧಾರ್ಥದಲ್ಲಿಯೂ ಇದು ಧಾತುವಿಗೆ ಹತ್ತುತ್ತದೆ. .....ನಡುಗನ್ನಡದಲ್ಲಿ ಇಂ ಎಂಬುದರ ಅಂತ್ಯ ಬಿಂದು ಲೋಪವಾಗಿ ನಂಬಿ-ನಂಬಿಂ; ಮಾಡೀ < ಮಾಡಿಂ; ನುಡಿಯಿ (<ನುಡಿಯಿಂ) ಎಂಬಂತೆ ಕಾಣುತ್ತದೆ. ......ಹೊಸಗನ್ನಡದಲ್ಲಿ ಮಧ್ಯಮ ಪುರುಷ ಬಹುವಚನಾರ್ಥದಲ್ಲಿ - ರೀ ಎಂಬುದು ಸೇರುವುದು ಸ್ಪಷ್ಟ. ಇದು ಸಂಬೋಧನೆಯಲ್ಲೂ ಸೇರುವುದು"[೬] ಎಂದಿದ್ದಾರೆ.

ಅಲ್ ಆಗಮ : : "ಕ್ರಿಯಾಯಾಂ ಕ್ರಿಯಾರ್ಥಯಾಮಲ್" (ಸೂತ್ರ ೨೨೧)

"ಕ್ರಿಯಾರ್ಥದಲ್ಲಿ ಧಾತುಗಳಿಗೆ ಅಲ್ ಪ್ರತ್ಯಯ ಪರವಾಗುವುದು."

ಕ್ರಿಯೆಯಲ್ಲಿ - ಉದಾಹರಣೆ : ನೋಡಲ್ - ನೋಡು + ಅಲ್ - ನೋಡಲ್
ಬಗೆದಂ ನೋಡಲ್ ಎಂಬುದು ಕ್ರಿಯೆ.
ಬಗೆಯೆಂಬುದೂ ಕ್ರಿಯೆಯೇ

ನೋಡಲ್ ಬಗೆದಂ - ಎನ್ನುವಲ್ಲಿ ಕ್ರಿಯೆ ಕ್ರಿಯಾರ್ಥವನ್ನು ಹೇಳುವ ಸಂದರ್ಭ. ಅಂತೆ ಕೂಡಲ್ ಸಾರ್ದಂ : ಪಾಡಲ್ ತೊಡಗಿದಂ : ಕೇಳಲ್ ಎಸೆದಂ : ಪೋಗಲ್ ಬಂದಂ. ಕೂಡಲ್, ಪಾಡಲ್, ಕೇಳಲ್, ಪೋಗಲ್ - ಇವುಗಳಲ್ಲಿ ಅಲ್ ಪ್ರತ್ಯಯ ಬಂದಿದೆ.

ಕೇಶಿರಾಜ ಮತ್ತು ಭಟ್ಟಾಕಳಂಕ - ಈ ಇಬ್ಬರೂ ಮಧ್ಯಮ ಪುರುಷದ ವಿಧ್ಯರ್ಥದ ಅಲ್ ಬರುವುದಾಗಿ ತಿಳಿಸಿದ್ದಾರೆ. ಆದರೆ ಅವರು ಈ ಅಲ್ ಪ್ರತ್ಯಯವು

ಪ್ರತಿಷೇದ ಕ್ರಿಯೆಯಲ್ಲಿ ಕಾಣಬಹುದಾಗಿ ತಿಳಿಸಿದ್ದಾರೆ. ಬನಮಂ ಪುಗಲ್ ವೇಡ; ಸುಡಿಯಲ್ ವೇಡ, ಎಂಬಿವು ಉದಾಹರಣೆಗಳು. ನಾಗವರ್ಮನು ಕೂಡ ಮುಂದಿನ ಸೂತ್ರದಲ್ಲಿ ಪ್ರತಿಷೇದಾರ್ಥದಲ್ಲಿ ಬರುವ ಅಲ್ ಪ್ರತ್ಯಯವನ್ನು ಕುರಿತು ತಿಳಿಸಿದ್ದಾನೆ.

"ಪ್ರತಿಷೇಧೇ ಚ" (ಸೂತ್ರ ೨೨೨)

"ಪ್ರತಿಷೇಧಾರ್ಥವನ್ನು ಸೂಚಿಸುವ ಧಾತುಗಳಿಗೂ ಅಲ್ ಬರುವುದು".

ಉದಾ : ಸುಡಿಯಲ್ ವೇಡ ; ಮಿಡುಕಲ್ ವೇಡ ; ಪೋಗಲ್ ಬಾರದು; ಉಸಿರಲ್ ಬಾರದು - ಇತ್ಯಾದಿ. ಉದಾಹರಣೆಗಳು ಅಲ್ ವಿಕಲ್ಪಕ್ಕೆ ಮುಂದಿನ ಸೂತ್ರ-

"ಸಂಗತಾಂತರೇ ಬಹುಳಮಲ್ಲೋಪಃ" (ಸೂತ್ರ ೨೨೩)

"ಅಲ್ ಪ್ರತ್ಯಯವು ಕೆಲವು ಕಡೆ ಲೋಪವಾಗುವುದು"

ಉದಾಹರಣೆ : : ಸುಡಿಯಲ್ ಬಾರದು - ಸುಡಿಯಬಾರದು
ತರಲ್ ವೇೞ್ಪುದು - ತರವೇೞ್ಪುದು
ಬರಲ್ ವೇೞ್ಪುದು - ಬರಬೇೞ್ಪುದು

ವರ್ತಮಾನಾನ್ಯೂನ : "ಉತುಮುತ್ತುಮಂತೇತದಾತ್ವೇ" (ಸೂ. ೨೨೪)

"ವರ್ತಮಾನ ಕಾಲದ ಕ್ರಿಯೆಗಳಲ್ಲಿ ಕೊನೆಗೆ ಉತುಂ, ಉತ್ತುಂ ಎಂಬಿವು ಬರುವುವು" ಉತುಂ : ಉತ್ತುಂ : - ಎಂಬಿವು ವರ್ತಮಾನ ಕಾಲದ ಆ.ವಿ.ಪ್ರತ್ಯಯಗಳೇ. "ಒಂದು ಕ್ರಿಯೆ ಮುಗಿದು ಇನ್ನೊಂದು ಸೂಚಿಸುವುದಕ್ಕೆ ನ್ಯೂನವೆನ್ನುತ್ತಾರೆ"[೭]

ಉದಾ : ಕೆದಱುತುಂ - ಕೆದಱು + ಉತುಂ; ಕೆದಱುತ್ತುಂ
ನೋಡುತುಂ - ನೋಡು (ಧಾತು) + ಉತುಂ - ನೋಡುತ್ತುಂ

ಪ್ರಯೋಗ : : ಸೀಳುತುಮೆಯ್ದೆ ವಂಶತನಮಂ ..... (ಕಾವ್ಯಾ. ೪೦೯)
ಕೆಡಱುತ್ತುಂ ಮೆಣಲಂ (ಕಾವ್ಯಾ. ೪೦೯)

ಭೂತನ್ಯೂನ : : "ಪೂರ್ವಕಾಲ ಕ್ರಿಯಾಯಾಮಿದುತೌಯಥಾಲಕ್ಷ್ಯಂ" (೨.೨೫)

"ಭೂತ ಕಾಲದ ಕ್ರಿಯೆಯಲ್ಲಿ ಧಾತುವಿಗೆ ಲಕ್ಷ್ಯಾನುಸಾರವಾಗಿ ಇಕಾರ, ಉಕಾರಗಳು ಬರುತ್ತವೆ".

ಉದಾ : ನೋಡಿಪೋದಂ. ನೋಡು ಹಾಗೂ ಪೋದಂ - ಎರಡು ಕ್ರಿಯೆಗಳೇ. 'ನೋಡಿ' - ಎಂಬ ಕ್ರಿಯೆಯಲ್ಲಿ 'ಇ' ಕಾರವು ಬಂದಿದೆ. ಅಂತೆ ಬಂದು (ಉ) ಕಂಡಂ. ಕಂಡು ನಿಂದಂ, ಬಂದು, ಕಂಡು ಎಂಬ ಕ್ರಿಯೆಗಳಲ್ಲಿ ಉ ಕಾರವು ಇದೆ.

ಒಂದು ವಾಕ್ಯದಲ್ಲಿ ಎರಡು ಕ್ರಿಯಾಪದಗಳಾಗಿದ್ದಾಗ ಒಂದು ಪೂರ್ಣವಿದ್ದರೆ ಇನ್ನೊಂದು ಅಪೂರ್ಣವಾಗಿರುತ್ತದೆ. ಈ ಅಪೂರ್ಣ ಕ್ರಿಯಾಪದವು ಪೂರ್ಣ ಕ್ರಿಯಾಪದವನ್ನು ಸೂಚಿಸುತ್ತದೆ ; ಇಲ್ಲವೇ ಅದರಿಂದ ಪ್ರಯೋಜನವಿರುತ್ತದೆ.

ಇ,ಉ ಕಾರಾಂತ ಧಾತುಗಳು ಲಿಂಗ ವಚನಗಳಿಗೆ ಹತ್ತಿರುವ ಇವು ಒಂದು ಗುಂಪಿಗೆ ಸೇರಿದರೆ, ಉತು, ಉತ್ತುಂ, ಕುಂ, ಗುಂ, ಕ್ಕೆ, ಕೆ - ಎಂಬಿವು ಮತ್ತೊಂದು ಗುಂಪಿಗೆ ಸೇರುತ್ತವೆ. ಉತು (ತು), ಉತ್ತುಂ (ತ್ತು) - ಇವುಗಳು ನಪುಂಸಕಲಿಂಗಗಳಿಗೆ ಹತ್ತುತ್ತವೆ. ಮೇಲಿನ ಪ್ರತ್ಯಯಗಳು ಕೆಲವು ಭೂತಕಾಲಕ್ಕೆ ಸೇರಿ ಒಂದು ಗುಂಪು ಆದರೆ, ಮತ್ತೆ ಕೆಲವು ವರ್ತಮಾನ ಹಾಗೂ ಭವಿಷ್ಯತ್ತಿಗೆ ಸೇರಿ ಇನ್ನೊಂದು ಗುಂಪಿಗೆ ಸೇರುವುವು. ಹೀಗೆ ಎರಡು ಗುಂಪುಗಳಲ್ಲಿ ಪ್ರತ್ಯಯಗಳು ಸೇರಿವೆ.

**ಕೆಲವೊಂದು ಧಾತುಗಳ ರೂಪಾಂತರ ::**

ಇ > ಎ : ಸೂತ್ರ :"ಧಾತೋರಿಮತೋರುಪಾಂತ್ಯಯೋ ರೇದೋತೌ ಪ್ರಾಯಃ" (೨೨೬)

"ಧಾತುವಿನ ಉಪಾಂತಗಳಲ್ಲಿರುವ ಇಕಾರ ಉಕಾರಗಳಿಗೆ ಪ್ರಾಸಂಗಿಕವಾಗಿ ಎಕಾರ ಮತ್ತು ಒ ಕಾರಗಳು ಆದೇಶವಾಗುವುವು"

| | | |
|---|---|---|
| ಉದಾಹರಣೆ : ಇ > ಎ | ಇಸು | ಎಚ್ಚಂ |
| | ಬಿಸು | ಬೆಚ್ಚಂ |
| | ಕಿಡು | ಕೆಟ್ಟಂ |

ಉ > ಒ : ಉ ಗು ಒಕ್ಕಂಪು ಗು-ಪೊಕ್ಕಂ, ತುಡು-ತೊಟ್ಟಂ, ಕುಡು-ಕೊಟ್ಟಂ. 'ಪ್ರಾಯಃ' ಎಂದಿರುವುದರಿಂದ ಕೆಲವೆಡೆಯಲ್ಲ.

ಉಡು : ಉಟ್ಟಂ ; ಸುಡು : ಸುಟ್ಟಂ ; ಉಡು : ಸುಡು-ಸಹಜ ಧಾತುಗಳು.

ಅ>ಆ :: "ಅತೋ ದೀರ್ಘೋನಾಗಮೇಷು" (ಸೂ. ೨೨೭)

"ಧಾತುಗಳಿಗೆ ಆ.ವಿ.ಪ್ರ.ಗಳು ಸೇರಲಾಗಿ (ನೇರವಾಗಿ) ಆ ಧಾತುವಿನ ಆದಿಯ 'ಅ'ಕಾರವು ದೀರ್ಘ 'ಆ' ಕಾರವಾಗುವುದು."

ಉದಾಹರಣೆ : : ತರ್ - ತಾರಂ; ತಾರರ್ (ಬ.ವ) ತಾರರು - ನಿಷೇಧ

ಬರ್ - ಬಾರಂ; ಬಾರರ್ (ಬ.ವ)ಬಾರರು - ನಿಷೇಧ

ಹೊಸಗನ್ನಡದಲ್ಲಿ ತರ್ - ಬರ್ ಗಳಿಗೆ ಅಲ್ ಪ್ರತ್ಯಯ ಬರುತ್ತದೆ.

ತರ + ಅಲ್ - ತರಲ್; ಹ್ರಸ್ವ.ಅ-ತರನು : ಬರನು ಎಂಬ ಪ್ರಯೋಗಗಳೂ ಇಲ್ಲದೇ ಇಲ್ಲ. ನಾಗವರ್ಮನನ್ನೇ ಅನುಸರಿಸಿದ ಕೇಶಿರಾಜನು - "ತರ್‌ಬರ್ಗಳ ಮೊದಲಕಾರದೊಳ್ ದೀರ್ಘವಿಧಿ ವಿಲೋಮ ಕ್ರಿಯೆಯೊಳ್" ಎಂದಿದ್ದಾನೆ.

**ವರ್ಗ ತೃತೀಯೆ – ವರ್ಗ ಪ್ರಥಮೆ** : : "ತೃತೀಯಾನಾಂ ವ್ಯಂಜನಾದೌ ಪ್ರಥಮತ್ವಂ" (ಸೂತ್ರ ೨೨೮)

"ಧಾತುವಿನ ಅಂತ್ಯ ತೃತೀಯಾಕ್ಷರಗಳಿಗೆ ಯಾವುದಾದರೂ ವ್ಯಂಜನ ಪರವಾದರೆ ಅದೇ ವರ್ಗದ ಪ್ರಥಮಾಕ್ಷರ ಬರುವುದು"

ಉದಾಹರಣೆ : ಪೊಕ್ಕಂ - ಪುಗು (ಧಾತು) + ದಂ - ಪೊಕ್ಕಂ. 'ಗ' ತೃತೀಯಾಕ್ಷರ,

ಒಕ್ಕಂ - ಉಗು (ಧಾತು) + ದಂ - ಒಕ್ಕಂ. ಅಂತೆ ಮಿಕ್ಕಂ, ನಕ್ಕಂ ನೋಡುವುದು. ಪಡು + ದ + ಅಂ - ಪಟ್ಟಂ; ಹಾಗೆಯೇ ನಟ್ಟಂ, ಅಟ್ಟಂ, ತೊಟ್ಟಂ -ಇತ್ಯಾದಿಯಾಗಿ ತಿಳಿಯುವುದು. ಮಿಕ್ಕಂ : ನಕ್ಕಂ ಎಂಬಲ್ಲಿ ಮಿಗು : ನಗು - ಧಾತುಗಳು

ನಕ್ಕವನನ್ನು ಕರೆ. ನಕ್ಕವನು - ಕೃದಂತ ಭಾವನಾಮ

ನಾಗವರ್ಮನು ನಿರೂಪಿಸಿದ ಮೇಲಿನ ಎಲ್ಲ ಧಾತುಗಳು ಉಕಾರಾಂತ ಸಹಜ ಧಾತುಗಳು. ಪೊಕ್ಕಂ : ನಕ್ಕಂ : ಒಕ್ಕಂ : ತೊಟ್ಟಂ - ಇವು ಭೂತಕಾಲ ಸೂಚಿ ಕ್ರಿಯಾಪದಗಳೆಂಬುದು ಗಮನಾರ್ಹ. "ವಿಜಾತಿಯ ಸಂಯುಕ್ತಾಕ್ಷರಗಳು ಸಜಾತೀಯ ಸಂಯುಕ್ತಾಕ್ಷರಗಳಾಗುತ್ತವೆ -ಎಂಬ ನಿಯಮಕ್ಕೆ ಇದು ಹೊಂದಿಕೆಯಾಗಿದೆ."[೮]

**ಜ-ತ, ಡ-ಟ** : "ಜ ಡಯೋಸ್ತಟೌ" (ಸೂತ್ರ ೨೨೯)

"ಧಾತುವಿನ ಜ ಕಾರ ಡಕಾರಗಳಿಗೆ ವ್ಯಂಜನಾದಿ ವಿಭಕ್ತಿಗಳು ಪರವಾದರೆ ಕ್ರಮವಾಗಿ ಅಲ್ಲಿ ತ ಕಾರ ಟ ಕಾರಗಳು ಬರುತ್ತವೆ."

ಉದಾಹರಣೆ : : ಪೆತ್ತಂ : ಪೊತ್ತಂ : ತೆತ್ತಂ

ಪೆತ್ತಂ : ಪೆಱು (ಧಾತು)- ಪೆಱು + ದ - ಪೆಱು + ದಂ - ಪೆತ್ತಂ

ಪೊತ್ತಂ : ಪೊಱು (ಧಾತು) - ಪೊಱು + ದ - ಪೊಱು + ದಂ - ಪೊತ್ತಂ

ತೆತ್ತಂ : ತೆಱು (ಧಾತು) ತೆಱು + ದ - ತತ್‌ದಂ - ತೆತ್ತಂ

ಡ > ಟ:ಗೆ: : ಮಾಟ್ಕುಂ : ಬೇಟ್ಕುಂ

ಮಾಡು (ಧಾತು) + ಕುಂ-ಮಾಟ್ + ಕುಂ-ಮಾಟ್‌ಕುಂ -ಮಾಟ್ಕುಂ

ಬೇಡು (ಧಾತು) + ಕುಂ -ಬೇಟ್ + ಕುಂ - ಬೇಟ್ಕುಂ ಅಂತೆ ನೋಟ್ಕುಂ -ನೋಡುವುದು.

ಱ ಕಾರವು ತ ಕಾರವಾಗುವುದರ ಬಗ್ಗೆ ಎಲ್ಲ ವೈಯಾಕರಣರ ಅಭಿಪ್ರಾಯವೂ ಒಂದೇ ಆಗಿದೆ. ಆದರೆ ಡ - ಕಾರವಾಗುವುದರ ಬಗ್ಗೆ ನಾಗವರ್ಮನೊಬ್ಬನೇ ಹೇಳಿರುವಂತೆ ತಿಳಿಯುತ್ತದೆ.

**ವ–ಪ** : "ವಕಾರಸ್ಯ ಪಃ" (ಸೂತ್ರ ೨೩೦)

"ಧಾತುವಿನ ವ ಕಾರಕ್ಕೆ ವ್ಯಂಜನಾದಿ ವಿಭಕ್ತಿಗಳು ಪರವಾದರೆ ಅಲ್ಲಿ ಪಕಾರವು ಬರುವುದು"

ಉದಾಹರಣೆ : ತಪ್ಪಂ, ತಪ್ಪರ್

ತಪ್ಪಂ - ತವು (ಧಾತು) + ದಂ - ತಪ್‌ದಂ - ತಪ್ಪಂ, ತಪ್ಪ + ಅರ್ - ತಪ್ಪರ್

**ಯಕಾರಾಗಮ** : "ಆಪೋಭ್ಯಾಂದಸ್ಯ ತೇಯಃ" (ಸೂ. ೨೩೧)

"ಆ ಮತ್ತು ಪೋ ಕಾರಗಳ ಮುಂದಿನ 'ದ' ಕಾರಕ್ಕೆ ತಕಾರ ಪರವಾಗಲು ಅಲ್ಲಿ ಯಕಾರಾಗಮವು"

ಉದಾ : ಆಯ್ತು, ಪೋಯ್ತು

ಆಯ್ತು - ಆಗು (ಧಾತು) + ದಂ-ಅ+ಯ್+ತು-ಆಯ್ತು

ಪೋಯ್ತು - ಪೋಗು (ಧಾತು) +ದಂ-ಪೊ+ಯ್+ತು - ಪೋಯ್ತು

ಮೇಲಿನ ಆಗು : ಪೋಗು - ಧಾತುಗಳಲ್ಲಿಯ ಗ ಕಾರಕ್ಕೆ ಲೋಪವುಂಟು.

ಆಗು - ಆ (ಗು ಲೋಪ) + ದಂ
ಆ + ತು (ದ ಕಾರಕ್ಕೆ ತ ಕಾರ)
ಆ + ಯ್ (ಯ ಕಾರಾಗಮ) + ತು
ಆಯ್‌ತು ; ಆಯ್ತು

**ಸ - ಚ** : : "ಸಸ್ಯಚಃ" (ಸೂತ್ರ ೨೩೫)

"ಧಾತುವಿನ ಸ ಕಾರಕ್ಕೆ ಚ ಕಾರ ಬರುವುದು"

ಉದಾಹರಣೆ : ಎಚ್ಚಂ > ಇಸು (ಧಾತು) + ದ - ಎಚ್+ದಂ - ಎಚ್ಚಂ
ಬೆಚ್ಚಂ > ಬಿಸು (ಧಾತು) + ದ - ಬೆಚ್+ದಂ ಬೆಚ್ಚಂ

ಅಂತೆ ಪೆಚ್ಚಂ. ಸಕಾರವು ಚಕಾರವಾಗುವುದು ಸಾಮಾನ್ಯವಾಗಿ ಎಲ್ಲ ದ್ರಾವಿಡ ಭಾಷೆಗಳ ವೈಶಿಷ್ಟ್ಯ.

ಉದಾ : ತೆಲುಗಿನಲ್ಲಿ ತಾಲವ್ಯೀಕರಣ ಸರ್ವೇ ಸಾಮಾನ್ಯ. ಸಕ್ಕರೆ - ಚಕ್ಕರ (ತೆ); ಸೇರು - ಚೇರು (ತೆ); ಕಿವಿ- ಚೆವಿ (ತೆ).

**ಲ-ನ** : "ಹಿಂಸಾಗತ್ಯರ್ಥಯೋರ್ಲೋನಃ" (ಸೂ. ೨೩೨)

"ಹಿಂಸಾರ್ಥ ಹಾಗೂ ಗತ್ಯರ್ಥವನ್ನು ತಿಳಿಸುವ ಧಾತುಗಳ ಲಕಾರಕ್ಕೆ ದ ಕಾರವು ಪರವಾಗಲು ನ ಕಾರವು ಆದೇಶವಾಗುವುದು".

ಉದಾಹರಣೆ : ಕೊಂದಂ ; ಸಂದಂ
ಕೊಂದಂ - ಕೊಲ್ (ಧಾತು) + ದಂ - ಕೊನ್+ದಂ - ಕೊನ್ದಂ - ಕೊಂದ
ಸಂದಂ - ಸಲ್ (ಧಾತು) + ದಂ - ಸನ್+ದಂ - ಸನ್ದಂ - ಸಂದಂ

ಕೊಂದಂ ಎಂಬುದು ಹಿಂಸಾರ್ಥ, ಸಂದಂ ಎನ್ನುವುದು ಗತ್ಯರ್ಥ.

"ವಾಸ್ಥಿತ್ಯರ್ಥಕಸ್ಯ" (ಸೂ. ೨೩೩)

"ಸ್ಥಿತ್ಯರ್ಥವನ್ನು ಹೇಳುವ ಧಾತುಗಳ ಲ ಕಾರಕ್ಕೆ ದಕಾರ ಪರವಾಗಲು ವಿಕಲ್ಪದಿಂದ ನ ಕಾರವು ಬರುವುದು".

ಉದಾ : ನಿಂದಂ, ನಿಂತಂ ನಿಲ್ (ಧಾತು) + ದಂ - ನಿನ್+ದಂ -ನಿಂದಂ

ನಿಲ್ (ಧಾತು) + ತಂ - ನಿಲ್ತ್ಂ - ನಿಂತಂ

೨. ನಿಲ್ + ತಂ - ನಿಲ್ತ್ಂ - ನಿಂತಂ - ಹೀಗೆ ನಿಂದಂ, ನಿಂತಂ ಎಂಬಿವು ಸ್ಥಿತ್ಯರ್ಥ ಪದಗಳು.

ಹಿಂಸಾರ್ಥ, ಗತ್ಯರ್ಥ, ಸ್ಥಿತ್ಯರ್ಥಗಳಲ್ಲಿಯ ಧಾತುಗಳಿಗೆ ಲಕಾರ ಬರುವುದಾಗಿ ಆ ಲಕಾರಕ್ಕೆ ನ ಕಾರಾಗಮವಾಗುವುದಾಗಿ ತಿಳಿಸುವಲ್ಲಿ ನಾಗವರ್ಮನ ಯ, ವ, ಲಗಳು ಅನುನಾಸಿಕವೂ ಹೌದು, ನಿರ್ ಅನುನಾಸಿಕವೂ ಹೌದು" -ಎಂಬ ಮಾತು ಇಲ್ಲಿ ಜ್ಞಾಪಕಕ್ಕೆ ಬರುತ್ತದೆ. ಆದರೆ ಇದು ಸ್ಥಿತ್ಯರ್ಥದಲ್ಲಿ ವಿಕಲ್ಪ, ಒಟ್ಟಾರೆ ದ ಕಾರ ಪದವಾದಾಗ ಲ ಕಾರವು ನ ಕಾರವಾಗುವುದು ಸತ್ಯ ಮತ್ತು ನಿತ್ಯವೂ ಕೂಡ.

ರ-ನ "ಆನಯನಾಗಮನಾರ್ಥವರ್ತಿನೋರೇಫಸ್ಯ" (ಸೂ. ೨೩೪)

"ಆನಯನ ಮತ್ತು ಆಗಮನಾರ್ಥದಲ್ಲಿ ಧಾತುಗಳ ರ ಕಾರಕ್ಕೆ ನ ಕಾರಾಗಮವಾಗುವುದು"

ಉದಾಹರಣೆಗೆ : ತಂದಂ; ಬಂದಂ - ಇತ್ಯಾದಿ

ತಂದಂ - ತರ್ (ಧಾತು) + ದಂ - ತನ್ + ದಂ - ತಂದಂ

ಬಂದಂ - ಬರ್ (ಧಾತು) + ದಂ - ಬನ್ + ದಂ - ಬಂದಂ

ಕೊಂಡಂ - ಕೊಳ್ (ಧಾತು) + ದಂ ಕೊನ್ + ದಂ -
ಕೊಣ್ದಂ - ಕೊಂಡಂ (ನ - ಣ - ಡ)

"ಞ ಕಾರ ಡ ಕಾರಂಗಳ್ಗೆ ಣ ಕಾರ ಡ-ಕಾರಂಗಳಂ ಪೇಟಿವೇೞ್ಕುಂ" ಎಂದಿದ್ದಾನೆ ನಾಗವರ್ಮ.

ದೀರ್ಘಕ್ಕೆ ಹ್ರಸ್ವ :: "ಮೃತಿದಾನಾರ್ಥಯೋಸ್ತೋಂತೇ ಹ್ರಸ್ವಶ್ಚ" -(ಸೂತ್ರ ೨೩೬)

"ಮೃತ್ಯರ್ಥ (ಮೃತರ ಅರ್ಥದಲ್ಲಿ) ಹಾಗೂ ದಾನಾರ್ಥವನ್ನು ಹೇಳುವಾಗ ಧಾತುಗಳ ಕಡೆಯಲ್ಲಿ ತ ಕಾರವು ಬರುವುದು. ಆಗ ಪೂರ್ವ ಸ್ವರಕ್ಕೆ ಹ್ರಸ್ವ ಬರುವುದು"

ಉದಾಹರಣೆ : ಸತ್ತಂ, ಇತ್ತಂ

ಸತ್ತಂ - ಸಾ। ಸಯ್ (ಧಾತು) + ದಂ - ಸಯ್+ದಂ -ಸಯದಂ - ಸತ್ತಂ ಮೇಲಿನ ನಿರೂಪಣೆ ಸರಿಹೋಗದೇ ಇರಬಹುದು, ಬದಲಾಗಿ ಸಾ ಸಯ್ ಧಾತುವಿಗೆ 'ಸಾ' ಏಕಾಕ್ಷರ ಸ್ವೀಕರಿಸಿದರೆ ಸರಿಯಾಗುವುದು.

ಸತ್ತಂ - ಸಾ। ಸಯ್ + ದಂ - ಸತ್ತಂ (ದ - ತ)

ಇತ್ತು - ಈ। ಇಯ್ + ದಂ - ಇತ್ತಂ. ಸಾ ಮತ್ತು ಈ ಕಾರಗಳು ಏಕಾಕ್ಷರ ಧಾತುಗಳು. ಈ ನಿಯಮವು ಕೆಲವು ಕಡೆಯಿಲ್ಲ. ಅಟ್ಟಿಂ; ಮಿಟ್ಟಿಂ, ಎಟ್ಟಿಂ; ಮಿಂದಂ, ಕಂಡಂ.

ಉದಾ : ಅಟ್ + ದಂ - ಅಟ್ಟಿಂ
ಎಟ್ + ದಂ - ಎಟ್ಟಿಂ
ಕಾಣ್ + ದಂ - ಕಂಡಂ
ಮೀ + ದಂ - ಮಿಂದಂ

"ತೋಷ್ಟುನಾಟುಃ" (ಸೂತ್ರ. ೨೩೭)

"ತ ವರ್ಗ ಧಾತುಗಳಿಗೆ ಟ ವರ್ಗಾಕ್ಷರಗಳು ಪರವಾದರೆ, ಅಲ್ಲಿ ಟ ವರ್ಗವೇ ಬರುವುದು"

ಉದಾಹರಣೆ - ಉಂಡಂ, ಕಂಡಂ

ಉಣ್ +ದಂ - ಉಣ್ಡಂ - ಉಂಡಂ. ಇಲ್ಲಿ 'ದ' ಕಾರಕ್ಕೆ ಡ ಕಾರಾದೇಶವಾಗಿದೆ. 'ಣ' ಬಿಂದು ಸ್ವರೂಪವನ್ನು ಪಡೆದಿದೆ. ಅಂತೆ ಕಂಡಂ ಕಾಣ್ + ದಂ.

ಕಂಡಂ - ಕಾಣ್ (ಧಾತು) + ದಂ - ಕಣ್ದಂ - ಕಣ್ಡಂ

"ಕಚಟತಪೇಭ್ಯೋದಸ್ಯ ಪೂರ್ವರೂಪಂ" (ಸೂ. ೨೩೮)

"ಧಾತುವಿನ ಕ, ಚ, ಟ, ತ, ಪ ಎಂಬ ವರ್ಗ ಪ್ರಥಮಾಕ್ಷರಗಳಿಗೆ ದ ಕಾರವು ಪರವಾಗಿರಲು ಅಲ್ಲಿ ಪೂರ್ವ ರೂಪವೇ ಪ್ರಾಪ್ತಿಸುವುದು"

ಉದಾ : ಪೊಕ್ಕಂ, ಮಿಕ್ಕಂ, ಎಚ್ಚಂ, ಬೆಚ್ಚಂ, ತೊಟ್ಟಂ, ಪಟ್ಟಂ, ತೆತ್ತಂ, ಪೊತ್ತಂ - ಇತ್ಯಾದಿ.

ಪೊಕ್ಕಂ - ಪುಗು ಧಾತುವಿನಿಂದಾದುದು. ಇದಕ್ಕೆ 'ದ' ಪರವಾಗಲು ವರ್ಗದ ಪ್ರಥಮ ರೂಪವೇ ಬರುವುದು. ಕಾರಣ ಪುಗು + ದಂ - ಪೊಕ್ಕಂ. ಅಂತೆಯೇ

ಮಿಗು, ಇಸು, ಚಿಸು, ತೊಷು, ಪಷು, ತಗು, ಪೊಗು - ಇವೆಲ್ಲ ಪ್ರಸ್ತರ ಧಾತುಗಳೇ. ಇದರ ಬಗ್ಗೆ ಈ ಹಿಂದೆ ವಿವರಿಸಲಾಗಿದೆ. ಇದು ಪುನರಾವರ್ತನೆಗೊಂಡ ಸೂತ್ರ.

"ಲ ಳ ಕಾರಭ್ಯಾಂ ದಸ್ಯ ತೋವಾ" (ಸೂತ್ರ. ೨೩೯)

"ಲ ಕಾರ ಳ ಕಾರಗಳ ಧಾತುವಿಗೆ ವಿಕಲ್ಪದಿಂದ ತ ಕಾರ ಬರುವುದು."

ಉದಾಹರಣೆ - ಸೋಲ್ತಂ, ಕಲ್ತಂ, ತಳ್ತಂ, ಎಂಬಿವು.

ಸೋಲ್ತಂ - ಸೋಲ್ (ಧಾತು) + ದಂ

ಕಲ್ತಂ - ಕಲ್ (ಧಾತು) + ದಂ

ತಳ್ತಂ - ತಾಳ್ (ಧಾತು) + ದಂ

"ಕೆಲವೆಡೆಯೊಳ್ ತ ಕಾರಮಾಗದು" ಎಂದಿರುವುದರಿಂದ ಈ ನಿಯಮ ಕೆಲವು ಕಡೆಯಿಲ್ಲ.

ನಾಗವರ್ಮನ 'ಆಖ್ಯಾತವಿಧಾನಂ' ಎಂಬ ಪ್ರಕರಣ ಇಲ್ಲಿಗೆ ಮುಗಿಯುತ್ತದೆ. ಆದರೆ ಅವನು ನಿರೂಪಿಸಿದ ಶಬ್ದಗಳ ಪರಿವರ್ತನೆಯ ನಿಯಮಗಳು ಇಲ್ಲಿಗೆ ಮುಗಿಯಲಿಲ್ಲ. ಅದಕ್ಕೆ ಅವನ ಒಪ್ಪಿಗೆಯೂ ಇದೆ. ಅದನ್ನೇ ಅವನು ತನ್ನ ಕೃತಿಯಲ್ಲಿ ಹೇಳಿದ್ದಾನೆ. ಈ ಪ್ರಕರಣದ ಕೊನೆಯ ಸೂತ್ರವೊಂದರಲ್ಲಿ "ಅಭಿಧಾನತೋವ್ಯವಸ್ಥಿತಾ ಸಿದ್ಧಿಃ" (ಸೂತ್ರ. ೨೪೦) ಎಂದಿದ್ದಾನೆ. "ನಾನಾರ್ಥಗಳಿಂದ ಕೂಡಿದ ಇದನ್ನು ನಿಷ್ಕೃಷ್ಟವಾಗಿ ಹೇಳಲು ಬ್ರಹ್ಮನಿಗೂ ಸಾಧ್ಯವಿಲ್ಲದಿರುವಾಗ, ಉಳಿದವರ ಪಾಡೇನು?" ಎಂದು ಕಾವ್ಯಾವಲೋಕನದ ಪದ್ಯ ೪೨೦ರಲ್ಲಿ ಕೂಡ ತಿಳಿಸಿದ್ದಾನೆ.

೧. ಪ್ರತ್ಯಯಗಳು ; ೨. ಉದು - ಉವು ಗಳು ; ೩. 'ಅಳ್' ಸ್ತ್ರೀಲಿಂಗ ಪ್ರತ್ಯಯ, ೪. ತುತ್ತು, ೫. ಕುಂ, ಗುಂ ೬. ಕೆ, ಕ್ಕೆ, ಗೆ, ೭. ಇ, ಉ, ಎ ಕಾರಾಗಮ ; ೮. ಇಮ್, ಅಮ್; ೯. ಪುರುಷವಾಚಕಗಳು; ೧೦. ವಚನಗಳು; ೧೧. ಆ.ವಿ. ಪ್ರಗಳು; ೧೨. ಕಾಲಸೂಚಕಗಳು; ೧೩. ವ ಕಾರದ ಬದಲಾವಣೆ (ವ>ಪ); ೧೪. ದ ಕಾರದ ಬದಲಾವಣೆ; ೧೫. ಇಕಾರಾಗಮ; ೧೬. ಇಸು ಪ್ರತ್ಯಯ; ೧೭. ಅಲ್ ಆಗಮ; ೧೮. ನಿಷೇದಾರ್ಥ; ೧೯. ಕಾಲನ್ಯೂನಗಳು; ೨೦. ವಿವಿಧ ಧಾತುಗಳ ರೂಪಾಂತರಗಳು -ಹೀಗೆ ನಾಗವರ್ಮನ ಆಖ್ಯಾತ ವಿಧಾನಂ ಎಂಬ ಪ್ರಕರಣವು ಬಹುವಾಗಿ ವಿಸ್ತಾರಗೊಂಡಿದೆ. ಕೆಲವು ಕಡೆ ಕೆಲವೊಂದು ವಿಷಯಗಳು ಪುನರಾವರ್ತನೆಗೊಂಡಿವೆ.

ನಾಗವರ್ಮನ ಈ ಪ್ರಕರಣದ ಪ್ರಭಾವ ಕನ್ನಡದ ಕೇಶಿರಾಜ ಮತ್ತು ಭಟ್ಟಾಕಳಂಕನ ಮೇಲಲ್ಲದೆ ತೆಲುಗಿನ ಕೇತನನ ಮೇಲೆಯೂ ಆಗಿದೆ. ಕೇಶಿರಾಜ ಹಾಗೂ ಭಟ್ಟಾಕಳಂಕರು ಕ್ರಿಯಾ ಪರಿಚ್ಛೇದದಲ್ಲಿ ನಾಗವರ್ಮನನ್ನೇ ಅನುಸರಿಸಿದ್ದಾರೆ. ನಾಗವರ್ಮನು ಹೇಳದೆ ಇರುವ ಸತಿಸಪ್ತಮಿ, ಕರ್ಮಣಿ ಪ್ರಯೋಗಗಳನ್ನು ಮುಂದಿನವರು ಸ್ವೀಕರಿಸಿದ್ದಾರೆ.

**ತೆಲುಗು ಕ್ರಿಯಾಪದಗಳು ::**

ತೆಲುಗು ಭಾಷೆಯಲ್ಲಿ 'ಕ್ರಿಯಾ ಪರಿಚ್ಛೇದ' ಸಂಸ್ಕೃತ ಪಾಣಿನಿಯ ಕ್ರಿಯಾ ಪ್ರಕರಣವನ್ನೇ ಆಧರಿಸಿದೆ. ಕನ್ನಡ ವ್ಯಾಕರಣಗಳಲ್ಲಿ ಕ್ರಿಯಾ ಪ್ರಕರಣಕ್ಕೆ "ಆಖ್ಯಾತ ವಿಧಾನಂ" ಅಥವಾ "ಆಖ್ಯಾತ ಪ್ರಕರಣಂ" ಎಂದೇ ಹೆಸರಿಸಲಾಗಿದೆ. ಪಾಣಿನಿಯ ಗ್ರಂಥದಲ್ಲಿರುವಂತೆ ಧಾತು, ಧಾತು ಲಕ್ಷಣ, ಧಾತು ಪರಿಗಣ -ಈ ಮೊದಲಾದುವನ್ನು ಆಂಧ್ರ ವ್ಯಾಕರಣಗಳಲ್ಲಿ ತೋರಿಲ್ಲ. ಆದರೆ ಕನ್ನಡದ ಕೇಶಿರಾಜನಾದರೂ ತನ್ನ ಶ.ಮ.ದ ದಲ್ಲಿ ಈ ವಿಭಜನೆಯನ್ನು ಮಾಡಿರುವುದನ್ನು ನೋಡಬಹುದು.

ಚಿಂತಾಮಣಿಯಲ್ಲಿ ಕ್ರಿಯೆಗಳನ್ನು ೧. ಉಪಕೃತಿ; ೨. ಪರಿಣತಿ; ೩. ಸಂವೃತಿ -ಎಂದು ತ್ರಿವಿಧವಾಗಿ ವಿಂಗಡಿಸಲಾಗಿದೆ - (ಆಂ.ಶ.ಚಿಂ. ಕ್ರಿಯಾ ೧.)

ಕೇತನನ ಕ್ರಿಯಾ ಪರಿಚ್ಛೇದವು ಕಂದ ಪದ್ಯ ೧೩೮ ರಿಂದ ೧೬೧ರವರೆಗೆ ಸಾಗಿದೆ. ಒಟ್ಟು ೨೩ ಪದ್ಯಗಳು ಇದಕ್ಕೆ ಮೀಸಲಾಗಿವೆ. ಅಲ್ಲಿ ಪ್ರಥಮ, ಮಧ್ಯಮ, ಉತ್ತಮ - ಪುರುಷತ್ರಯ ಕ್ರಿಯೆಗಳು; ಭೂತ, ವರ್ತಮಾನ, ಭವಿಷ್ಯತ್ - ಎಂಬ ತ್ರಿಕಾಲಗಳಲ್ಲಿ ಸೇರಿ ವರ್ತಿಸುತ್ತವೆ ಎಂಬುದನ್ನು ಕುರಿತು ತಿಳಿಸಲಾಗಿದೆ. ಪೆದ್ದನ ಅನಂತ -ಈ ಮೊದಲಾದ ವೈಯಾಕರಣರು ಈ ವಿಷಯದಲ್ಲಿ ಕೇತನನ ಲಕ್ಷಣವನ್ನೇ ಅನುಸರಿಸಿದ್ದಾರೆ.

ಕೇತನನ ಕ್ರಿಯಾ ಪ್ರಣಾಳಿಕೆಯು ವಿಸ್ತೃತವಲ್ಲದೇ ಕೇವಲ ದಿಕ್ ಪ್ರದರ್ಶನವಾಗಿಯೇ ಇದೆ. ಅವನು ತನ್ನ ಕೃತಿಯಲ್ಲಿ ಭೂತ, ಭವಿಷ್ಯತ್, ವರ್ತಮಾನ ಕಾಲಗಳ ಕ್ರಿಯೆಗಳನ್ನು ವಿವೇಚಿಸುತ್ತಿದ್ದಾಗಲೂ, ತದ್ಧರ್ಮಾರ್ಥಕಗಳನ್ನು ಗುರುತಿಸಿದವನಲ್ಲ. ಕನ್ನಡದಂತೆ ಭಾವಾರ್ಥಕ ಕ್ರಿಯೆಗಳನ್ನು ಹೆಸರಿಸಿದವನಲ್ಲ. ಮೇಲಾಗಿ ಪ್ರಶ್ನಾರ್ಥಕವೊಂದನ್ನೇ ಹೆಸರಿಸಿದನೇ ಹೊರತು ಅವುಗಳಲ್ಲಿರುವ ಬೇರೆ ಬೇರೆ ರೂಪಗಳನ್ನು ನೀಡಿಲ್ಲ.

ಕ್ರಿಯಾ ವಿಭಕ್ತಿ ಪ್ರತ್ಯಯಗಳನ್ನು ಉಪದೇಶಿಸುವುದರಲ್ಲಿ ಕೇತನನು ಪಾಣಿನಿ ಸಂಪ್ರದಾಯವನ್ನಲ್ಲದೆ, ಕಾತಂತ್ರ ಸಂಪ್ರದಾಯವನ್ನು ಕೂಡ ಅನುಸರಿಸಿದ್ದಾನೆಂದು ಕ್ರಿಯಾ ನಿರೂಪಣೆಯಿಂದಾಗಿ ತಿಳಿದು ಬರುತ್ತದೆ. ಅವನು ಒಟ್ಟು ೧೮ ಬಗೆಯ ಕ್ರಿಯಾ ವಿಭಕ್ತಿ ಪ್ರತ್ಯಯಗಳನ್ನು ಕೊಟ್ಟಿದ್ದಾನೆ.

**ಕೇತನನು ನಿರೂಪಿಸಿರುವ ಪ್ರತ್ಯಯಗಳು** : ಕೇತನನು ತನ್ನ ಆಂ.ಭಾ.ಭೂ. ಪದ್ಯ ೧೪೦, ೧೪೧, ೧೪೨, ೧೪೩, ೧೪೫, ೧೪೬ರಲ್ಲಿ ಆಖ್ಯಾತ ವಿಭಕ್ತಿ ಪ್ರತ್ಯಯಗಳನ್ನು ಪರಿಚಯಿಸುತ್ತಾ ಅವು ಪುರುಷ ತ್ರಯಗಳಲ್ಲಿ ವಚನ ದ್ವಯಗಳಲ್ಲಿ, ಕಾಲತ್ರಯಗಳಿಗೆ ಅನ್ವಯಿಸುವ ವಿಚಾರವನ್ನು ಕುರಿತು ವ್ಯಾಖ್ಯಾನಿಸಿದ್ದಾನೆ. ಅವನು ನಿರೂಪಿಸಿರುವ ಆಖ್ಯಾತ ವಿಭಕ್ತಿ ಪ್ರತ್ಯಯಗಳು ಹೀಗಿವೆ :

**೧. ಭೂತಕಾಲ**

| | ತೆಲುಗು | | ಕನ್ನಡ | |
|---|---|---|---|---|
| | ಏಕವಚನ | ಬಹುವಚನ | ಏಕವಚನ | ಬಹುವಚನ |
| ಪ್ರಥಮ ಪುರುಷ | (ನ್) ಎನು ನೆನು | -ಇರಿ (ರಿ) | ದಮ್ : ದರ್ ಅಮ್ | ಅರ್ |
| ಮಧ್ಯಮ ಪುರುಷ | (ದಿವಿ) ತಿವಿ | ತಿ, ತಿರಿ | ದಯ್ : ದಿರ್ ಅಯ್ | ಇರ್ |
| ಉತ್ತಮ ಪುರುಷ | (ನಿ) ತಿನಿ | ತಿಮಿ (ಮಿ) | ದೆನ್ : ದೆವು ಎನ್ | ಎವು |

**೨. ವರ್ತಮಾನಕಾಲ**

| | | | | |
|---|---|---|---|---|
| ಪ್ರಥಮ ಪುರುಷ | (ನು) ದುನು | ದರು (ರು) | ದಪಂ, | ದಪರ್ |
| ಮಧ್ಯಮ ಪುರುಷ | (ದು) ದವು | ದರು (ದವು) | ದಪಯ್, | ದಪಿರ್ |
| ಉತ್ತಮ ಪುರುಷ | ದನು | ದಮು (ದರು) | ದಪೆನ್, | ದಪೆವು |

**೩. ಭವಿಷ್ಯತ್ ಕಾಲ**

| | | | | |
|---|---|---|---|---|
| ಪ್ರಥಮ ಪುರುಷ | (ಉ) ನು | ದುರು | ವ+ಅಮ್ : ವಂ : | ವರ್ |
| ಮಧ್ಯಮ ಪುರುಷ | ದುವು | ದುರು | ವ+ಅಯ್ : ವಯ್ : | ವಿರ್ |
| ಉತ್ತಮ ಪುರುಷ | ದುನು | ದುಮು | ವ+ಎನ್ : ವೆನ್ : | ವೆವು |

ಕನ್ನಡದಂತೆ ಇಲ್ಲಿಯೂ ಕೇತನನು ಕೊಟ್ಟಿರುವ ಉದಾಹರಣೆಗಳನ್ನು ಗಮನಿಸಿದರೆ ವರ್ತಮಾನಕಾಲಕ್ಕೂ, ಭವಿಷ್ಯತ್ ಕಾಲಕ್ಕೂ ಭೇದ ಗೋಚರಿಸದು.

ಅಷ್ಟೇ ಅಲ್ಲ ಅವು (ಪ್ರತ್ಯಯಗಳು) ತದ್ಧರ್ಮ, ಆಶೀರಾರ್ಥಕಗಳ ಜೊತೆಗೆ ಸಾಮೀಪ್ಯವನ್ನು ಪಡೆದಿವೆ.

ಕನ್ನಡ ಭಾಷೆಯಲ್ಲಿ ಆ.ವಿ.ಪ್ರ.ಗಳು ಅಮ್, ಅರ್, ಅಯ್, ಇರ್, ಎನ್, ಎವು -ಎಂಬಿವು ಜೋಡಿಯಾಗಿರುತ್ತವೆ. ಏಕವಚನ ಬಹುವಚನಗಳು, ಅನುಕ್ರಮವಾಗಿ ಪ್ರಥಮ, ಮಧ್ಯಮ, ಉತ್ತಮ ಪುರುಷಗಳೆಂಬ ಸಂಜ್ಞೆಯನ್ನು ಪಡೆದಿರುತ್ತವೆ (ಕ.ಭಾ.ಭೂ. ಸೂತ್ರ ೨೦೩). ಈ ಪ್ರತ್ಯಯಗಳು ಎಲ್ಲ ಕಾಲಕ್ಕೂ ಸಮವಾಗಿಯೇ ಹತ್ತುತ್ತವೆ. ಪುರುಷತ್ರಯಕ್ಕೆ ಏಕ-ಬಹುವಚನಗಳಲ್ಲಿ ಬರುವ ಈ ಅಮ್; ಅರ್; ಅಯ್; ಇರ್; ಎನ್; ಎವುಗಳನ್ನು ಜ್ಞಾಪಕದಲ್ಲಿಟ್ಟುಕೊಳ್ಳಲು ನಾಗವರ್ಮಾದಿಗಳು ಅವುಗಳನ್ನು "ಅಮರಯಿರೆನೆವು" ಎಂದು ಕರೆದಿದ್ದಾರೆ.

ಕನ್ನಡದಲ್ಲಿ ಆಶೀರರ್ಥದಲ್ಲೂ, ವಿಧ್ಯರ್ಥದಲ್ಲೂ ಪ್ರಥಮಪುರುಷ ಪ್ರತ್ಯಯಗಳಾದ ಅಮ್ ಮತ್ತು ಅರ್‌ಗಳಿಗೆ ಬದಲಾಗಿ 'ಗೆ' ಮತ್ತು 'ಕೆ' ಬರುತ್ತವೆ ಎಂದು ನಾಗವರ್ಮನು ಹೇಳಿದ್ದಾನೆ (ಸೂತ್ರ ೨೧೫). ಉದಾ ; ಮಾಡುಗೆ, ಮಾಟ್ಕೆ, ಬರ್ಕೆ, ತರ್ಕೆ -ಇತ್ಯಾದಿ. "ಅಮರಯಿರೆನೆವು"ಗಳಿಗೆ ದ ದಪಾದಿ ಕಾಲ ಸೂಚಕಗಳು ಬರುತ್ತಿದ್ದರೆ ಕುಂ, ಗುಂ ಆದಿಗಳಿಗೆ ಇವು ಬರುವುದಿಲ್ಲ. ಕನ್ನಡ ಧಾತುಗಳಿಗೆ 'ಅಮರಯಿರೆನೆವು'ಗಳು ನೇರವಾಗಿ ಹತ್ತಿದಾಗ ಅವು ನಿಷೇಧರೂಪಗಳಾಗುವುದು, ಹಳಗನ್ನಡದಲ್ಲಿ ಇದೊಂದು ಸಾಮಾನ್ಯ ರೂಢಿಯ ವಿಷಯ, ಹೊಸಗನ್ನಡದಲ್ಲಿ ಅದು (ನಿಷೇಧ) ಅಷ್ಟಾಗಿ ಕಂಡುಬರುವುದಿಲ್ಲ.

ಕೇತನನು ಭೂತ, ಭವಿಷ್ಯತ್, ವರ್ತಮಾನ ಕಾಲಗಳಲ್ಲಿರುವ ಬೇರೆ ಬೇರೆ ಪ್ರತ್ಯಯಗಳನ್ನು ವಿಧಿಸಿರುತ್ತಾನೆ. ಆತನು ವಿಧಿಸಿರುವ ಪ್ರತ್ಯಯಗಳ ಸ್ವರೂಪವನ್ನು (ಪುರುಷ ಪ್ರತ್ಯಯ) ಹೀಗೆ ತಿಳಿಸಬಹುದು-

೧. ಭೂತಕಾಲ

| | | | |
|---|---|---|---|
| ೧. ಪ್ರಥಮ ಪುರುಷ | ಎನು - ತಿನೆನು - | (ಏಕವಚನ) | ತಿಂದನು |
| | ಇರಿ - ತಿನಿರಿ - | (ಬಹುವಚನ) | ತಿಂದರು |
| ೨. ಮಧ್ಯಮ ಪುರುಷ | ತಿ - ತಿವಿ - ತಿಂಟಿವಿ | (ಏಕವಚನ) | ತಿಂದಿ |
| | ತಿರಿ - ತಿಂಟಿವಿ - | (ಬಹುವಚನ) | ತಿಂದಿರಿ |
| ೩. ಉತ್ತಮ ಪುರುಷ | ತಿನಿ - ತಿಂಟಿನಿ - | (ಏಕವಚನ) | ತಿಂದೆನು |
| | ತಿಮಿ - ತಿಂಟಿಮಿ - | (ಬಹುವಚನ) | ತಿಂದೆವು |

## ೨. ವರ್ತಮಾನ ಕಾಲ

| | | | |
|---|---|---|---|
| ೧. ಪ್ರಥಮ ಪುರುಷ | ಡುಸು - ಅಡಿಗೆಡುಸು | (ಏ.ವ) | ಕೇಳುತ್ತಾನೆ |
| | ದರು - ಅಡಿಗೆದರು | (ಬ.ವ) | ಕೇಳುತ್ತಾರೆ |
| ೨. ಮಧ್ಯಮ ಪುರುಷ | ದು, ದವು | (ಏ.ವ) | |
| | ದರು | (ಬ.ವ) | |
| ೩. ಉತ್ತಮ ಪುರುಷ | ದನು | (ಏ.ವ) | |
| | ದಮು | (ಬ.ವ) | |

## ೩. ಭವಿಷ್ಯತ್‌ಕಾಲ

| | | |
|---|---|---|
| ೧. ಪ್ರಥಮ ಪುರುಷ | ಡುನು | (ಏ.ವ) |
| | ದುರು | (ಬ.ವ) |
| ೨. ಮಧ್ಯಮ ಪುರುಷ | ದುವು | (ಏ.ವ) |
| | ದುರು | (ಬ.ವ) |
| ೩. ಉತ್ತಮ ಪುರುಷ | ದನು | (ಏ.ವ) |
| | ದಮು | (ಬ.ವ) |

ಇವುಗಳಲ್ಲಿ ವರ್ತಮಾನಾರ್ಥಕಗಳಲ್ಲಿ ಅವನು ಕೊಟ್ಟಿರುವ ಉದಾಹರಣೆಗಳಲ್ಲಿ 'ಎ' ಎಂಬುದು ಧಾತುವಿನ ಕೊನೆಗೆ ಸೇರುವುದಾಗಿ ತಿಳಿದು ಬರುತ್ತದೆ. ಈ ಪ್ರತ್ಯಯಗಳನ್ನಾದರೂ ಸಾಧಾರಣ ಕ್ರಿಯಾ ರೂಪಗಳ ಜೊತೆಗೆ ಉದಾಹರಿಸಿದ-ವಲ್ಲವಾದರೂ ವಿಶೇಷ ರೂಪಗಳನ್ನು ಉದಾಹರಿಸಿದ ಹಾಗೆ ಕಂಡುಬರಲಿಲ್ಲ. ಎಂದರೆ 'ಪಲುಕುದುರು' ಎಂಬುದನ್ನೇ ಉದಾಹರಿಸಿದ್ದಾನೆ. ಆದರೆ 'ಫಿ[illegible]ತುರು' ಎಂಬಲ್ಲಿ ರೂಪಭೇದ ಹೇಗೆ ಸಾಧ್ಯವೆಂಬುದನ್ನು ವಿವರಿಸಲಿಲ್ಲ.

### ಭೂತಕಾಲ ಪ್ರತ್ಯಯ : :

ಕೆಲವು ಭಾಷೆಗಳಲ್ಲಿ ವರ್ತಮಾನಕಾಲದ ಕ್ರಿಯೆಗಳಾಗಲಿ ಭವಿಷ್ಯತ್‌ಕಾಲದ ಕ್ರಿಯಾಪದಗಳಾಗಲಿ ಇಲ್ಲದಿರಬಹುದು. ಆದರೆ ಭೂತಕಾಲದ ಕ್ರಿಯೆಗಳಿಲ್ಲದ ಭಾಷೆಗಳು ಇರಲಾರವು ಎಂದು ಬಹುತೇಕ ವಿದ್ವಾಂಸರ ಅಭಿಪ್ರಾಯವಾಗಿದೆ.

ತೆಲುಗು ಭೂತಕಾಲ ಸೂಚಕ ಪ್ರತ್ಯಯಗಳು ವರ್ತಮಾನ ಭವಿಷ್ಯತ್‌ಕಾಲ ಸೂಚಕ ಪ್ರತ್ಯಯಗಳಿಗಿಂತ ಪ್ರಾಚೀನ ತಮವಾದುವು ಎಂದು ತಿಳಿದು ಬಂದಿದೆ.

ಪ್ರಥಮ ಪುರುಷದ ಚೂಚೆ, ಘಟಿಂಚೆ, ಚೇಸೆ -ಮುಂತಾದ ಕ್ರಿಯಾಪದಗಳಲ್ಲಿ 'ಎತ್ವ' ಇದೆ. ಅದು ಪೂರ್ವದಲ್ಲಿ ಇತ್ವವನ್ನು ಪಡೆಯಬಹುದು.

ಪ್ರಥಮ ಪುರುಷ ಚೂಚೆ - ಏಕವಚನ

ಚೂಚಿರಿ - ಬಹುವಚನ - ಚೂಡು + ಇರಿ - ಚೂಚಿರಿ

ತೆಲುಗಿನ 'ಎ' ಹಾಗೂ 'ಇರಿ' ಭೂತಕಾಲದ ಪ್ರಥಮ ಪುರುಷ ಏಕ ಮತ್ತು ಬಹುವಚನಗಳಿಗೆ ಕನ್ನಡದಲ್ಲಿ ಅಮ್ ಮತ್ತು ಅರ್‌ಗಳು ಸಂವಾದಿಯಾಗಿವೆ.

ಪ್ರ.ಪು.ಏ.ವ ಚೂಚೆ (ಎ) ತೆಲುಗು (ನೋಡಿದಂ)

ಪ್ರ.ಪು.ಬ.ವ ಚೂಚಿರಿ (ಇರಿ) ತೆಲುಗು (ನೋಡಿದರ್)

ಮಧ್ಯಮ ಪುರುಷ ಏ.ವ. ಚೂಚು + ಇತ್ + ಇವಿ - ಚೂಚಿತಿವಿ (ನೋಡಿದಿ)

ಮ.ಪು. ಬ.ವ ಚೂಚು + ಇತ್ + ಇರಿ - ಚೂಚಿತಿರಿ (ನೋಡಿದಿರಿ)

ಮಧ್ಯಮ ಪುರುಷ ತೆಲುಗು ಈ ವಿ.ಪ್ರ.ಗಳು ಏಕವಚನ ಮತ್ತು ಬಹುವಚನಗಳಲ್ಲಿ 'ತಿವಿ' ಮತ್ತು 'ತಿರಿ' (ಇರಿ) ಆಗಿವೆ. ಕನ್ನಡದಲ್ಲಿ 'ಇ' ಮತ್ತು 'ಇರಿ'ಗೆ ಸಂವಾದಿಯಾಗಿದೆ.

| ತೆಲುಗು | ಕನ್ನಡ |
| --- | --- |
| ತಿವಿ | ಇ (ಹೊ.ಗ) - ನೋಡಿದಿ |
| ತಿರಿ | ಇರಿ (ಹೊ.ಗ) - ನೋಡಿದಿರಿ |

ಉತ್ತಮ ಪುರುಷಕ್ಕೆ ಏ.ವ. ಚೂಚು + ಇತ್ + ನಿ - ಚೂಚಿತಿನಿ (ನೋಡು + ದ + ಎನು - ನೋಡಿದೆನು)

ಬ.ವ. ಚೂಚು + ಇತ್ + ಮಿ - ಚೂಚಿತಿಮಿ (ನೋಡು + ದ + ಎವು - ನೋಡಿದೆವು)

ತೆಲುಗಿನ ಉತ್ತಮ ಪುರುಷ ಏಕ : ಬಹು ವಚನ ಪ್ರತ್ಯಯಗಳು 'ಇ' ಮತ್ತು 'ಮಿ'

ಕನ್ನಡದ ಉತ್ತಮ ಪುರುಷ ಏಕ : ಬಹು ವಚನ ಪ್ರತ್ಯಯಗಳು ಎನು ಮತ್ತು ಎವು

"ವ : ನು : ರು : ಮು : ಲ ಉತ್ತಮುನ ಕಿತ್ವವಗುನು"- ಎಂದಿದ್ದಾನೆ ಚಿಂತಾಮಣಿ ಕರ್ತೃ (ಉ ನು ರು ಮು-ಗಳ ಉಕಾರಕ್ಕೆ ಇತ್ವವು ಬರುವುದು).

ಕೇತನನಾದಿ ವೈಯಾಕರಣರು ತೋರಿದ ಭೂತಕಾಲದ ಕ್ರಿಯಾ ರೂಪಗಳು ಚಿಂತಾಮಣಿಗೆ ತೀರಾ ಸಮೀಪವಾಗಿವೆ. ಭೂತಕಾಲದಲ್ಲಿ ನಿ ವಿ ವರ್ಣಗಳಿಗೆ

ಲೋಪವು ವಿಕಲ್ಪವಾಗಿರುವುದಾಗಿ ಕೆಲವರು ತಿಳಿಸಿದ್ದಾರೆ. ಆದರೆ ಕೇತನ ಮಧ್ಯಮ ಪುರುಷ ಏಕವಚನಗಳಿಗೆ ಮಾತ್ರ ಲೋಪಬರುವುದಾಗಿ ವಿವರಿಸಿದ್ದಾನೆ. ಪ್ರಥಮ ಪುರುಷ ಏಕವಚನಗಳಿಗೆ ಕೇತನ ಲೋಪವನ್ನು ಹೇಳಲಿಲ್ಲ. ಪೆದ್ದನನಾದರೂ ನಿ ವಿ ಗಳಿಗೆ ಲೋಪವನ್ನು ಕಲ್ಪಿಸಿದ್ದಾನೆ.

**ಇನ : ಪ್ರತ್ಯಯ** : ಇನ ಎಂಬುದು ಭೂತ ಕಾಲದ ಪ್ರತ್ಯಯ

ಉದಾ : ರಕ್ಷಿಂಚಿನ

ರಕ್ಷಿಸು + ಇನ - ರಕ್ಷಿಂಚಿನ (ರಕ್ಷಿಸಿದ)

ತೆಲುಗು ಇನ ಪ್ರತ್ಯಯವು ಕನ್ನಡದಲ್ಲಿ ಭೂತಕಾಲ ಸೂಚಕ ಪ್ರತ್ಯಯ 'ದ' ವಾಗಿರುತ್ತದೆ. 'ಇಸು' ಪ್ರತ್ಯಯದ ಮೇಲೆ ದಕಾರಾಗಮವು ಬಂದರೆ, ರಕ್ಷಿಸು + ದ = ರಕ್ಷಿಸಿದ ಎಂಬಂತೆ

ಹಾಗೆಯೇ : ವಚ್ಚಿನ - ವಚ್ಚು + ಇನ (ಬಂದ - ಬರ್ + ದ - ಬಂದ)

ವಚ್ಚಿನ + ವಾಡು - ವಚ್ಚಿನವಾಡು (ಬಂದವನು)

ಇನ ಎಂಬುದು ಕ್ರಿಯಾ ಜನ್ಯ ವಿಶೇಷಕ ರೂಪವಾಗಿ ಕಾಣಬರುತ್ತದೆ. ಈ ದೃಷ್ಟಿಯಿಂದ ಕರ್ತೃ, ಕ್ರಿಯ, ಕರ್ಮಗಳಲ್ಲಿ 'ಇನ' ಎಂಬುದು ಭೂತ ಕಾಲವನ್ನು ತಿಳಿಸುವುದಾಗಿ ಹೇಳಿ ಕೇತನ - ಇನ್ನೂ ಕೆಲವು ಉದಾಹರಣೆಗಳನ್ನು ನೀಡಿದ್ದಾನೆ.

ಪಂಡಿನ, ಪಂಡಿನವಾಡು (ಬೆಳೆದ, ಬೆಳೆದವನು)

ಪೊಡಿಚಿನ - ಪೊಡಿಚಿನವಾಡು (ತಿವಿದ ; ತಿವಿದವನು)

ಕೇತನನ ಇನ ಪ್ರತ್ಯಯವು ಕನ್ನಡದ ಕಾಲ ಸೂಚಕ ಪ್ರತ್ಯಯ 'ದ' ಕಾರವಾಗಿರುವುದಲ್ಲದೆ ಕೇತನನು ತಿಳಿಸಿರುವ ವಾಡು (ಅವನು-ಸರ್ವನಾಮ) 'ಇನ'ಕ್ಕೆ ಸೇರಿದಾಗ ಅದು ಕನ್ನಡದಲ್ಲಿ ಕೃದಂತ ಭಾವನಾಮವಾಗುತ್ತದೆ.

ಉ - ಇ (ಇಂಚು) ಕನಿನ - ಕನು (ಧಾತು) + ಇನ (ಉಕಾರಲೋಪ)

ಕನಿನವಾಡು - ಕನಿನಾಡು - ಕನ್ನಾಡು ಎಂಬ ಪ್ರಯೋಗವೂ ಉಂಟು (ಆಂ.ಭಾ.ಭೂ. ೧೭೯).

ಅಸ್ತಮ + ಇಂಚು - ಅಸ್ತಮಿಂಚು (ಅಸ್ತಮಿಸು)

ಅಂತರ್ + ಇಂಚು - ಅಂತರಿಂಚು (ಅಂತರಿಸು)

ಅಸ್ತಮ, ಅಂತರ್, ಬಹಿರ್ - ಮೊದಲಾದವುಗಳಿಗೆ ಇಸು ಪ್ರತ್ಯಯ ಪರವಾಗಲು ಅವು ತತ್ಸಮ ಕ್ರಿಯಾಪದಗಳಾಗುತ್ತವೆ ಎಂದು ಕನ್ನಡ ವ್ಯಾಕರಣಗಳಲ್ಲಿ

ಹೇಳಿದೆ. ಅಂತೆ ಇಲ್ಲಿಯೂ ಕೂಡ ಇನ ಅಥವಾ ಇಂಚು ಪ್ರತ್ಯಯಗಳನ್ನು ಪಡೆವ ಅಸ್ತಮು, ಅಂತರ್ - ಎಂಬಿವು ಮುಂದೆ ಅಸ್ತಮಿಂಚು ಅಂತರಿಂಚು - ಎಂಬ ತತ್ಸಮ ಕ್ರಿಯಾ ಪ್ರಕೃತಿಗಳೇ ಆಗಿವೆ. ಅನಂತರ ಅವುಗಳಿಗೆ ಸಪ್ತವಿಭಕ್ತಿ ಪ್ರತ್ಯಯಗಳನ್ನು ಹಚ್ಚಬಹುದು. ಉದಾ : ಅಸ್ತಮಿಂಚಿನವಾಡು (ಅಸ್ತಮಿಸಿದವನು). ಅಸ್ತಮಿಂಚಿನವಾಡು ಸೂರ್ಯುಡು. ಸೂರ್ಯುಡು ನಾಮಪದವಾದರೆ, ಅಸ್ತಮಿಂಚಿನವಾಡು ಕೃದಂತವಾಗಿದೆ. ಹಾಗೆಯೇ ಉಳಿದ ಉದಾಹರಣೆಗಳು ಸುಖಿಂಚು : ಕರುಣಿಂಚು : ಶಯನಿಂಚು : ಇವು ಕನ್ನಡದಲ್ಲಿ ಸುಖಿಸು : ಕರುಣಿಸು : ಶಯನಿಸು - ಎಂದಾಗಿವೆ. ತೆಲುಗಿನ 'ಇಂಚು' ಕನ್ನಡದಲ್ಲಿ ಇಸು ಪ್ರತ್ಯಯವಾಗಿದೆ. ಕರುಣಿಂಚು - ಕರುಣಿಸು.

**ವಚನ : :**

ಆಂ.ಭಾ.ಭೂ. ಪದ್ಯ ೧೪೬, ೧೪೭ ಗಳಲ್ಲಿ ಸ್ಥಾವರಕರ್ಯರ್‌ಗಳಿಗೆ ಹತ್ತುವ ವಚನಗಳನ್ನು ಕುರಿತು ಹೊಗಳಿದ್ದಾನೆ. "ಸ್ಥಾವರ ತಿರ್ಯಕ್ಕುಗಳ ಕ್ರಿಯಾ ಪದಗಳಿಗೆ ಬಹುವಚನದ ಬದಲಾಗಿ ಏಕವಚನವೂ, ದೇವ ಮನುಷ್ಯಾದಿಗಳ ಕ್ರಿಯೆಗಳಿಗೆ ಏಕವಚನ ಮತ್ತು ಬಹುವಚನಗಳನ್ನು ಪಡೆದಿರುತ್ತವೆ ಎಂದಿದ್ದಾನೆ" (ಆಂ.ಭಾ.ಭೂ. ಸೂತ್ರ ೧೪೬, ೧೪೭ ಕೇತನ). ಅವುಗಳಿಗೆ ಉದಾಹರಣೆ ಕೊಡಲಿಲ್ಲ. ಪೆದ್ದನ, ತಿಮ್ಮಕವಿ, ಸೂರಕವಿ, ಚಿನ್ನಯಸೂರಿ -ಈ ಮೊದಲಾದವರು ಇದನ್ನು ಕುರಿತು ಪ್ರಸ್ತಾಪಿಸಿದ್ದಾರೆ. ೧೪೦ ರಿಂದ ೧೪೭ರ ವರೆಗಿನ ಪದ್ಯಗಳು ಸಮರ್ಪಕ ಕ್ರಿಯಾಪದಗಳು. ಅವುಗಳಿಗೆ ಹತ್ತುವ ಪ್ರತ್ಯಯಗಳು, ಆಗಮಗಳು ಮುಂತಾದುವನ್ನು ಕುರಿತು ತಿಳಿಸಿವೆ.

**ಚುಟ - (ಪ್ರತ್ಯಯ) : :**

ಪ್ರೇರಣಾರ್ಥದಲ್ಲಿ 'ಚುಟ' ಎಂಬ ಪ್ರತ್ಯಯವು ಕ್ರಿಯೆಯ ಕೊನೆಯಲ್ಲಿ ಸೇರುವುದಾಗಿ ಕೇತನ ತಿಳಿಸಿರುತ್ತಾನೆ (ಆಂ.ಭಾ.ಭೂ. ಪದ್ಯ ೧೫೦). ಇದಕ್ಕೆ ಕೇತನ ಕೊಟ್ಟ ಉದಾಹರಣೆಗಳು : ಪಲಿಕಿಂಚುಟ, ಅಲಿಗಿಂಚುಟ, ವಲಪಿಂಚುಟ ತಲಪಿಂಚುಟ ಎಂಬವು.

ಮೇಲಿನ ಉದಾಹರಣೆಗಳಲ್ಲಿಯ ಪಲುಕು, ಅಲುಗು, ವಲವು, ತಲವು -ಗಳ ಉಕಾರಾಂತ ಧಾತುಗಳಿಗೆ ಚುಟ ಸೇರಿದಾಗ ಇತ್ವ ಬಂದು, ಮಧ್ಯದಲ್ಲಿ ಬಿಂದು ಆಗಮವಾಗಿದೆ.

ಚಿನ್ನಯ ಸೂರಿ ಪಲುಕು + ಇಂಚು - ಪಲಿಕಿಂಚು ಎಂದಿದ್ದಾನೆ.

ಕೆಲವೊಮ್ಮೆ 'ಟ' ಪ್ರತ್ಯಯವು ಬರುವುದು. ಉದಾ : ಪಲುಕು + ಟ - ಪಲುಕುಟ. ಹೀಗೆ ಚುಟ : ಇಂಚು : ಇಂಚುಕ್ : ಟ -ಎಂಬ ಪ್ರತ್ಯಯಗಳು ಪ್ರೇರಣಾರ್ಥಕಗಳಲ್ಲಿ ಬರುವುದಾಗಿ ತಿಳಿಯಬಂತು. ಇವುಗಳಿಗೆಲ್ಲ ಕನ್ನಡದಲ್ಲಿ 'ಉಸು' ಎಂಬ ಪ್ರತ್ಯಯ ಸಂವಾದಿಯಾಗುವುದು.

ಪಲಿಕಿಂಚುಟ (ಮಾತನಾಡಿಸುವುದು) - ಕೇತನ ಮತ್ತು ಸೂರಿಗಳ ಉದಾಹರಣೆಗಳಲ್ಲಿ ವ್ಯತ್ಯಾಸವಿದೆ.

ಉಳಿದ ಉದಾಹರಣೆ : ೧. ವಂಚಿಂಚು -ಸಂಸ್ಕೃತ ಧಾತುವಿಗೆ 'ಇಂಚು' ಪ್ರತ್ಯಯ

೨. ಅಗಲಿಂಚು - ಅಂಗಲಾದಿಗಳಿಗೆ ಇಂಚುಕ್ ಪ್ರತ್ಯಯ

೩. ಪಂಡಿಂಚು - ಪಂಡು ದೇಶ್ಯನಾಮ

೪. ನುತಿಂಚು - ನುತಿ ನಾಮ ಪ್ರಕೃತಿ

ನನ್ನಯ ಪೂರ್ವದ ಶಾಸನಗಳಲ್ಲೂ ಇವನ್ನು ಕಾಣಬಹುದು.

ಉದಾ : ಎತ್ತಿಞ್ಚು, ಕಟ್ಟಿಞ್ಚು (ಯುದ್ಧ ಮಲ್ಲನ ಶಾಸನ)
(ಎತ್ತಿಸಿ), (ಕಟ್ಟಿಸಿ)

ಕೆಲವು ವಿದ್ವಾಂಸರು ಇಂಚು ಆಗಮಕ್ಕೆ ಬದಲು ಕೆಲವು ಕಡೆ 'ಇಯಿಂಚುಟ' (ಇಯುಡಾಗಮವು) ಬಂದಿದೆ ಎಂದಿದ್ದಾರೆ.

ಉದಾ : ವರಿಂಚುಟು - ವರಿಯಿಂಚುಟ ಎಂಬಂತೆ

ವರಿಂಚು, ವರಿಯಿಂಚು, ವರಿಂಚುಟ, ವರಿಯಿಂಚುಟ - ಲೋಪ : ಆಗಮಗಳನ್ನು ಕಾಣುತ್ತೇವೆ. ಕನ್ನಡದ ಇಸು, ತೆಲುಗಿನಲ್ಲಿ 'ಇಂಚು' ಆಗಿರುವುದಲ್ಲದೆ, ತೆಲುಗಿನ ಇಂಚುಟ, ಕನ್ನಡದಲ್ಲಿ ಇಸು + ವುದು = ಇಸುವುದು ಎಂದಾಗಿದೆ.

ಕೇತನನು ಈ ಪ್ರತ್ಯಯಗಳು ಸಂಸ್ಕೃತ ಧಾತುಗಳ ಮೇಲೆ ಹತ್ತುವುದಾಗಿ ಹೇಳಿದರೆ ಚಿನ್ನಯಸೂರಿ ಇವು ತೆಲುಗು ಧಾತುಗಳ ಮೇಲೆ ಹತ್ತುವುದಾಗಿ ತಿಳಿಸಿದ್ದಾನೆ. ನನ್ನಯನಲ್ಲಿ ತೆಲುಗು ಧಾತುಗಳ ಮೇಲೆ 'ಇಯುಡಾಗಮ'ವೂ ಕಾಣಬರುತ್ತದೆ. ಕೇತನ ಉದಾಹರಿಸಿದ ಕ್ರಿಯೆಗಳೆಲ್ಲವೂ ಸಂಸ್ಕೃತ ಧಾತುಗಳ ಮೇಲೆ ಹತ್ತಿದ ತೆಲುಗಿನ ಪ್ರತ್ಯಯ 'ಚುಟ'ವೇ ಆಗಿದೆ. ಹೀಗೆ ಪ್ರೇರಣಾರ್ಥದ ಮೇಲೆ ಹತ್ತುವ ಪ್ರತ್ಯಯಗಳ ಬಗ್ಗೆ ವಿದ್ವಾಂಸರಲ್ಲಿ ಭಿನ್ನಾಭಿಪ್ರಾಯಗಳಿವೆ.

ಕನ್ನಡದ ಆ.ವಿ. ಪ್ರತ್ಯಯಗಳು ಕೇವಲ ಕ್ರಿಯೆಯ ಮೂಲ ಧಾತುಗಳಿಗೆ ಮಾತ್ರ ಹತ್ತದೆ, ನಾಮಲಿಂಗಗಳಿಗೂ ಹತ್ತಿರುವಂತೆ, ತೆಲುಗು ಭಾಷೆಯ ದೇಶೀಯ ನಾಮ ಪ್ರಕೃತಿಗಳ ಮೇಲೂ ಹತ್ತಿರುವುದು ಗಮನಿಸಬೇಕಾದ ಅಂಶ.

ಚುಟ ಪ್ರತ್ಯಯವನ್ನು ಕುರಿತು ಹೇಳುವಲ್ಲಿ ಕೇತನನು ಎರಡು ಪದ್ಯಗಳನ್ನು ಬಳಸಿಕೊಂಡಿದ್ದಾನೆ (ಪ. ೧೫೦, ೧೫೧).

ಪುಟ ಚೇತನ್ನೆನಸೊರುಲ
ಪುಟ ಚುಟಚೇ ನ್ನೆನ ನೊರಲ ಬುತ್ತೆಂಚುಟ ಚೇ
ಯುಟ ಯುಟಚೇ ನಗು ನನಿಯಾ
ಪಟುಮತಿಯಾಗು ಸೂತ್ರದಂಡಿ ಪ್ರಕಟಮುಚೇತನ್

ಚುಟ ಪ್ರತ್ಯಯದ ಉದಾಹರಣೆಗೆ ಮುಂದಿನ ಪದ್ಯ-

ಪಲುಕುಟ ಪಲಕಿಂಚುಟಯುನು
ಸಲುಗುಟ ಯಲಿಗಿಂಚುಟಯನು ಸಬಲಲು ಮದಿಲೋ
ವಲಚುಟ ವರಪಿಂಚುಟಯು ನು
ತಲಂಚುಟ ತಲಪಿಂಚುಟಯು ನುದಾಹರಣಂಬುಲ್

ಕೇತನನು ಉದಾಹರಿಸಿದ ವರಿಂಚುಟ : ವರಿಯಿಂಚುಟ
ನುತಿಂಚುಟ : ನುತಿಯಿಂಚುಟ

ಇವುಗಳು ಅಸಂಯುಕ್ತವಾಗಿ ಎರಡು ಲಘುಗಳ ಸಂಸ್ಕೃತ ಶಬ್ದಗಳ ಮೇಲೆ 'ಇಯ್' ಎಂಬುದು ವಿಕಲ್ಪವಾಗಿ ಬರುವುದೆಂಬ ವ್ಯಾಕರಣ ಲಕ್ಷಣಕ್ಕೆ ಅನುಸಾರವಾಗಿದೆ.

ಟ : ಅಟಮ್ : ಅಡಮ್ : 'ಉಟ' ಎಂಬುದು ಪರವಾಗಿರುವ ಪದಗಳೇ ಕ್ರಿಯಾಪದಗಳೆಂದು ಕೇತನ ಹೇಳಿದ್ದಾನೆ (ಪ. ೧೪೯).

ಚಿನ್ನಯಸೂರಿ ಕೂಡ 'ಟವರ್ಣಾಂತ ಧಾತುಗಳನ್ನು' ತನ್ನ ಬಾಲವ್ಯಾಕರಣದಲ್ಲಿ ತಿಳಿಸಿರುತ್ತಾನೆ. ನನ್ನಯನ ಭಾರತದಲ್ಲಿ ಇದಕ್ಕೆ ಉದಾಹರಣೆಗಳಿವೆ.

ಅಗು + ಟ - ಅಗುಟ

"ಅಗುಟಯುನ್" (ಆದಿ ೨-೧೫೪)

ಚೆಪ್ಪು + ಟ - ಚೆಪ್ಪುಟ

"ಚೆಪ್ಪುಟಯುನ್" (ಆದಿ ೧-೩೩)

"ಟವರ್ಣಕಂಬು ಭಾವಂಬುನಂದಗು" (ಚಿನ್ನಯಸೂರಿ ಬಾ.ವ್ಯಾ. ೩-೨೯)

"ಭಾವಾರ್ಥದಲ್ಲಿ ಟವರ್ಣವು ಸೇರುವುದು" 'ಟ' ಸೇರಿದಾಗ ಧಾತುಗಳೆಲ್ಲವೂ ನಾಮಗಳಾಗುವುವು.

೧. ವಂಡು (ಧಾತು) + ಟ - ವಂಡುಟ (ಅಡುಗೆ ಮಾಡುವುದು)

ವ್ಯವಹಾರದ ಭಾಷೆಯಲ್ಲಿ ಅದು ಭಾವಾರ್ಥವಲ್ಲಿ 'ಅಟಮ್' ಅಥವಾ 'ಅಡಮ್' ಎಂಬ ಪ್ರತ್ಯಯಗಳು ಧಾತುಗಳಿಗೆ ಸೇರುವುವು.

೨. ವಂಡು + ಅಟಮ್ - ವಂಡುಟಂ

ಪ್ರಯೋಗ : ಆಮೆ ವಂಡುಟ

೩. ತಿನು + ಅಟಮ್ - ತಿನುಟಂ - ತಿನ್ನುವುದು (ಕನ್ನಡ)

**ಪ್ರಯೋಗ :**

ಮೇಂ ತಿನುಟಂ - ನಾವು ತಿನ್ನುವುದು (ಕನ್ನಡ) ತೆಲುಗಿನ ಟ : ಅಟಮ್ - ಅಡಮ್‌ಗಳು ಕನ್ನಡದಲ್ಲಿ 'ಉದು' ಪ್ರತ್ಯಯವಾಗಿದೆ. 'ತಿನ್ನುವುದು ಅನ್ನ' ಎಂಬಲ್ಲಿ 'ತಿನ್ನುವುದು' ಕೃನ್ನಾಮ. ಕೃದಂತದಿಂದ ಆದದ್ದು 'ಉ ದು' ಎಂಬುದು ಕೃತ್ ಪ್ರತ್ಯಯ. ಅಂತೆ 'ಟ' 'ಅಟಮ್'ಗಳು ತೆಲುಗಿನಲ್ಲಿ ಕೃದಂತ ಪ್ರತ್ಯಯಗಳು. ಇಂಗ್ಲಿಷ್‌ನಲ್ಲಿ ಟ : ಅಟಮ್ ಉದು-ಗಳಿಗೆ ಸಂವಾದಿಯಾಗಿ 'to' ಅಥವಾ 'ing' ಬರುವುದುಂಟು. to eat (ತಿನುಟ (ತೆ) > ತಿನ್ನುವುದು (ಕ) ತಿನ್ನುವುದಕ್ಕೆ ಎಂದು ಅರ್ಥ) 'ತಿನ್ನುವುದು' ಎಂಬುದಕ್ಕೆ ಭಾವನಾಮ ಅನ್ನವೇ.

to eat : ತಿನುಟ : ತಿನ್ನುವುದು - ಎಲ್ಲವು ಕೃನ್ನಾಮ ಪದಗಳು. to : ಟ : ಅಟಮ್ : ಉದು - ಎಂಬಿವು ಕೃದಂತ ಪ್ರತ್ಯಯಗಳು.

'ಅಟ' ಎಂಬ ಪದವು 'ಅಡುವುದು' ಎಂಬುದರ ಅರ್ಥವೇ. ಅಡುವುದು ಎಂಬಲ್ಲಿಯ 'ಉದು' ಅಥವಾ 'ಅಡುಟ' ಎಂಬಲ್ಲಿಯ ಟ : ಅಟಮ್ -ಇವು ತೆಲುಗಿನಲ್ಲಿಯೇಕೆ ಎಲ್ಲ ದ್ರಾವಿಡ ಭಾಷೆಗಳಲ್ಲಿಯೂ ವಿಶೇಷ ಕೃತ್ ಪ್ರತ್ಯಯವೆನಿಸಿಕೊಳ್ಳುತ್ತವೆ. ಕರ್ಮಣಿ ಅರ್ಥದಲ್ಲಿ 'ಟ' ಪ್ರತ್ಯಯವು ಹತ್ತುವುದುಂಟು.

ತೆಲುಗು ವೈಯಾಕರಣರು ಇದನ್ನು ಅಸಮರ್ಪಕ ಕ್ರಿಯಾಪದಗಳಲ್ಲಿ ತಂದಿದ್ದಾರೆ. ಭಾವಾರ್ಥದಲ್ಲಿ 'ಟ' ವರ್ಣ ವಿಷಯವನ್ನು ಮಾತ್ರ ಹೇಳದೆ, ಕೇತನನು ಬದಲಾಗಿ ಉಟ, ಚುಟ, ಯುಟ, ವುಟ, ಪುಟ - ಎಂದು ನಾಲ್ಕೈದು ಪ್ರತ್ಯಯಗಳನ್ನೂ ಉದಾಹರಿಸಿದ್ದಾನೆ.

ಏ : ಓ : ಓ - (ಪ್ರತ್ಯಯಗಳು) :

ಪ್ರಾರ್ಥನೆ, ಪ್ರಶ್ನಾರ್ಥ, ಸಂಶಯ, ನಿಶ್ಚಯಾರ್ಥ, ದೂಷಣೆ - ಇವುಗಳಲ್ಲಿ 'ಏ' ಪ್ರತ್ಯಯವು ಬರುವುದಾಗಿ ಕೇತನ ಮುಂದಿನ ೨ ಪದ್ಯಗಳಲ್ಲಿ ತಿಳಿಸಿರುತ್ತಾನೆ. ಸಂಶಯಾತ್ಮಕ ಸ್ಥಳಗಳಲ್ಲಿ ಒ : ಓ ಪ್ರತ್ಯಯಗಳು ಬರುವುದಾಗಿಯೂ ಹೇಳಿದ್ದಾನೆ.

ಪ್ರಾರ್ಥನಾರ್ಥಂಬು ಜೋಟನು ಬ್ರಶ್ನಜೋಟ,
ಸಂಶಯಂಬುಂಜೋಟ ನಿಷ್ಚಯಮುಜೋಟ,
ದೆಗಡುಜೋಟನು ನೇತ್ವಂಬು ತೆನುಗುನಂದು
ನೋಯುಲೊಂಡುನು ಸಂಶಯಂಬೊಂಮುಜೋಟ (ಪ. ೧೫೪)

ಉದಾ : ಪೋವೇ, ವಾನಲುಗಲವೇ, ನೀವೇ, ಪೊಲಿಯವೇ - ಇವು ಕೇತನನು ಏಕಾರಕ್ಕೆ ಕೊಟ್ಟ ಉದಾಹರಣೆಗಳು. ಚಿತ್ತಶಾಂತಿ ಯೊನರ್ಪವೇ, ನಿಯೋಗಿಂಚಿತೇ ಅರುಗುನೋ ತಲಂಚಿರೊ - ಎಂಬಿವು ನನ್ನಯನ ಪ್ರಯೋಗಗಳು.

ಚಿನ್ನಯಸೂರಿ ಬಾಲವ್ಯಾಕರಣದಲ್ಲಿ ವಿನವೆ, ವಿನವೇ, ವಿನರೆ, ವಿನರೇ, ವಿನುಮವೇ, ವಿನುತುವೇ, ವಿನತುರೆ, ವಿನತುರೇ ಇತ್ಯಾದಿ ಉದಾಹರಣೆಗಳನ್ನು ಕೊಟ್ಟಿದ್ದಾನೆ. ಕನ್ನಡದಲ್ಲಿ ಇವು ಸಂಬೋಧನೆಯ ಶಬ್ದಗಳೆನಿಸಿಕೊಂಡಿವೆ. ಸಂಬೋಧನೆಯ ಪ್ರತ್ಯಯಗಳಾದ ಏ,ಅರಾ, ಇರಾಗಳು ಹತ್ತಿ, ಬಾರಾ, ಕೇಳಾ, ಕೇಳೆ- ಎಂದಾಗುವುವು. "ಬಾರಾ ಮರಾಳಿಕಾಗಮನವೇ".

ಏಗು : ತೆಂಚು : : 'ಏಗು ಎಂಬಾದಿ ಪದಗಳಿಗೆ ತೆಂಚು ಎಂಬುದು ಪರವಾಗಿ ಅರುಗುದೆಂಚು, ಎತೆಂಚು ಎಂದಾಗುವುವು' ಎಂದು ಕೇತನನು ಆಂ. ಭಾ. ಭೂ. ೧೫೬ನೆಯ ಪದ್ಯದಲ್ಲಿ ಹೇಳಿದ್ದಾನೆ.

ಎಂಚಗ ನೇಗು ಪದಮುತುದ
ದೆಂಚುಟಯಗು ಗ್ರಿಯಲನರುಗುದೆಂಚುಟಪ್ಪೆ ತೇ
ತೆಂಚುಟ ಚನುದೆಂಚುಟ ನಡ
ತೆಂಚುಟ ತೋತೆಂಚು ಟನಗದೆಲ್ಲಂಬಗುಚುನ್

ನನ್ನಯನ ಪೂರ್ವ ಶಾಸನಗಳಲ್ಲೂ ಅರುಗುದೆಂಚು, ತೋತೆಂಚು, ಏಗುತೆಂಚು- ಎಂಬೀ ಪ್ರಯೋಗಗಳು ಬಳಕೆಯಾಗಿವೆ.

ತೆಂಚು > ತ್ರೆಂಚು ಧಾತುವಿನ ರೂಪಾಂತರ

'ಅಗು' ಮೊದಲಾದ ಧಾತುಗಳಿಗೆ ತೆಂಚು ಧಾತು ಪರವಾದಾಗ ತೆಂಚು ಧಾತುವಿನ ತ ಕಾರಕ್ಕೆ ದ ಕಾರಾದೇಶವಾಗುವುದು.

ಉದಾ : ಆಗು+ತೆಂಬು-ಆಗದೆಂಬು (ತ-ದ)

ಏಗು+ತೆಂಬು-ಏಗುದೆಂಬು (ತ-ದ)

ಆಗು : ಏಗು : ತೋವು - ಎಂಬೀ ಉತ್ವಗಳಿಗೆ ಪರವಾದ 'ತಂಬು'ವಿನ 'ತ' ಕಾರವು 'ದ' ಕಾರವಾಗಿ 'ದೆಂಬು' ಆಗುವುದಾಗಿ ಸೂರಿ ಕೂಡ ತನ್ನ ಬಾಲವ್ಯಾಕರಣದಲ್ಲಿ ನಿರೂಪಿಸಿರುತ್ತಾನೆ. ಕೊಟ್ಟ ಉದಾಹರಣೆಗಳೆಲ್ಲವೂ ಉತ್ವಾಂತಗಳೇ. ಕೇತನನಾದರೂ ಲಕ್ಷಣವನ್ನು ನಿರೂಪಿಸಲಿಲ್ಲ. ಕೇವಲ ಉದಾಹರಣೆಗಳನ್ನು ಮಾತ್ರ ಕೊಟ್ಟಿರುತ್ತಾನೆ. ಉಕಾರಾಂತ ಶಬ್ದಗಳ ಮೇಲೆ ಎಕಾರವು ಬರಲು ಅಲ್ಲಿ ತ ಕಾರವು ದ ಕಾರವಾಗುವುದೆಂದು ಅವನು ಕೊಟ್ಟ ಉದಾಹರಣೆಗಳಿಂದ ತಿಳಿದು ಬರುತ್ತದೆ.

'ತ' ಕಾರ 'ದ' ಕಾರವಾಗದೇ ಇರುವುವರ ಔಚಿತ್ಯವಾದರೂಯೇನು? ಈ ವಿಷಯದಲ್ಲಿ ಸೂರಿ - ಕೇತನನಿಗಿಂತಲೂ ಮೇಲು. ಸೂರಿ ಇದಕ್ಕೆ ಸಂಬಂಧಿಸಿದಂತೆ ಮೂರು ಸೂತ್ರಗಳನ್ನು ಕೊಟ್ಟಿದ್ದಾನೆ : ಅವನ ಉದಾಹರಣೆ :

ಅರುತೆಂಬು ; ಅರುಗುದೆಂಬು (ತ-ದ)

ಏತೆಂಬು ; ಏಗುದೆಂಬು (ತ-ದ)

ಬಸುತೆಂಬು ; ಬಸುದೆಂಬು (ತ-ದ)

"ಅರುಗು - ಮೊದಲಾದ ಉಕಾರಂತ ಧಾತುಗಳಿಗೆ 'ತಂಬು' ಪರವಾದರೆ ಕೊನೆಯ 'ಗು' (ಕೆಲವೊಮ್ಮೆ) ಲೋಪಿಸುವುದೆಂದು"ಸೂರಿ ಅಭಿಪ್ರಾಯಪಟ್ಟಿದ್ದಾನೆ.

ಅರುದೆಂಬು (ಗುಕಾರ ಲೋಪ)

ಅರುಗು ತೆಂಬು

ಅರುಗುದೆಂಬು (ತ-ದ ಕಾರವಾಗಿದೆ)

ಏತೆಂಬು (ಗು ಕಾರ ಲೋಪ)

ಏಗು ತೆಂಬು

ಏಗುದೆಂಬು (ತ-ದ ಕಾರವಾಗಿದೆ)

'ತ' ಕಾರ 'ದ' ಕಾರವಾಗುವುದು ಸೂರಿಯಲ್ಲಿ ವಿಕಲ್ಪವೆಂದು ಅವನು ಕೊಟ್ಟಿರುವ ಉದಾಹರಣೆಗಳಿಂದ ತಿಳಿದು ಬರುತ್ತದೆ.

ಕ್ತ್ವಾರ್ಥಕ : ಧಾತುಗಳಿಗೆ ಸೇರುವ 'ಕ್ತ್ವಾ' ಆದಿ ಪ್ರತ್ಯಯಗಳಿಂದ ಒದಗುವ ಅರ್ಥಕ್ಕೆ 'ಕ್ತ್ವಾರ್ಥ' ಎಂದು ಹೆಸರು.

"ಕ್ತ್ವಾರ್ಥದಲ್ಲಿ ಭೂತ ಕಾಲದಲ್ಲಿಯ ಕ್ರಿಯೆ ತುದಿಯಲ್ಲಿ ಇಕಾರವು ನಿಲ್ಲುವುದು" ಉದಾ : ಘಂಟಂಚಿ - ಮೊದಲಾದವು. ಪೋಯಿ, ವಚ್ಚಿ, ತಿನಿ ಎಂಬಿವು ಕ್ತ್ವಾರ್ಥಕ ಶಬ್ದಗಳು. ಕನ್ನಡದಲ್ಲಿ ಹೋಗಿ, ಬಂದು, ಸತ್ತು, ಕೇಳಿ -ಎಂಬಂತೆ.

ಕೇತನ ಕ್ತ್ವಾರ್ಥವನ್ನು (ಸಂಜ್ಞೆ) ಪ್ರತ್ಯೇಕವಾಗಿ ಹೇಳದೆ ಇತ್ವಾಂತವು ಬರುವುದಾಗಿ ಮಾತ್ರ ತಿಳಿಸಿದ್ದಾನೆ. "ಒಕ ಕರ್ತಚೇಯು ಪನುಲಕು ಪ್ರಕಟಿತಮುಗಾ ಮೊದಲಯಿನ ಪನಿ (ಯಂದು) ಇತ್ವಾಂತಮು" (ಕರ್ತೃ ಮಾಡುವ ಕೆಲಸಗಳು ಪ್ರಾರಂಭವಾದಾಗ ಇತ್ವಾಂತ) ಎಂದಿದ್ದಾನೆ. (ಪದ್ಯ ೧೫೭)

ಉದಾ : ಚೇಸಿ, ಚೇಯು (ಧಾತು) + ಇ - ಚೇಸಿ ಅಂತೆ ಚೂಚಿ, ವರಿಂಚಿ, ವಿರಮಿಂಚಿ - ಇವುಗಳನ್ನು ನೋಡಬಹುದು. ಪೋಯಿ, ಚೂಚಿ - ಇವುಗಳು ಇವೆ (ಹೋಗಿ ; ನೋಡಿ).

ಎಡವು + ಅಕ - ಎಡವಕ (ನಿಷೇಧಾರ್ಥ)

ಚೇಯು + ಅಕ - ಚೇಯಕ (ನಿಷೇಧಾರ್ಥ)

ತೋಚು + ಅಕ - ತೋಚಕ (ನಿಷೇಧಾರ್ಥ)

ಮೇಲಿನ ಉದಾಹರಣೆಗಳೆಲ್ಲವು ವ್ಯತಿರೇಕಾರ್ಥಕ್ಕೆ ಸಂಬಂಧಿಸಿದವು. ಮಾಡದೇ ಇರುವ ಕಾರ್ಯಾರ್ಥದಲ್ಲಿ 'ಅಕ' ಬರುವುದು. ಅದೇ ವ್ಯತಿರೇಕಾರ್ಥವೆನಿಸುವುದು. ಮಾಡುವ ಕೆಲಸವಾದರೆ ಅಲ್ಲಿ 'ಉ' ಅಥವಾ 'ನು' ಬರುವುವು. ಅದಕ್ಕೆ ತುಮುನ್ನರ್ಥಕನೆನ್ನುವರು. ತಿನುಟ-ತಿಂಟ;ಕೊನುಟ-ಕೊಂಟ; ವಿನುಟ-ವಿಂಟ- ಇವು ತುಮುನ್ನರ್ಥಕ ಪದಗಳು. ಅಂಟ, ಈಂಟ, ಗ್ಯ, ತೊಂಟ - ಎಂಬಂಥ ಪ್ರಯೋಗಗಳನ್ನು ತಿಕ್ಕನನಲ್ಲೂ ಕಾಣಬಹುದು. ಇವು ಅಸಾಧುಗಳೆಂದು ಅಹೋಬಲ ಪಂಡಿತ ಹೇಳಿದ್ದಾನೆ. ಅಲ್ಲದೆ ಅವನು ಕೇತನನ ಮತವನ್ನು ಸಂಪೂರ್ಣವಾಗಿ ಖಂಡಿಸಿದ್ದಾನೆ.

ಕೇತನನು ಒಂದೇ ಒಂದು ಪದ್ಯದಲ್ಲಿ (ಪದ್ಯ ೧೫೭) ಕ್ತ್ವಾರ್ಥಕ ವ್ಯತಿರೇಕಾರ್ಥಕ, ತುಮುನ್ನರ್ಥಕಗಳ ಕ್ರಿಯೆಗಳನ್ನು ಕುರಿತು ವಿವೇಚಿಸಿರುವುದು ಅರ್ಥ ದೃಷ್ಟಿಯಿಂದ ಸಮಗ್ರವಾದುದಲ್ಲ.

ದೀರ್ಘ: ಹ್ರಸ್ವ: ಅನಂತರ ಕೇತನನು ಕೆಲವು ದೀರ್ಘಾಕ್ಷರಗಳು ಹ್ರಸ್ವಾಕ್ಷರಗಳಾಗುವುದಾಗಿ ಆ ಹ್ರಸ್ವಾಕ್ಷರಗಳು ದ್ವಿತ್ವವನ್ನು ಪಡೆಯುವುದಾಗಿ ವಿವರಿಸಿದ್ದಾನೆ (ಪ. ೧೭೦).

ಉದಾ : ರಾ-ರಮ್ಮು ; ಪೋ - ಪೊಮ್ಮು

ಚಿನ್ನಯ ಸೂರಿಯೂ ಕೂಡ ಇದನ್ನು ಸಾಧಿಸಿದ್ದಾನೆ.

ಉ-ಗ : : ವಿಧ್ಯರ್ಥಕ ಧಾತುಗಳ ಕೊನೆಯಲ್ಲಿ ಉಕಾರವಿದ್ದಲ್ಲಿ ಅದು 'ಮ' ಕಾರವಾಗುತ್ತದೆಂದು ಪದ್ಯ ೧೭೨ರಲ್ಲಿ ತಿಳಿಸಲಾಗಿದೆ.

ಉದಾ: ಪೊರವು + ಅರಿಸೇನ - ಪೊರವುಮರಿಸೇನ .

ಆಶೀರರ್ಥಕ ಪ್ರತ್ಯಯಗಳು : ಎಡುನ್, ತಾನ್, ಗಾವುತನ್

ಎಡಮ್, ತಮು, ಗಾವುತಲು

ಆಶೀರರ್ಥಕ ಪ್ರತ್ಯಯಗಳ ಬಗ್ಗೆ ವಿದ್ವಾಂಸರಲ್ಲಿ ಭಿನ್ನಾಭಿಪ್ರಾಯಗಳಿವೆ. ಮೇಲಿನ ಪ್ರತ್ಯಯಗಳನ್ನು ಕುರಿತು ಕೇತನ ವ್ಯಾಖ್ಯಾನಿಸಿದ್ದಾನೆ.

ನನ್ನಯ್ಯನ ಪ್ರಯೋಗಗಳು - ಎಡುನ್ (ಅದಿ -೧-೧೦೫)

ಎಡಮು (ಅದಿ -೨-೮೭)

ತಾವುತಮು (ಅದಿ -೮-೬೩)

ಕೇತನನು ತನ್ನ ದಶಕುಮಾರ ಚರಿತೆಯಲ್ಲಿ ಎಡುನ್: ತನ್: ಗಾವುತನ್: ಗಾವುತಮು- ಎಂಬೀ ನಾಲ್ಕು ಪ್ರತ್ಯಯಗಳನ್ನು ಆಶೀರರ್ಥಕದಲ್ಲಿ ಉಪಯೋಗಿಸಿದ್ದಾನೆ. 'ಗಾತ' ಎಂಬುದೊಂದು ಪ್ರತ್ಯಯವೂ ಆಶೀರರ್ಥಕ ಪ್ರತ್ಯಯವೇ ಆಗಿದೆ. ಉದಾ : ಇಂಚುಗಾತ.

ಆಶೀರರ್ಥಕ ಪ್ರತ್ಯಯವನ್ನು ಕುರಿತು ವಿವೇಚಿಸುವ ಪದ್ಯವೊಂದು-

ದೀವೆನ ಕೆಡಮಯುಗಾತಯು
ಗಾವುತಯುನ್ ದೆನುಗು ತವುಲ ತಬ್ಬಂಬುಲಲೋ
ಶ್ರೀ ವೆಲಿಗೆಡಮಧಿಪುಡು ಮೇಲ್
ಗಾವಿಂಚುಗಾತ ಮೇಲುಗಾವುತಯನಗನ್ (ಪ. ೧೭೧)

ಕೇತನನಲ್ಲಿಲ್ಲದ ಕೆಲವು ವಿಶೇಷ ಪ್ರತ್ಯಯಗಳನ್ನು ಬೇರೆ ಬೇರೆ ಅರ್ಥಗಳಲ್ಲಿ ತೆಲುಗು ಲಾಕ್ಷಣಿಕರು ವಿವರಿಸಿರುತ್ತಾರೆ. ಅವುಗಳಲ್ಲಿ ಕೆಲವು ಹೀಗಿವೆ:

**ತದ್ಧರ್ಮಾರ್ಥಕ ಪ್ರತ್ಯಯಗಳು:** ಕ್ರಿಯೆಗಳನ್ನು ನಾಲ್ಕು ವಿಧವಾಗಿ ವಿಂಗಡಿಸುತ್ತಾ ಚಿಂತಾಮಣಿಕಾರ ಮೊದಲನೆಯದಾಗಿ 'ತದ್ಧರ್ಮಾರ್ಥಕ' ವನ್ನು ಹೇಳಿರುತ್ತಾನೆ. ಇಂಥ ವಿಭಾಗಕ್ರಮ ಸಂಸ್ಕೃತದಲ್ಲಿಯಾಗಲಿ ಇಲ್ಲವೇ ದ್ರಾವಿಡ ಭಾಷೆಗಳಲ್ಲಾಗಲೀ ಎಲ್ಲೂ ಇಲ್ಲ. ತೆಲುಗು ಭಾಷೆಗೆ ಮಾತ್ರ ಸೇರಿದ ಈ ಸಂಜ್ಞಾಕಲ್ಪನೆ ವಿಶಿಷ್ಟವೆನ್ನಬಹುದು.

ತದ್ಧರ್ಮಾರ್ಥಕಗಳನ್ನು 'ಧರ್ಮಕ್ರಿಯೆಗಳು' ಎಂದು ಒಂದು ಕಡೆ ಕರೆಯುತ್ತಾರೆ. ಆದರೆ ಕೇತನ, ಪೆದ್ದನ ಈ ಸಂಜ್ಞೆಗಳನ್ನು ಬಳಸಲಿಲ್ಲ. ಅಂದಮಾತ್ರಕ್ಕೆ ಇಂಥ ಕ್ರಿಯಾರೂಪಗಳು ಇರಲಿಲ್ಲವೆಂದಾಗಲಿ ಇಲ್ಲವೆ ಯಾರೂ ನಿರೂಪಿಸಲಿಲ್ಲವೆಂದಾಗಲಿ ಅರ್ಥವಲ್ಲ. ಚಿನ್ನಯಸೂರಿಯು ಇದನ್ನು 'ತದ್ಧರ್ಮಮುಲು' ಎಂದು ಕರೆದಿದ್ದಾನೆ.

**ಅಡಿಗೆಡುನ್:** ಅಡಿಗೆದರು (ಕೇಳುತ್ತಾನೆ: ಕೇಳುತ್ತಾರೆ) ಎಂಬಂಥ ರೂಪಗಳನ್ನು ಕೇತನ, ಪೆದ್ದನಾದಿಗಳು ವರ್ತಮಾನಕಾಲದಲ್ಲಿ ಮಾತ್ರ ಬಳಸಿದ್ದಾರೆ.

ನನ್ನಯ ಭಾರತದಲ್ಲಿ ಧಾತುಗಳ ಮೇಲೆ ಕೆಲವು ಪ್ರತ್ಯಯಗಳನ್ನು ಸೇರಿಸುವುದರೊಂದಿಗೆ ತದ್ಧರ್ಮ ಕ್ರಿಯಾ ರೂಪ ಪದಗಳು ಏರ್ಪಟ್ಟಿರುವುದನ್ನು ನಾವು ಕಾಣಬಹುದು. ಅವನು ನಿರೂಪಿಸಿದ ಉದಾಹರಣೆಗಳೆಲ್ಲವೂ ಭವಿಷ್ಯತ್ ಕಾಲಕ್ಕೆ ಅನ್ವಯಿಸುವುವು.

ಉದಾ : ವಚ್ಚೆಡುನು, ವಚ್ಚೆಡಿನಿ, ವಚ್ಚೆದರು

ವಚ್ಚುವಾಡು, ವಚ್ಚೆಡುವಾಡು, ವಚ್ಚೆಡುನು

ಮೇಲಿನ ಉದಾಹರಣೆಗಳಲ್ಲಿ ಎಡು ಪ್ರತ್ಯಯ. ಅಂತೆ ರಕ್ಷಿಂಚೆಡಿ (ಎಡಿ) ರಕ್ಷಿಂಚುನೆಡ (ಎಡ) ಎಂಬ ರೂಪಗಳಿವೆ.

ಘಟಿಂಚೆಡುನ್ - ಎಂಬಂಥ ಎಡಾಗಮವು ತತ್ಸಮ -ಕ್ರಿಯೆಗಳಲ್ಲಿ ನನ್ನಯನ ರಚನೆಗಳಲ್ಲಿ ನಾಲ್ಕು ಕಡೆ ಬಂದಿರುವುದನ್ನು ಕಾಣುತ್ತೇವೆ. ಇದೊಂದು ವಿಶೇಷ. ಸುವ್ಯವಸ್ಥಿತವಾಗಿ ತದ್ಧರ್ಮಾರ್ಥಕವು ಕ್ರಿಯಾ ರೂಪಗಳನ್ನು ಚೆನ್ನಾಗಿ ವಿವರಿಸಿರುವ ಕೀರ್ತಿ ಚಿನ್ನಯ ಸೂರಿಗೆ ಸಲ್ಲುತ್ತದೆ. ಸೂರಿಯ ಪ್ರತ್ಯಯಗಳು ಹೀಗಿವೆ:

ವಂಡು + (ಡುಚ್) ನು - ವಂಡುನ್

ವಂಡು + ದು + ರು - ವಂಡುದುರು

ವಂಡು + ದ + ವು - ವಂಡುದುವು

ವಂಡು + ದ + ಮು- ವಂಡುದುಮು - ಎಂಬಂಥ ರೂಪಗಳನ್ನು ಸಾಧಿಸಿ ನಂತರ ಬಹುಳವಾಗಿ ಎಡಾಗಮ- ಎಡಿಗಾಗಮಗಳನ್ನು ನಿರೂಪಿಸಿರುತ್ತಾನೆ. ಅರ್ವಾಚೀನ ಲಾಕ್ಷಣಿಕರಾದರೂ ಎಡಾಗಮ, ಎಡಿಗಾಗಮ ರೂಪಗಳನ್ನೇ ಭವಿಷ್ಯತ್‌ಕಾಲ ಸೂಚಕಗಳೆಂದು ಪರಿಗ್ರಹಿಸಿದ್ದಾರೆ. ಕೇತನಾದಿಗಳು ಭ.ಕಾ.ಸೂ. ಪ್ರತ್ಯಯಗಳನ್ನು ಕೆಳಗಿನಂತೆ ತೋರಿಸಿ ಅವುಗಳು ತದ್ಧರ್ಮ ಎಂದು ಹೇಳಿದರು.

**ಆತ್ಮ ನೇಪದ:** ಫಲ ಕರ್ತೃವಿಗೆ ಸೇರಲು ಅಂಥ ಶಬ್ದಗಳು ಆತ್ಮನೇ ಪದಗಳು ಎನಿಸುವುವು. ಉದಾಹರಣೆ : ಘಟಿಂಚುಕೊನಿ

ನೇರ್ಚಿಕೊನಿ; ನೇರ್ಚುಕೊನಿ

ಅಂದಿಕೊನಿ; ಅಂದುಕೊನಿ

ಅಂಟಿಕೊನಿ; ಅಂಟುಕೊನಿ

ಚೇಸಿಕೊನಿ; ಚೇಸುಕೊನಿ

**ಕರ್ಮಾರ್ಥಕ** : ಕರ್ಮವನ್ನೇ ಪ್ರಧಾನವಾಗಿ ವ್ಯಕ್ತಪಡಿಸುವುದು ಕರ್ಮಾರ್ಥಕವೆನಿಸಿಕೊಳ್ಳುವುದು. ಕರ್ಮಾರ್ಥಕ ಪದಗಳಲ್ಲಿ ಕರ್ಮಪದವು ಪ್ರ.ವಿ.ಪ್ರ.ವಾಗಿದ್ದು ಕರ್ತೃ ತೃ.ವಿ.ಪ್ರ.ವಾಗಿರುತ್ತದೆ. ಕೆಲವೊಮ್ಮೆ ಕರ್ತೃವಿಲ್ಲದೇ ಹೋಗಬಹುದು. ಉದಾ: ಇಲ್ಲು ಕಟ್ಟಿರಿ, ಬೆಲ್ಲಮಮ್ಮುಡುನ್ನದಿ, ತೋಟಚೇಸಿನದಿ ಇತ್ಯಾದಿ. ಕನ್ನಡ ಭಾಷೆಯಲ್ಲಿ ಕರ್ಮಣಿ ಪ್ರಯೋಗದ ಬಗ್ಗೆ ನಾಗವರ್ಮನು ವಿವರಿಸಲಿಲ್ಲ. ಆದರೆ ಕೇಶಿರಾಜನು ಇವನ್ನು ಕುರಿತು ವ್ಯಾಖ್ಯಾನಿಸಿದ್ದಾನೆ. ತೆಲುಗು ಮೊದಲಾದ ದ್ರಾವಿಡ ಭಾಷೆಗಳಲ್ಲಿ ಸ್ವತಂತ್ರವಾದ ಕರ್ಮರ್ಥಕ ಪ್ರಯೋಗಗಳ ಪದ್ಧತಿ ಇರುವುದಾಗಿ ಮೊದಮೊದಲು ತೋರಲಾಯಿತು. ಅನಂತರ ಅದನ್ನು ಬಿಡಬೇಕಾಯಿತು. ಪಡು + ಅಲ್ ಪ್ರತ್ಯಯಗಳಿಂದ ಕರ್ಮಣಿ ಪ್ರಯೋಗ ಸಿದ್ಧಿಸಿರುವುದನ್ನು ಕರ್ನಾಟಕಾಂಧ್ರ ಭಾಷೆಗಳೆರಡರಲ್ಲೂ ಕಾಣಬಹುದು. ಕೇಶಿರಾಜನು ಇದನ್ನೇ ಸಮರ್ಥಿಸಿಕೊಂಡಿದ್ದಾನೆ.

ಕನ್ನಡದಲ್ಲಿ 'ಪಡು' ವಿದ್ದಂತೆ, ತೆಲುಗಿನಲ್ಲೂ ಪ್ರತ್ಯಯ ಕರ್ಮಣಿಯಲ್ಲಿ 'ಪಡು' ಎಂದೇ ಇದೆ. 'ಪಡು' ಎಂಬ ಧಾತುವಿನ ಅರ್ಥ 'ಅನುಭವಿಸು' ಎಂದು ವೇದ್ಯವಾಗುತ್ತದೆ. ಉದಾ : ಮಾಟಲು ಪಡ್ಡಾನು (ಪಡು ಧಾತು) ವ್ಯವಹಾರದಲ್ಲಿ ಇದು ಕೂಡದು. ಕಾರಣ "ಮಧ್ಯ ಕಾಲದ ಶಾಸನಗಳಲ್ಲಿ, ಕಾವ್ಯಗಳಲ್ಲಿ ಕರ್ಮಣಿಯು ವಿಶೇಷವಾಗಿ ಪ್ರಯೋಗವಾಗುತ್ತಿತ್ತು ಎಂದು ತಮಿಳು ಸಂಶೋಧಕರಿಂದ ಅಭಿಪ್ರಾಯ ವ್ಯಕ್ತವಾಗಿದೆ" ಒಟ್ಟಿನಲ್ಲಿ ಸಂಸ್ಕೃತ ಭಾಷೆಯ ಪ್ರಭಾವದಿಂದಾಗಿ ಕರ್ಮಣಿ ಪ್ರಯೋಗವು ತೆಲುಗು ಮೊದಲಾದ ದ್ರಾವಿಡ ಭಾಷೆಗಳಲ್ಲಿ ಸ್ಥಿರಪಟ್ಟಿರುವುದಾಗಿ ತಿಳಿಯಬಹುದೇನೋ?"

ಚೇದರ್ಥಕ : ತದ್ಧರ್ಮಾರ್ಥಕ ವಿಶೇಷಣ ಪದಗಳಿಗೆ ನಾಡು ಎಂಬ ಪದವನ್ನು ಸೇರಿಸಲಾಗಿ ಅಲ್ಲಿ ಚೇದರ್ಥಕ ಏರ್ಪಡುವುದು.

ಉದಾ : ಒಡಂಬಡಿನನಾಡು - ಒಡಂಬಡಿನ + ನಾಡು - ಒಡಂಬಡಿನನಾಡು.

ತೆಲುಗಿನ 'ನಾಡು' ಕನ್ನಡದಲ್ಲಿ ಅಂದು ಅಥವಾ ಆದರೆ ಎಂಬ ಅರ್ಥವನ್ನು ಕೊಡುವುದು (ಒಪ್ಪಿಕೊಂಡಂದು; ಒಪ್ಪಿಕೊಂಡದ್ದೇ ಆದರೆ)-

**ಸಮೀಕ್ಷೆ :**

೧. ನಾಗವರ್ಮನ ಕ. ಭಾ. ಭೂ.ದ 'ಆಖ್ಯಾತ ವಿಧಾನಂ' ಎಂಬುದು ಕ್ರಿಯೆಗೆ ಸಂಬಂಧಿಸಿದ ಪ್ರಕರಣವಾಗಿದೆ. ಅಲ್ಲಿ ಸೂತ್ರ ೧೯೪ ರಿಂದ ೨೪೦ರ ವರೆಗೂ ಆ.ವಿ.ಪ್ರ.ಗಳ ನಿರೂಪಣೆ ಇದೆ. ಕೇತನನ ಆಂ. ಭಾ.ಭೂ.ದಲ್ಲಿ 'ಆಖ್ಯಾತ' ಎಂಬ ಸಂಜ್ಞೆಯಿರದೆ ಕ್ರಿಯಾ ಪರಿಚ್ಛೇದವೆಂದು ತಿಳಿಯಲಾಗಿದೆ. ಆಖ್ಯಾತವೆಂದಾಗಲಿ ಇಲ್ಲವೆ ಕ್ರಿಯಾ ಪ್ರಕರಣವೆಂದಾಗಲಿ ಪ್ರತ್ಯೇಕ ವಿಭಜನೆಯನ್ನು ಮಾಡಲಿಲ್ಲ. ಕೇತನ ೧೩೮ ರಿಂದ ೧೬೧ರ ವರೆಗಿನ ಪದ್ಯಗಳಲ್ಲಿ ಕ್ರಿಯೆಗಳಿಗೆ ಸಂಬಂಧಿಸಿದ ವಿಷಯಗಳನ್ನು ನಿರೂಪಿಸಿದ್ದಾನೆ. ಅವನು ಕ್ರಿಯೆಗೆ ಬಳಸಿಕೊಂಡ ಒಟ್ಟು ಪದ್ಯಗಳು ೨೪. ನಾಗವರ್ಮನು ಬಳಸಿಕೊಂಡ ಒಟ್ಟು ಸೂತ್ರ ೪೭.

೨. ಕ್ರಿಯಾ ಪ್ರಕರಣದ ವಿಭಜನೆಗಳಾದ ಧಾತು, ಕಾಲಸೂಚಕ ಪ್ರತ್ಯಯಗಳನ್ನು ನಾಗವರ್ಮನು ವಿಭಜಿಸಿದಂತೆ ಕೇತನನು ವಿಭಾಗ ಕ್ರಮವನ್ನು ಕೈಕೊಂಡಿಲ್ಲ. ಕನ್ನಡ ಅಂ: ಅರ್: ಅಯ್: ಇರ್: ಎನ್: ಎವು- ಎಂಬೀ ಆಖ್ಯಾತ ಪ್ರತ್ಯಯಗಳನ್ನು ಜ್ಞಾಪಕದಲ್ಲಿಟ್ಟುಕೊಳ್ಳಲು ಅಮರಯಿರೆನೆವು ಎಂಬ ಸೂತ್ರವಿದೆ. ತೆಲುಗು ಭಾಷೆಯಲ್ಲಿ ಇಂಥ ಸೂತ್ರವಿಲ್ಲ.

೩. ಕನ್ನಡ ಭಾಷೆಯಲ್ಲಿ ಆಖ್ಯಾತ ಪ್ರತ್ಯಯಗಳಾದ ಅಮ್, ಆರ್, ಅಯ್, ಇರ್, ಎನ್, ಎವುಗಳಲ್ಲದೆ ಸ್ತ್ರೀಲಿಂಗ ಸೂಚಿ ಪ್ರತ್ಯಯ 'ಅಳ್' ಸೇರುವುದು. ಮೇಲಾಗಿ ಅದು, ಅವುಗಳಿಗೆ ಉದು, ಉವು ಎಂಬೆರಡು ಪ್ರತ್ಯಯಗಳನ್ನು ನಾಗವರ್ಮ ಹೆಸರಿಸಿದ್ದಾನೆ. ಒಟ್ಟಾರೆ ನಾಗವರ್ಮನು ವಿವೇಚಿಸಿರುವ ಹ.ಗ.ಆ.ವಿ.ಪ್ರ.ಗಳ ಸಂಖ್ಯೆ ಒಂಬತ್ತು ಆಗಿದೆ. ಪೂರ್ವಕಾಲದ ಶಾಸನಗಳಲ್ಲಿ ಕೆಲವೊಂದು ಪ್ರತ್ಯಯಗಳು ದೀರ್ಘವನ್ನೋ ಅಥವಾ ದ್ವಿತ್ವವನ್ನೋ ಪಡೆಯುವುದನ್ನು ನೋಡಬಹುದು.

**ಕೇತನನು ನಿರೂಪಿಸಿರುವ ಕ್ರಿಯಾ ಪ್ರತ್ಯಯಗಳು:**

ಪ್ರ.ಪು.ಎನು: ಇರಿ; ಮ. ಪು. ತಿ: ತಿವಿ : ತಿರಿ; ಉ.ಪು. ತಿನಿ: ತಿಮಿಗಳಾಗಿವೆ. ಇವು ಭೂತಕಾಲದವು, ವರ್ತಮಾನಕಾಲದಲ್ಲಿ ದುನು : ದರು, ದು : ದವು;

ದರು ; ದನು : ದಮು ಭವಿಷ್ಯತ್ ಕಾಲದಲ್ಲಿ ಉನು : ದುರು ; ದುವು : ದುರು : ದುನು : ದುಮುಗಳಾಗಿವೆ.

೪. ಕನ್ನಡ ಮತ್ತು ತೆಲುಗು ಭಾಷೆಯ ಮೇಲಿನ ಪ್ರತ್ಯಯಗಳನ್ನು ಗಮನಿಸಿದಲ್ಲಿ ಎರಡು ಭಾಷೆಗಳಲ್ಲೂ ಭೂತ ಕಾಲದ ಕ್ರಿಯಾಪದಗಳ ಪ್ರತ್ಯಯಗಳಲ್ಲಿ ಸ್ಪಷ್ಟತೆ ಕಂಡುಬರುತ್ತದೆ. ವರ್ತಮಾನ : ಭವಿಷ್ಯತ್ - ಕಾಲದ ಪ್ರತ್ಯಯಗಳಲ್ಲಿ ನಿರ್ದಿಷ್ಟತೆ ಇಲ್ಲ. ಕುಂ: ಗುಂ - ಆದಿ ಪ್ರತ್ಯಯಗಳನ್ನು ಕನ್ನಡದಲ್ಲಿ ಪಡೆದ ಪದಗಳು ನಿರ್ದಿಷ್ಟವಾದ ಕಾಲವನ್ನು ವ್ಯಕ್ತಪಡಿಸುತ್ತಿಲ್ಲ. ಕಾರಣ ದ್ರಾವಿಡ ಭಾಷೆಗಳಲ್ಲಿ ಕ್ರಿಯಾ ಪದವೇ ಇಲ್ಲ ಎಂಬ ಮಾತಿಗೆ ಆಸ್ಪದವಾಗಿದೆ.

೫. ಕನ್ನಡ ಭಾಷೆಯಲ್ಲಿ ಧಾತುಗಳ ವಿಭಜನೆಯನ್ನು ಸುಮಾರು ನಾಲ್ಕು ಅಥವಾ ಐದು ಭಾಗಗಳನ್ನಾಗಿ ಮಾಡಬಹುದು : ೧. ಮೂಲಧಾತುಗಳು; ೨. ಸಾಧಿತ ಧಾತುಗಳು; ೩. ಸಂಸ್ಕೃತ 'ತ್' ಆದಿಯಾಗಿವುಳ್ಳ ಶಬ್ದಗಳಿಗೆ 'ಇಸು' ಪ್ರತ್ಯಯವನ್ನು ಹಚ್ಚಿ ಮಾಡಿಕೊಂಡ ಧಾತುಗಳು; ೪. ಪ್ರೇರಣಾರ್ಥ ಧಾತುಗಳು; ೫. ಕ್ವಚಿತ್ತಾಗಿ ಕಾಣುವ ವಿಶೇಷ ಪ್ರತ್ಯಯಗಳು.

ತೆಲುಗು ಭಾಷೆಯಲ್ಲಿ ಅದರಲ್ಲೂ ಕೇತನನಲ್ಲಿ ಧಾತುಗಳ ವಿಭಜನೆ ಕಾಣಬರುತ್ತಿಲ್ಲ. ಆಂಧ್ರ ಶಬ್ದ ಚಿಂತಾಮಣಿಯಲ್ಲಿ ಮಾತ್ರ ೧. ಉಪಕೃತಿ; ೨. ಪರಿಣತಿ; ೩. ಸಂಪ್ರೃತಿ ಎಂಬ ವಿಭಜನೆ ಕಾಣಬರುತ್ತದೆ.

೬. ಆ.ವಿ.ಪ್ರ.ಗಳು ಕೇವಲ ಧಾತುಗಳಿಗೆ ಮಾತ್ರ ಹತ್ತದೆ ನಾಮ, ಸರ್ವನಾಮ; ಸಂಖ್ಯೆ, ಗುಣವಚನ- ಇತ್ಯಾದಿಗಳಲ್ಲಿ ಹತ್ತುವುದನ್ನು ಕಾಣುವಂತೆ, ತೆಲುಗು ಭಾಷೆಯಲ್ಲೂ ಕಾಣುತ್ತೇವೆ. ಈ ದೃಷ್ಟಿಯಿಂದ ಕನ್ನಡದವಾಗಲಿ ಇಲ್ಲವೆ ತೆಲುಗಾಗಲಿ ಧಾತುವಿಗೆ ಹತ್ತುವ ಪ್ರತ್ಯಯಗಳು. ಇದಮಿತ್ಥಂ ಎಂಬಂತೆ ಇಲ್ಲ. ಕ್ರಿಯಾಪದಗಳನ್ನು ನಾಮಪದಗಳನ್ನಾಗಿ ಮಾಡಿಕೊಳ್ಳುವ ಬಗೆ ಎರಡು ಭಾಷೆಯಲ್ಲೂ ಇವೆ. ಇವನ್ನು ಎರಡು ಕೃತಿಗಳಿಂದಲೂ ತಿಳಿಯಬಹುದಾಗಿದೆ.

ಆಖ್ಯಾತ ಪ್ರತ್ಯಯಗಳು ಕೆಲವು ಸಂದರ್ಭಗಳಲ್ಲಿ ನಾಮಪದಗಳಿಗೂ ಹತ್ತುತ್ತವೆ. ಆದರೆ ಎಲ್ಲ ಪ್ರತ್ಯಯಗಳು ಎಲ್ಲ ಕಾಲಕ್ಕೂ ಹತ್ತುವುದಿಲ್ಲ.

೭. 'ಅಮರಯಿರೆನೆವು'- ಗುಂಪಿನಲ್ಲಿ ಅಡಕವಾಗಿರುವ ಆ.ಪ್ರ.ಗಳೂ ಹಾಗು ಅವುಗಳಿಗೆ ಪರ್ಯಾಯವಾಗಿ ಬರುವ ಗುಂ: ಕುಂ- ಇವುಗಳ ಬಗ್ಗೆ ಎರಡೂ ಗ್ರಂಥಗಳು ತಿಳಿಸಿವೆ.

೮. ಕನ್ನಡ ಇಲ್ಲವೆ ತೆಲುಗು ಭಾಷೆಗಳಲ್ಲಿ 'ದ' ಕಾರವೇ ಸಾರ್ವತ್ರಿಕವಾಗಿ ಬರುವ ಭೂ.ಕಾ.ಪ್ರ.

೯. ಕನ್ನಡದ ವರ್ತಮಾನಕಾಲ ಸೂಚಕ ಪ್ರತ್ಯಯ 'ದಪ'ವು ಕೆಲವು ಸಲ ದ್ವಿತ್ವವನ್ನು ಪಡೆಯುತ್ತದೆ. ಕೆಲವೊಮ್ಮೆ ದಪಂ ಜೊತೆಗೆ ಗುಂ: ಕುಂ ಎಂಬಿವು ಕೂಡ ವರ್ತಮಾನ ಕಾಲ ಸೂಚಕ ಪ್ರತ್ಯಯಗಳಾಗಿರುವುದನ್ನು ಕ.ಭಾ.ಭೂ. ಪ್ರಯೋಗಗಳ ಮೂಲಕ ನೋಡುತ್ತೇವೆ. ಅಲ್ಲದೆ ಉತು, ಉತ್ತು, ಉತೆ, ಉತ್ತೆ - ಎಂಬ ನಾಲ್ಕು ರೂಪಗಳು ವರ್ತಮಾನಕಾಲದಲ್ಲಿವೆ. ಈ ಕಾರಣ ಕನ್ನಡದಲ್ಲಿ ವರ್ತಮಾನಕಾಲಕ್ಕೆ ಒಂದು ನಿರ್ದಿಷ್ಟ ಪ್ರತ್ಯಯವಿಲ್ಲ.

ತೆಲುಗು ಭಾಷೆಯಲ್ಲಿ ಕೇತನನು ವರ್ತಮಾನ ಕಾಲ ಸೂಚಕವನ್ನು ಕುರಿತು ಹೇಳಿದ್ದಾನೆ. ಅವನ ಕೃತಿ ಆಂ. ಭಾ. ಭೂ ಸೂತ್ರ ೧೪೩, ೧೪೪ರಲ್ಲಿ ಇವಕ್ಕೆ ಸಂಬಂಧಿಸಿದ ಪ್ರತ್ಯಯಗಳನ್ನು ಕಾಣಬಹುದು. ಎಲ್ಲ ಕ್ರಿಯೆಗಳಲ್ಲಿಯ ವರ್ತಮಾನದಲ್ಲಿ 'ಚು' ವರ್ಣವು ಬರುವುದಾಗಿ ತಿಳಿಸಿದೆ. ಇದರ ಬಗ್ಗೆ ತೆಲುಗು ವಿದ್ವಾಂಸರಲ್ಲಿ ಭಿನ್ನಾಭಿಪ್ರಾಯಗಳಿವೆ.

೧೦. ಭವಿಷ್ಯತ್ ಕಾಲ ಸೂಚಕ ಪ್ರತ್ಯಯದ ಬಗ್ಗೆಯೂ ಅಸ್ಪಷ್ಟತೆ ಇದೆ. 'ಪತ್ವ'- ಪತ್ವ-ಗಳೇ ಕನ್ನಡದಲ್ಲಿ ಭೂ. ಕಾ.ಸೂ. ಪ್ರತ್ಯಯಗಳು. ತೆಲುಗಿನಲ್ಲಿ ದಿ: ದು ವರ್ಣಗಳು. ನನ್ನಯನಲ್ಲಿ ಡು: ರು ಕಾಣಬರುತ್ತಿದೆ. ತಲಡು : ಕಲರು.

ತೆಲುಗಿನ ವರ್ತಮಾನಾರ್ಥಕವೇ (ಕ್ರಿಯೆಯೇ) ಭವಿಷ್ಯದ್‌ರ್ಥಕವಾಗಿ ವ್ಯವಹರಿಸುವುದಾಗಿ ತಿಳಿದುಬರುತ್ತದೆ ಎಂಬ ಮಾತನ್ನು ಬ್ರೌನ್ ಎಂಬುವನು ಹೇಳಿದ್ದಾನೆ.

೧೧. ಕೇತನನು ನಿರೂಪಿಸಿದ ಕ್ರಿಯೆಗಳನ್ನು ಕುರಿತು ಶ್ರೀ ಹರಿಶಿವ ಕುಮಾರ್ ಎಂಬುವರು ಸಮರ್ಪಕ ಮತ್ತು ಅಸಮರ್ಪಕಗಳೆಂದು ವಿಂಗಡಿಸಿರುವರು. ಸಮರ್ಪಕ ಕ್ರಿಯೆಗಳ ವಿವರಣೆ ಪದ್ಯ ೧೪೦, ೧೪೧, ೧೪೨, ೧೪೩, ೧೪೪ ೧೪೫- ಈ ಆರು ಪದ್ಯಗಳಲ್ಲಿ ಮೂಡಿಬಂದಿದೆ. ಅವು ಭೂತಕಾಲದಲ್ಲಿ ವರ್ತಿಸುತ್ತಿವೆ. ಅಲ್ಲಿ ಪ್ರತ್ಯಯಗಳ ಆಗಮ, ಆದೇಶಗಳನ್ನು ಕಾಣಬಹುದು. ಇವುಗಳಲ್ಲಿ 'ಇನ' ಪ್ರತ್ಯಯದ ವ್ಯಾಖ್ಯಾನವೇ ಹೆಚ್ಚು. ಕೇತನನ 'ಇನ' ಪ್ರತ್ಯಯಕ್ಕೆ ಸಂವಾದಿಯಾಗಿ ಕನ್ನಡ 'ದ' ಭೂತಕಾಲ ಸೂಚಕ ಪ್ರತ್ಯಯ ವ್ಯವಹರಿಸುತ್ತದೆ.

೧೨. ಅಸಮರ್ಪಕ ಕ್ರಿಯೆಗಳಲ್ಲಿ ಬರುವ ಪ್ರತ್ಯಯಗಳು ಹಲವಿವೆ.

ಟಿ : ಅಟಿಮ್: ಪ್ರೇರಣಾರ್ಥದಲ್ಲಿ ಚುಟಿ, ಇಂಚು; ಇಂಚುಕ್; ಪ್ರಾರ್ಥನೆ, ಪ್ರಶ್ನಾರ್ಥ. ಸಂಶಯ, ನಿಶ್ಚಯಾದಿಗಳಲ್ಲಿ ಏ ಹಾಗೂ ಒ ಪ್ರತ್ಯಯಗಳು ಏಗು, ತೆಂಚು ಇತ್ಯಾದಿ.

ಮೇಲಿನ ಪ್ರತ್ಯಯಗಳಲ್ಲಿಯ 'ಇಂಚು' ಪ್ರತ್ಯಯಕ್ಕೆ ಮಾತ್ರ ಕನ್ನಡದ 'ಇಸು' ಸಂವಾದಿಯಾಗಿದೆ.

೧೩. ನಿಷೇಧ : ಪ್ರತಿಷೇಧದ ಕ್ರಿಯಾಪದಗಳ ವಿವರಣೆ ಕೇತನನಲ್ಲಿ ಹೆಚ್ಚಾಗಿಲ್ಲ ನಾಗವರ್ಮನಲ್ಲಿ ಸ್ಪಷ್ಟವಾಗಿ ಬಂದಿರುತ್ತದೆ.

೧೪. ಪ್ರೇರಣಾರ್ಥಕ; ೨. ಸಂಭಾವನಾರ್ಥಕ; ೩. ತದ್ಧರ್ಮಾರ್ಥಕ; ೪. ಆಶೀರರ್ಥಕ; ೫. ವಿಧ್ಯರ್ಥಕ; ೬. ಪ್ರಾರ್ಥನೆ, ಪ್ರಶ್ನಾರ್ಥ, ಸಂಶಯ, ನಿಶ್ಚಯ, ರೂಪಣಾರ್ಥ- ೭. ಭಾವಾರ್ಥಕ; ೮. ಕರ್ಮಾರ್ಥಕ, ೯. ಕ್ತ್ವಾರ್ಥಕ ಮುಂತಾದ ಅರ್ಥಗಳಲ್ಲಿ ಕ್ರಿಯೆಗಳಿವೆ. ಕನ್ನಡದ ನಾಗವರ್ಮನಲ್ಲಿ ಇವುಗಳಲ್ಲಿ ಕೆಲವಿಲ್ಲ. ಉದಾ: ಕರ್ಮಾರ್ಥಕ ಧಾತುವಿನ ಪ್ರತ್ಯಯಗಳ ಬಗ್ಗೆ ವಿವರಣೆಯೇನೂ ಇಲ್ಲ.

೧೫. ನಾಗವರ್ಮನು ತಿಳಿಸಿರುವ ಆಖ್ಯಾತ ಪ್ರತ್ಯಯಗಳಾದ ಅಮ್: ಅರ್: ಅಯ್: ಇರ್: ಎನ್: ಎವು- ಎಂಬಿವು ಒಂದು ಕಾಲಕ್ಕೆ ಸ್ವತಂತ್ರವಾದ ಸರ್ವನಾಮಗಳಾಗಿದ್ದವು ಎಂದು ತಿಳಿದು ಬರುತ್ತದೆ. ಅಂತೆ ತೆಲುಗು ಭಾಷೆಯ ಪ್ರತ್ಯಯಗಳಿಗೂ ಈ ಮಾತು ಅನ್ವಯಿಸುತ್ತದೆ. ಕನ್ನಡ ಮತ್ತು ತೆಲುಗು ಭಾಷೆಯ ಪುರುಷತ್ರಯ ಪ್ರತ್ಯಯಗಳಲ್ಲಿ ಹೆಚ್ಚು ವ್ಯತ್ಯಾಸವಿಲ್ಲವೆಂಬುದನ್ನು ಈಗಾಗಲೇ ನೋಡಿದ್ದೇನೆ.

ಅಂತೆಯೇ ಪ್ರಶ್ನಾರ್ಥಕ ಸರ್ವನಾಮ, ಆತ್ಮಾರ್ಥಕ ಸರ್ವನಾಮ, ಸಾಧಿತ ಸರ್ವನಾಮ- ಈ ಮೊದಲಾದವುಗಳಲ್ಲಿ ಕನ್ನಡ- ತೆಲುಗು ಭಾಷೆಗಳೆರಡಲ್ಲಿ ಅಷ್ಟು ವ್ಯತ್ಯಾಸ ಕಾಣದು.

ಉತ್ತಮ, ಮಧ್ಯಮ, ಆತ್ಮಾರ್ಥಕ- ಸರ್ವನಾಮಗಳಲ್ಲಿ ಎರಡೂ ಭಾಷೆಗಳಿಗೂ ಲಿಂಗಭೇದವಿಲ್ಲ; ವಚನ ಭೇದವನ್ನು ಮಾತ್ರ ಕಾಣಬಹುದು.

-ಹೀಗೆ " ಈ ಪುರುಷವಾಚಕ ಪ್ರತ್ಯಯಗಳು ರೂಪಾಂತರಗೊಂಡು ಆಖ್ಯಾತ ಪ್ರತ್ಯಯಗಳು ಎಂಬ ಹೆಸರಿನಿಂದ ಬೇರೆ ಬೇರೆ ಧಾತುಗಳಿಗೆ ಹತ್ತಬಲ್ಲವು". ಇವು ಬೇರೆ ಬೇರೆ ಧಾತುಗಳಿಗಲ್ಲದೆ ಗುಣವಚನ, ಸಂಖ್ಯಾವಾಚಕ ಮತ್ತು ನಾಮಪದಗಳಿಗೂ ಸಹ ಹತ್ತಬಲ್ಲವು. ಇದು ದ್ರಾವಿಡ ಭಾಷೆಗಳ ಒಂದು ವೈಶಿಷ್ಟ್ಯವೆನ್ನಬಹುದು".[೧೦]

೧೬. ಕ್ರಿಯಾ ವಿಶೇಷಣಗಳಾದ- ಅನ್ನು, ದಲ್, ಪೋಲ್, ಇಲ್ಲ, ಎನ್ತು ಮೇಲ್, ಮೇಲೆ, ಮೇಲುಂ, ಎನ್ತುಂ, ಮೊದಲ್, ಇಲ್ಲ, ಅನ್ನೆಗಮ್ -ಮುಂತಾದವನ್ನು ಇಬ್ಬರೂ ಈ ಪ್ರಕರಣದಲ್ಲಿ ಸೇರಿಸಿಲ್ಲ. ಇವುಗಳಲ್ಲಿ ಕೆಲವು ಅವ್ಯಯಗಳಾಗಿರುವುದು ಕಂಡು ಬರುತ್ತದೆ.

೧೭. ನಾಗವರ್ಮನು ಕರ್ಮಣಿ ಪ್ರಯೋಗವನ್ನು ಕುರಿತು ವಿವೇಚಿಸಿಲ್ಲ. ಅಂತೆ ಸಪ್ತಮೀ ವಿಭಕ್ತಿಯ ಬಗ್ಗೆಯೂ ಹೇಳಬಹುದು. ಕೇತನನಾದರೂ, ಕರ್ಮಣಿ ಪ್ರಯೋಗವನ್ನು ಕುರಿತು ಹೇಳಿರುತ್ತಾನೆ. ಎರಡು ಭಾಷೆಗಳಲ್ಲೂ ಬಹು ಹಿಂದಿನಿಂದಲೂ 'ಅಲ್' ಮತ್ತು 'ಪಡು' ಎಂಬ ಪ್ರತ್ಯಯಗಳಿಂದ ಕರ್ಮಣಿ ಪದವನ್ನು ಸಾಧಿಸಿಕೊಂಡಿರುವುದನ್ನು ಕಾಣುತ್ತೇವೆ. ಆದರೂ ಅದು ಕನ್ನಡ ಮತ್ತು ತೆಲುಗುಗಳಲ್ಲಿ ವಿರಳವಾಗಿ ಪ್ರಯೋಗಗೊಂಡಿದೆ ಎಂಬ ಅಭಿಪ್ರಾಯವಿದೆ. "ಕರ್ಮಣಿ ಪ್ರಯೋಗವು ಅಸಹಜ ಎನ್ನಬಹುದೇ ಹೊರತು ಅಸಾಧು ಎನ್ನಲಾಗದು"[೭]

ವಿವರಿಸಿರುವ ಕ್ರಿಯಾ ಪ್ರತ್ಯಯಗಳಿಗೂ ಕೆಲವೆಡೆ ಹೋಲಿಕೆಯನ್ನು- ಕೆಲವೆಡೆ ವ್ಯತ್ಯಾಸವನ್ನೂ ಕಾಣುತ್ತೇವೆ. ಈ ಎರಡು ಭಾಷೆಗಳು ಒಂದೇ ಭಾಷಾಕುಟುಂಬಕ್ಕೆ ಹೋಲಿಕೆಗಳು, ಪ್ರತ್ಯೇಕವಾಗಿ ದೀರ್ಘಕಾಲ ಬೆಳೆದು ಬಂದಿರುವುದರಿಂದ ಸೇರಿರುವುದರಿಂದ ವ್ಯತ್ಯಾಸಗಳು ಕಂಡು ಬರುವುದು ಸಹಜವೇ ಆಗಿದೆ.

## ಅಡಿಟಿಪ್ಪಣಿ

೧. ರಾ.ಯ. ಧಾರವಾಡಕರ, 'ಕನ್ನಡ ಭಾಷಾಶಾಸ್ತ್ರ', ಪು. ೨೭೦.

೧a. ಡಾ. ಸಂಗಮೇಶ ಬಿರಾದಾರ, ವೈಯಾಕರಣಿ ಎರಡನೆಯ ನಾಗವರ್ಮ, ಪು. ೨೧೬.

೧b. ಡಾ.ಕೆ. ಕುಶಾಲಪ್ಪಗೌಡ, ಕನ್ನಡ ಭಾಷೆ ಮತ್ತು ವ್ಯಾಕರಣಗಳ ಒಂದು ಅಧ್ಯಯನ, ಪು. ೩೪೯.

೨. ಹಂಪ ನಾಗರಾಜಯ್ಯ 'ದ್ರಾವಿಡ ಭಾಷಾ ವಿಜ್ಞಾನ' ಪು. ೨೨೯.

೩. ಡಾ. ಸಂಗಮೇಶ ಬಿರಾದಾರ; ವೈಯಾಕರಣಿ ಎರಡನೆಯ ನಾಗವರ್ಮ, ಪು. ೨೨೭.

೪. ಪ್ರಾಚೀನ ಕನ್ನಡ ವ್ಯಾಕರಣಗಳು, ಪು. ೨೦೬.

೫. ಡಾ.ಎಲ್. ಬಸವರಾಜು, ಶಬ್ದಮಣಿದರ್ಪಣ, ಪು. ೨೯೧.

೬. ತೀ.ನಂ. ಶ್ರೀಕಂಠಯ್ಯ, ಸಮಾಲೋಕನ, ಪು. ೨೬೬.

. ಡಾ. ಸಂಗಮೇಶ ಬಿರಾದಾರ, ವೈಯಾಕರಣಿ ಎರಡನೆಯ ನಾಗವರ್ಮ, ಪು. ೨೩೨.

. ಡಾ. ಸಂಗಮೇಶ ಬಿರಾದಾರ, ವೈಯಾಕರಣಿ ಎರಡನೆಯ ನಾಗವರ್ಮ, ಪು. ೨೩೭.

. ಡಾ. ಬಿ. ಪುರುಷೋತ್ತಮ : ತೆಲುಗು ವ್ಯಾಕರಣ ವಿಕಾಸಮು, ಪು. ೭೬೪.

೦. ಅದೇ, ಪು. ೭೬೫.

೧. ಡಾ. ಕೆ. ಕೆಂಪೇಗೌಡ : "ಮಾನವಿಕ ಕರ್ಣಾಟಕ", ಸಂ. ೧೫, ಸಂ. ೨.

೨. ಕೆ. ಶಿವರಾಮ ಐತಾಳ : ಕ.ಸಾ.ಪ.ಪ್ರ, ೬೩-೧, ಪು. ೭೦-೭೧.

# ಅಧ್ಯಾಯ - ೬

# ಅವ್ಯಯ ಮತ್ತು ನಿಪಾತ

# ಅವ್ಯಯ ಮತ್ತು ನಿಪಾತ

ಅವ್ಯಯವೆಂದರೆ ವ್ಯಯವಿಲ್ಲದ್ದು. ಲಿಂಗತ್ರಯ, ವಚನತ್ರಯ ವಿಭಕ್ತಿಗಳಲ್ಲಿ ಯಾವ ವ್ಯತ್ಯಾಸವನ್ನೂ ಹೊಂದದೆ ಇರುವ ಶಬ್ದಗಳೆಂದರ್ಥ. ಅವು ಮೂಲತಃ ಸ್ವ ಸ್ವರೂಪದಲ್ಲಿಯೇ ಇರುವುವು. ಅವ್ಯಯಗಳಿಗೆ ನಾಮ ವಿಭಕ್ತಿ ಪ್ರತ್ಯಯಗಳಾಗಲಿ ಇಲ್ಲವೆ ಆ.ಪ್ರ.ಗಳಾಗಲಿ ಹತ್ತುವಂತಿಲ್ಲ. ಇಂಗ್ಲೀಷಿನಲ್ಲಿ ಇವುಗಳಿಗೆ Indeclinables ಎಂಬ ಹೆಸರು ಇದೆ.

ಅವ್ಯಯಗಳಲ್ಲಿ ಉಪಸರ್ಗ, ಕ್ರಿಯಾವಿಶೇಷಣ, ಪೂರಕ, ಪ್ರತ್ಯಯಗಳು ಸಮುಚ್ಚಯ, ಮತ್ತು ನಿಪಾತ ಎಂದು ಐದು ಬಗೆಗಳು.

ಅವ್ಯಯ ವಿಚಾರದಲ್ಲಿ ಕನ್ನಡ ಲಾಕ್ಷಣಿಕರು ಬಹುತೇಕ ಸಂಸ್ಕೃತವನ್ನು ಅನುಸರಿಸಿದರೂ, ಕೆಲವೊಂದು ದೃಷ್ಟಿಯಿಂದ ಕನ್ನಡ ಅವ್ಯಯಗಳು ಸಂಸ್ಕೃತದಿಂದ ಭಿನ್ನವಾಗಿವೆ. ತೆಲುಗು ಭಾಷೆಯಲ್ಲಿ ಅದರಲ್ಲೂ ಕೇತನನ ಕೃತಿಯಾದ ಆಂ.ಭಾ. ಭೂ.ದಲ್ಲಿ ಅವ್ಯಯ ಮತ್ತು ನಿಪಾತಗಳ ಪ್ರಸ್ತಾಪವಿಲ್ಲ. ಅಮ್: ಉಮ್ ಎಂಬ ಸಮುಚ್ಚಯಾರ್ಥಕ ಅವ್ಯಯವೊಂದನ್ನು ಮಾತ್ರ ಕಾಣುತ್ತೇವೆ. ನಾಗವರ್ಮನ 'ಅವ್ಯಯ ವಿಧಾನಂ' ಎಂಬುದು ಸೂತ್ರ ೨೪೧ ರಿಂದ ೨೫೭ರ ವರೆಗೆ ಮೂಡಿ ಬಂದಿದೆ. ಕೇಶಿರಾಜನಾದರೂ ಬಹುತೇಕ ನಾಗವರ್ಮನನ್ನೇ ಅನುಸರಿಸಿದ್ದಾನೆ ಎನ್ನಬಹುದು. ನಾಗವರ್ಮನು ತನ್ನ ಕೃತಿಯಲ್ಲಿ ಅವ್ಯಯ ಪ್ರಸ್ತಾವನೆ ಮಾಡಿದ್ದಾನೆಯೇ ಹೊರತು ಅವನ ಮತ್ತೊಂದು ಕೃತಿಯಾದ ಕಾವ್ಯಾವಲೋಕನದಲ್ಲಿ ಅವ್ಯಯಗಳ ವಿವರಣೆ ಕಾಣುತ್ತಿಲ್ಲ. ಅವ್ಯಯ ಮತ್ತು ನಿಪಾತಗಳು ಒಂದೇ ಆಗಿದ್ದರೂ ನಾಗವರ್ಮನು ನಿಪಾತದ ವಿವರಣೆಯಲ್ಲಿ ಪ್ರತ್ಯೇಕ ಪ್ರಕರಣವನ್ನೇ ಮೀಸಲಾಗಿಟ್ಟಿರುತ್ತಾನೆ. ನಿಪಾತಗಳ ವಿವರಣೆ ಸೂತ್ರ ೨೫೮ ರಿಂದ ೨೬೯ ರ ವರೆಗೆ ಸಾಗುತ್ತದೆ. 'ನಿಪಾತ ವಿಧಾನಂ' ಎಂಬುದೇ ಕ.ಭಾ.ಭೂ.ದ ಕೊನೆಯ ಪ್ರಕರಣ.

ನಾಗವರ್ಮನು ಸೂತ್ರ ೨೪೧ರಲ್ಲಿ "ಅಸಂಖ್ಯಮವ್ಯಯಂ" ಎಂದೂ ವೃತ್ತಿಯಲ್ಲಿ "ಅಸಂಖ್ಯೇಯಚ್ಚಬ್ದರೂಪಂ ತದವ್ಯಯ ಸಂಜ್ಞಂ ಭವತಿ" ಎಂದು

ಅವ್ಯಯದ ಅರ್ಥವನ್ನು ಕೊಟ್ಟಿರುತ್ತಾನೆ. 'ವಚನವಿಲ್ಲದುದು ಅವ್ಯಯ' ಎಂದು ಅಲ್ಲಿಯ ಅರ್ಥ. ಅರ್ಥಾತ್ ಸಂಖ್ಯಾವಚನ ಭಿನ್ನವಾದುದು ಅವ್ಯಯವೆನಿಸಿ-ಕೊಳ್ಳುವುದು.

೧. **ಆದಂ :** ಸೂತ್ರ ೨೪೨ ರಲ್ಲಿ 'ಆದಮತ್ಯರ್ಥೇ' ಎಂದಿರುವುದರಿಂದ 'ಆದಂ' ಎಂಬ ಅವ್ಯಯವು 'ಅತಿ' ಎಂಬ ಅರ್ಥದಲ್ಲಿ ಪ್ರಾಪ್ತಿಸುವುದು. ಉದಾ : ಆದಂ ಒಪ್ಪಿದಂ ಆದೊಮೊಪ್ಪಿದಂ; ಆದಂ ಒಪ್ಪಿದಳ್.

೨. **ಏಗಂ :** ಸೂತ್ರ ೨೪೩ರಲ್ಲಿ "ಏಗಂ ವಿನಿಶ್ಚಯೇ" ಎಂದಿರುವುದರಿಂದ "ಏಗಂ ಎಂಬ ಅವ್ಯಯವು ನಿಶ್ಚಯಾರ್ಥದಲ್ಲಿ ವರ್ತಿಸುವುದು" ಉದಾ : ಅಂತೆ, ಏಗಂ

೩. **ಹುಂ :** ಸೂತ್ರ ೨೪೪ರ ಪ್ರಕಾರ 'ಹುಂ' ಎಂಬ ಅವ್ಯಯ ಪ್ರಶ್ನೆ, ವಿತರ್ಕ, ಅವಧಾರಣೆ, ನಿವಾರಣೆ- ಇವುಗಳಲ್ಲಿ ವರ್ತಿಸುವುದು. ಅದಕ್ಕೆ ಸೂತ್ರ "ಹುಂ ಪೃಚ್ಛಾಯಾಂ ವಿತರ್ಕಾವಧಾರಣ ನಿವಾರಣೇಷು" ಎಂದಿದೆ.

ಉದಾ : ಪ್ರಶ್ನೆಗೆ: ಹುಂ ಅದೆಂತು?: ವಿತರ್ಕ: ಹುಂ ಪೇಟು್; ಅವಧಾರಣೆಯಲ್ಲಿ: ಹುಂ ಆತನೆ, ನಿವಾರಣೆಯಲ್ಲಿ: ಹುಂ ನಿಲ್.

೪. **ಚಿಃ** ಸೂತ್ರ ೨೪೫ರಲ್ಲಿ "ಚಿ: ಕುತ್ಸನೇ" ಎಂದಿರುವುದರಿಂದ, ಕುತ್ಸಿತಾರ್ಥದಲ್ಲಿ (ಕೆಟ್ಟರ್ಥ) 'ಚಿ:' ಎಂಬ ಅವ್ಯಯವು ಬಹಳ ಬಳಕೆಯಾಗುವುದು. ಉದಾ. ಚಿ: ಪೊಲ್ಲಕೆಯ್ದಂ, ಚಿ: ಕಷ್ಟನಿವಂ.

೫. **ಮತ್ತೆ:** ಸೂತ್ರ ೨೪೬ರಂತೆ 'ಮತ್ತೆ' ಎಂಬ ಅವ್ಯಯವು "ಕಂದ ಸಮೀಕರಣ"ದಲ್ಲಿ (ಉಸಿರು ಬಿಡುವಲ್ಲಿ) ಮತ್ತು "ಪುನ: ಎಂಬ ಅರ್ಥದಲ್ಲಿ" ಬಳಕೆಯಾಗುವುದು. ಉದಾ: ಮತ್ತದೆಂತು, ಮತ್ತೆಮಗಟ್ಟು "ಅಪಿ ಶಬ್ದದಿಂ ಪಾದಪೂರ್ಣದಲ್ಲಿಯೂ ವರ್ತಿಸುಕುಂ" ಎಂದಿರುವುದರಿಂದ, "ಅದು ಮತ್ತೆಂತೆನೆ" ಎಂದಾಗುವುದು.

೬. **ಕೆನ್ನಂ :** ಸೂತ್ರ ೨೪೭ರಲ್ಲಿ 'ಕೆನ್ನಂ ತತ್ವಾಖ್ಯಾನೇ" ಎಂದಿರುವುದರಿಂದ, "ಕೆನ್ನಂ ಎಂಬ ಪ್ರತ್ಯಯವು ಯಥಾರ್ಥ ಕಥನದಲ್ಲಿ ಬರುವುದುಂಟು" ಉದಾ: ಕೆನ್ನಮೆನಗೆ ಬಲ್ಲಿದ ರಾರ್ಪರೇ ಕೆನ್ನೆಮೆನ್ನಂ ಜನಂ ನುಡಿಗುಂ"

೭. **ಭೋಂಕಲ್, ತೊಟ್ಟನೆ :** ಸೂತ್ರ ೨೪೮ರಲ್ಲಿ "ಭೋಂಕಲ್ ತೊಟ್ಟನೆ ಸಹಸಾ" ಎಂದಿರುವುದರಿಂದ ಭೋಂಕನೆ : ತೊಟ್ಟನೆ -ಎಂಬೀ ಅವ್ಯಯಗಳು

ಸಹಸಾರ್ಥದಲ್ಲಿ ವರ್ತಿಸುವುವು. ಘೋಂಕಲ್: ತೊಟ್ಟನೆ - ಎಂಬಿವು 'ಕೂಡಲೇ' ಅಥವಾ 'ತಟ್ಟನೆ' ಎಂದು ಅರ್ಥವನ್ನೀಯುತ್ತವೆ. ಉದಾ: ಘೋಂಕಲ್ ಮಾಡಿದಂ, ತೊಟ್ಟನೆ ಕೊಟ್ಟಂ.

೮. **ವೊಲ್:** ಸೂತ್ರ ೨೪೯ರಲ್ಲಿ ವೋಲ್ ಎಂಬ ಅವ್ಯಯವು "ವೋಲಿವಾರ್ಥೇ" ಎಂದಿರುವುದರಿಂದ ಅದು "ಉಪಮಾನಾರ್ಥದಲ್ಲಿ (ಹೋಲಿಕೆ) ವರ್ತಿಸುವುದು".

ಉದಾ : ೧. ಗಿರಿಯವೋಲ್ ಸ್ಥಿರಂ; ೨. ಕೇಸರಿಯವೋಲ್ ಕಲಿ

೯. **ಮೇಣ್** : ಸೂತ್ರ ೨೫೦ರ ಪ್ರಕಾರ "ಮೇಣ್ ವಿಕಲ್ಪೇ" ಎಂದಿರುವುದರಿಂದ, "ಅದು ವಿಕಲ್ಪಾರ್ಥದಲ್ಲಿ ಬರುತ್ತದೆ". ಉದಾ : ಅದುಮೇಣ್, ಇದು ಮೇಣ್. ಹಳಗನ್ನಡದ 'ಮೇಣ್' ಎಂಬುದು ಹೊಸಗನ್ನಡದಲ್ಲಿ 'ಅಥವಾ' ಎಂಬ ಅರ್ಥವನ್ನು ಕೊಡುತ್ತದೆ. ಅಥವಾ ಎಂಬುದು ವಿಕಲ್ಪಾರ್ಥದಲ್ಲಿ ಬಳಕೆಯಾಗುವುದುಂಟು. ಮೇಣ್‌ಗೆ 'ಮತ್ತೆ' ಎಂಬ ಮತ್ತೊಂದು ಅರ್ಥವುಂಟು.

೧೦. **ವಲಂ:** 'ವಲಂ' ಎಂಬ ಅವ್ಯಯ ಸೂತ್ರ ೨೫೧ರ ಪ್ರಕಾರ "ವೆಜಂ ವಲಂ ವಿಸ್ಪಷ್ಟಾರ್ಥೇ" ಎಂದರೆ ಅದು ಸ್ಫುಟಾರ್ಥದಲ್ಲಿ ಬರುವುದು" ಉದಾ: ಇದುವೆ ವಲಂ. 'ವಲಂ' ಎಂಬುದು ಹೊಸಗನ್ನಡದಲ್ಲಿ ಖಚಿತ: ಖಂಡಿತ ಎಂಬರ್ಥದಲ್ಲಿ ಬಳಕೆಯಾಗುವುದು. ಇದಕ್ಕೆ ಮತ್ತೊಂದು ಹೆಸರು 'ವೆಜಂ' ಎಂದು.

೧೧. **ಗಡ: ಗಳ** : ಸೂತ್ರ ೨೫೨ರ ಪ್ರಕಾರ "ಗಡಗಳ ವಾರ್ತಾ ಸಂಭಾಷಣಯೋಃ" ಎಂದರೆ ಗಡ ಮತ್ತು ಗಳ ಎಂಬ ಅವ್ಯಯಗಳು ವಾರ್ತೆಯಲ್ಲೂ ಸಂಭಾಷಣೆಯಲ್ಲೂ ಬರುತ್ತವೆ. ಉದಾ :

ಮೆಚ್ಚಿಗಡ, ಮುಳಿಯೆಗಡ, ಅದೆಂದು ಗಡ
ಅದೆಂತುಗಳ, ಅಂತುಗಳ,
ಕೆಲವೊಮ್ಮ ಗಡಕ್ಕೆ ದೀರ್ಘವುಂಟು
ಮುಳಿಯ ಗಡಾ, ಅದೆಂತು ಗಡಾ ನೀ ನುಡಿವೈ

೧೨. **ಅಮ್- ಅಂ: ಉಮ್- ಉಂ:** 'ಅಮುಮೌ ಸಮುಚ್ಚಯೇ' (ಸೂತ್ರ ೨೫೩) "ಅಮ್: ಉಮ್- ಎಂಬ ಅವ್ಯಯಗಳು ಸಮುಚ್ಚಯಾರ್ಥದಲ್ಲಿ ವರ್ತಿಸುವುವು". ಸಮುಚ್ಚಯಾರ್ಥವೆಂದರೆ ಸಂಬಂಧಾರ್ಥವೆಂದು ಅರ್ಥ. ಉದಾ : ಆತಂಗಮ್ + ಆಕೆಗಂ- ಆತಂಗಮಾಕೆಗಂ (ಅಂ-ಸಮುಚ್ಚಯ) ಅಂತೆ ತನ್ನೊಳಮಾತನೊಳಂ,

ಎನಗಂ, ತನಗಂ, ಆನುಂ - (ಉಂ ಸಮುಚ್ಚಯ), ನೀನುಂ, ಆನೆಯುಂ, ಕುದುರೆಯುಂ, ಎಟ್ಟುಂ, ಕಟ್ಟೆಯುಂ ಎಂದು ಈ ಪರಿ ತಿಳಿಯುವುದು. 'ಉಂ' ಸಮುಚ್ಚಯವು ಹೊಸಗನ್ನಡದಲ್ಲಿ 'ಕೂಡ' ಎಂಬ ಅರ್ಥವನ್ನು ಕೊಡುವುದು. ಎಟ್ಟುಂ, ಕಟ್ಟೆಯುಂ, ಎತ್ತೂ ಮತ್ತು ಕತ್ತೆಯೂ ಕೂಡ. ಆಂ.ಭಾ.ಭೂ.ದಲ್ಲಿ ಸಮುಚ್ಚಯಾರ್ಥದ ಅಮ್: ಉಮ್‌ಗಳ ಬಗ್ಗೆ ಪದ್ಯ ೬೬ರಲ್ಲಿದೆ. ಅಕಾರಾಂತ ಇಕಾರಾಂತ ಪದಗಳ ಮೇಲೆ 'ಯುನು' ಎಂಬುದು, ಉಕಾರಾಂತಪದಗಳ ಮೇಲೆ 'ನು' ಎಂಬುದು ಬರುವುದಾಗಿ ಕೇತನ ನಿರೂಪಿಸಿದ್ದಾನೆ (ಪದ್ಯ ೬೬). ಚಾಳುಕ್ಯರ ಕಾಲದಲ್ಲಿಯ ಶಾಸನಗಳಲ್ಲೂ ಉಮ್: ಉಮು:ಯು- ಎಂಬಿವು ಸಮುಚ್ಚಯಗಳಾಗಿ ಕಾಣಿಸಿಕೊಂಡಿವೆ. ಆದರೆ ಚೋಳರ ಕಾಲದ ಶಾಸನಗಳಲ್ಲಿ ಬಾಮುಣ್ಡಿಯುನು : ಗೊಲ್ಲಣ್ಡುನು ಎಂಬಲ್ಲಿ 'ನು' ಎಂಬುದು ಕಾಣಬರುತ್ತದೆ.

೧೩. **ಅಕ್ಕಟ:** ಸೂತ್ರ ೨೫೪ರಲ್ಲಿ "ಅಕ್ಕಟ ವಿಷಾದೇ" ಎಂದಿರುವುದರಿಂದ, "ಅಕ್ಕಟ ಎಂಬ ಅವ್ಯಯವು ವಿಷಾದಾರ್ಥದಲ್ಲಿ ವರ್ತಿಸುವುದು". ಉದಾ : ಅಕ್ಕಟ ಕೆಟ್ಟೆಂ. ಕೆಲವೊಮ್ಮೆ 'ಅಕ್ಕಟ' ಎಂಬುದಕ್ಕೆ ದೀರ್ಘ ಅಕ್ಕಟಾ : ಅಕಟಾ - ಎಂದಾಗುವುದು. ಅಕಟಾ ಇಂದ್ರಂಗೆ ಕೇಡಾಯ್ತು (ಶ.ಮ.ದ.)

೧೪. **ಕಟ್ಟಿನೆ:** ಆಕಸ್ಮಿಕಾರ್ಥದಲ್ಲಿ ಕಟ್ಟಿನೆ ಎಂಬ ಅವ್ಯಯ ಬರುತ್ತದೆ. ಅದನ್ನೇ ನಾಗವರ್ಮನು ಸೂತ್ರ ೨೫೫ರಲ್ಲಿ 'ಕಟ್ಟಿನೆ ಆಕಸ್ಮಿಕೇ' ಎಂದಿದ್ದಾನೆ. ಉದಾ: ಕಟ್ಟಿನೆ ಬಂದಂ (ಆಕಸ್ಮಿಕವಾಗಿ ಬಂದನು) ಈ ಪ್ರಯೋಗ ಪ್ರಾಚೀನ ಗ್ರಂಥಗಳಲ್ಲಿ ಹೆಚ್ಚಾಗಿ ಕಾಣಬರುತ್ತಿಲ್ಲ.

೧೫. **ನೆಟ್ಟನೆ:** ನೆಟ್ಟನೆ ಎಂಬುದೊಂದು ಅವ್ಯಯ ಪದ. ಇದು ಪರಿಸ್ಫುಟಾರ್ಥದಲ್ಲಿ ಗೋಚರಿಸುವುದು. ನಾಗವರ್ಮನು ಸೂತ್ರ ೨೫೬ ರಲ್ಲಿ ಇದರ ಬಗ್ಗೆ "ನೆಟ್ಟನೆ ಪರಿಸ್ಫುಟಾರ್ಥೇ" ಎಂದಿದ್ದಾನೆ. ಉದಾ : ನೆಟ್ಟನೆ ನುಡಿದಂ, ನೆಟ್ಟನೆ ಮೂಡಲ್.

೧೬. **ದಲ್:** ಸೂತ್ರ ೨೫೭ರಲ್ಲಿ "ದಲ್ ವಾಕ್ಯಾಲಂಕಾರ ಪಾದಪೂರ್ಣವಿನಿಶ್ಚಯೇಷು"ಎಂದಿರುವುದರಿಂದ "ಅದುವಾಕ್ಯಾಲಂಕಾರದಲ್ಲಿಯೂ ಪಾದ ಪೂರ್ಣದಲ್ಲಿಯೂ ವಿನಿಶ್ಚಯಗಳಲ್ಲಿಯೂ ಬರುವುದು" ಉದಾ : ಇದು ದಲ್ ಮನಷ್ಯವಿದ್ದಪ್ಪುದಲ್ತು ; ತಾಂ ದಲ್ ಪೇಟ್ಟುಂ, ಅದು ದಲ್ ನಿಶ್ಚಯಂ, ಕರದಲ್ ಚೋದ್ಯಂ."

-ಹೀಗೆ ನಾಗವರ್ಮನು ೧೬ ಸೂತ್ರಗಳಲ್ಲಿ ೧೬ ಅವ್ಯಯಗಳ ಶಬ್ದಗಳನ್ನು ಕುರಿತು ಹೇಳಿರುವನು. ನಾಗವರ್ಮನಂತೆ ಕೇಶಿರಾಜನು ಅವ್ಯಯಕ್ಕೆ ಪ್ರತ್ಯೇಕವಾದ

ಒಂದು ಪ್ರಕರಣವನ್ನೇ ಮೀಸಲಾಗಿಟ್ಟಿದ್ದಾನೆ. ಸೂತ್ರ ೩೧೫ರಿಂದ ೩೩೭ನ್ನು ನೋಡಬಹುದು. ಬೇರೆ ಬೇರೆ ಅರ್ಥಗಳಲ್ಲಿ ಪ್ರಯೋಗವಾಗುವ ಈ ಅವ್ಯಯಗಳು ಭಾಷೆ ಸಮೃದ್ಧಿಯನ್ನು ಹೆಚ್ಚಿಸುತ್ತವೆ ಎಂದು ಹೇಳಬಹುದು. ನಾಗವರ್ಮನ ಒಂದು ಅವ್ಯಯದ ಹೆಸರಿಗೆ ಕೇಶಿರಾಜನು ಹಲವು ಹೆಸರುಗಳನ್ನೂ ಸೂಚಿಸಿರುವನು. ಉದಾ : ನಾಗವರ್ಮನ ಅಧಿಕಾರ್ಥದಲ್ಲಿ ಪ್ರಯೋಗವಾಗುವ 'ಆದಂ' ಎನ್ನುವುದು ಕೇಶಿರಾಜನಲ್ಲಿ ಪರ್ಯಾಯವಾಗಿ ನಾಡೆ ; ಎಡೆ : ಆವಗಂ : ನೆಜು, : ನೀಡು - ಮುಂತಾಗಿ ಬಂದಿದೆ. ನಾಗವರ್ಮನ 'ಕೆನ್ನಂ' ಅವ್ಯಯವನ್ನು ಇಲ್ಲಿಯೇ ವಿವರಿಸಲಾಗಿದೆ. ಹೀಗೆ ಇನ್ನೂ ಹೆಚ್ಚಿನ ಅವ್ಯಯಗಳ ಹೆಸರನ್ನು ಕೇಶಿರಾಜನಲ್ಲಿ ಕಾಣಬಹುದು.

ಕೇಶಿರಾಜನ ಅವ್ಯಯ ಪ್ರಕರಣ ನಾಗವರ್ಮನಿಗಿಂತ ವಿಸ್ತೃತವಾದುದು ; ವೈವಿಧ್ಯಮಯವಾದುದು- ಸಾರಾಂಶವಾಗಿ ಕೇಶಿರಾಜನು ನಿರೂಪಿಸಿರುವ ಅವ್ಯಯಗಳನ್ನೂ ಹೀಗೆ ವರ್ಗೀಕರಿಸಬಹುದು: ೧. ಕ್ರಿಯಾ ವಿಶೇಷಣ; ೨. ಸಮುಚ್ಚಯ ಬೋಧಕ; ೩. ಸಂಬಂಧ ಸೂಚಕ; ೪. ಭಾವವಾಚಕ; -ಮತ್ತೆ ಕ್ರಿಯಾ ವಿಶೇಷಣ ಅವ್ಯಯಗಳನ್ನು ಕಾಲವಾಚಕ, ಸ್ಥಾನವಾಚಕ, ದಿಗ್ವಾಚಕ, ರೀತಿವಾಚಕ, ಸಂಖ್ಯಾವಾಚಕ ಎಂದು ಉಪವರ್ಗಗಳನ್ನಾಗಿ ವಿಂಗಡಿಸಬಹುದು. ಅಂತೆ ನಾಲ್ಕನೆಯದಾದ ಭಾವವಾಚಕ ಅವ್ಯಯಗಳನ್ನು ಸಂಬೋಧನೆ, ಅವಧಾರಣೆ, ವಿಶಂಕೆ, ನಿಪಾತ, ಖೇದ, ವಿಸ್ಮಯ, ಅನುಕರಣೆ- ಎಂದಾಗಿ ಉಪವರ್ಗದ ಅವ್ಯಯಗಳಾಗಿ ವಿಂಗಡಿಸಿ ಕಾಣಬಹುದು.

ಒಟ್ಟಾರೆ ಅವ್ಯಯ ಪದಗಳು ಸ್ವತಂತ್ರವಾಗಿ ಒಂದು ಭಾಷೆಯಲ್ಲಿ ಉಪಯೋಗಗೊಳ್ಳುವ ರೂಪಗಳಾಗಿವೆ. ಕೇಶಿರಾಜನ ಪ್ರಕಾರ ಅವು ಪ್ರಸಿದ್ಧವಾದುವು. "ಅವ್ಯಯಲಿಂಗಕ್ಕಂ ಸರಿ. ಸರಿ ಸರ್ವ ವಿಭಕ್ತಿಗಂ, ತ್ರಿಲಿಂಗಕ್ಕಂ ತಾ ಸರಿ, ವಚನ ತ್ರಿತಯಕ್ಕ ಸರಿ. ಇಂಥವು ವಿಕಾರ ಹೊಂದದೆ ಅರ್ಥವನ್ನೀಯುವುವು" (ಶ.ಮ.ದ ಪದ್ಯ ೧೦೦).

ಕನ್ನಡದಲ್ಲಿ 'ವಿರಹಿತಾವ್ಯಯ' ಎಂಬುದು ಅಸಾಧಾರಣ ಲಕ್ಷಣಗಳಲ್ಲಿ ಒಂದು.

ನಿಪಾತಗಳು : ನಿಪಾತಗಳು ಅವ್ಯಯಗಳಲ್ಲಿ ಒಂದು ಬಗೆ. ನಾಗವರ್ಮನು ಅವುಗಳನ್ನು ಪ್ರತ್ಯೇಕ ಒಂದು ಪ್ರಕರಣದಲ್ಲಿಯೇ ವಿವರಿಸಿರುತ್ತಾನೆ. 'ನಿಪಾತ ವಿಧಾನಂ' -ಎಂಬುದು ಕ .ಭಾ. ಭೂ. ದ ಕೊನೆಯ ಪ್ರಕರಣ. ಕೇಶಿರಾಜನು ನಿಪಾತವನ್ನು ಪ್ರತ್ಯೇಕವಾಗಿ ಹೇಳಲಿಲ್ಲ. ಅವುಗಳನ್ನು ಅವ್ಯಯಗಳೊಂದಿಗೆ ಸೇರಿಸಿದ್ದಾನೆ.

ಅವ್ಯಯಗಳು ಸ್ವತಂತ್ರ ಶಬ್ದಗಳಾದರೆ, ನಿಪಾತಗಳು, ಉದ್ಗಾರಗಳು, ಕಾಕುಗಳು ಮುಂತಾಗಿರುತ್ತವೆ" (ವೈ.ಎ.ನಾ.ಡಾ. ಬಿರಾದಾರ ಪುಟ ೨೪೦). ನಿಪಾತಗಳಿಗೂ

ಎನಗಂ, ತನಗಂ, ಆನುಂ - (ಉಂ ಸಮುಚ್ಚಯ), ನೀನುಂ, ಆನೆಯುಂ, ಕುಮರಿಯುಂ, ಎಟ್ಟಿಂ, ಕಟ್ಟಿಯುಂ ಎಂದು ಈ ಪರಿ ತಿಳಿಯುವುದು. 'ಉಂ' ಸಮುಚ್ಚಯವು ಹೊಸಗನ್ನಡದಲ್ಲಿ 'ಕೂಡ' ಎಂಬ ಅರ್ಥವನ್ನು ಕೊಡುವುದು. ಎಟ್ಟಿಂ, ಕಟ್ಟಿಯುಂ, ಎತ್ತೂ ಮತ್ತು ಕತ್ತೆಯೂ ಕೂಡ. ಆಂ.ಭಾ.ಭೂ.ದಲ್ಲಿ ಸಮುಚ್ಚಯಾರ್ಥದ ಅಮ್: ಉಮ್‌ಗಳ ಬಗ್ಗೆ ಪದ್ಯ ೬೬ರಲ್ಲಿದೆ. ಅಕಾರಾಂತ ಇಕಾರಾಂತ ಪದಗಳ ಮೇಲೆ 'ಯುನು' ಎಂಬುದು, ಉಕಾರಾಂತಪದಗಳ ಮೇಲೆ 'ನು' ಎಂಬುದು ಬರುವುದಾಗಿ ಕೇತನ ನಿರೂಪಿಸಿದ್ದಾನೆ (ಪದ್ಯ ೬೬). ಚಾಳುಕ್ಯರ ಕಾಲದಲ್ಲಿಯ ಶಾಸನಗಳಲ್ಲೂ ಉಮ್: ಉಮು:ಯು- ಎಂಬಿವು ಸಮುಚ್ಚಯಗಳಾಗಿ ಕಾಣಿಸಿಕೊಂಡಿವೆ. ಆದರೆ ಚೋಳರ ಕಾಲದ ಶಾಸನಗಳಲ್ಲಿ ಚಾಮುಣ್ಡಿಯುನು : ಗೊಲ್ಲಣ್ಣನು ಎಂಬಲ್ಲಿ 'ನು' ಎಂಬುದು ಕಾಣಬರುತ್ತದೆ.

೧೩. **ಅಕ್ಕಟ:** ಸೂತ್ರ ೨೫೪ರಲ್ಲಿ "ಅಕ್ಕಟ ವಿಷಾದೇ" ಎಂದಿರುವುದರಿಂದ, "ಅಕ್ಕಟ ಎಂಬ ಅವ್ಯಯವು ವಿಷಾದಾರ್ಥದಲ್ಲಿ ವರ್ತಿಸುವುದು". ಉದಾ : ಅಕ್ಕಟ ಕೆಟ್ಟೆಂ. ಕೆಲವೊಮ್ಮೆ 'ಅಕ್ಕಟ' ಎಂಬುದಕ್ಕೆ ದೀರ್ಘ ಅಕ್ಕಟಾ : ಅಕಟಾ - ಎಂದಾಗುವುದು. ಅಕಟಾ ಇಂದ್ರಂಗೆ ಕೇಡಾಯ್ತು (ಶ.ಮ.ದ.)

೧೪. **ಕಟ್ಕನೆ:** ಆಕಸ್ಮಿಕಾರ್ಥದಲ್ಲಿ ಕಟ್ಕನೆ ಎಂಬ ಅವ್ಯಯ ಬರುತ್ತದೆ. ಅದನ್ನೇ ನಾಗವರ್ಮನು ಸೂತ್ರ ೨೫೫ರಲ್ಲಿ 'ಕಟ್ಕನೆ ಆಕಸ್ಮಿಕೇ' ಎಂದಿದ್ದಾನೆ. ಉದಾ: ಕಟ್ಕನೆ ಬಂದಂ (ಆಕಸ್ಮಿಕವಾಗಿ ಬಂದನು) ಈ ಪ್ರಯೋಗ ಪ್ರಾಚೀನ ಗ್ರಂಥಗಳಲ್ಲಿ ಹೆಚ್ಚಾಗಿ ಕಾಣಬರುತ್ತಿಲ್ಲ.

೧೫. **ನೆಟ್ಟನೆ:** ನೆಟ್ಟನೆ ಎಂಬುದೊಂದು ಅವ್ಯಯ ಪದ. ಇದು ಪರಿಸ್ಫುಟಾರ್ಥದಲ್ಲಿ ಗೋಚರಿಸುವುದು. ನಾಗವರ್ಮನು ಸೂತ್ರ ೨೫೬ ರಲ್ಲಿ ಇದರ ಬಗ್ಗೆ "ನೆಟ್ಟನೆ ಪರಿಸ್ಫುಟಾರ್ಥೇ" ಎಂದಿದ್ದಾನೆ. ಉದಾ : ನೆಟ್ಟನೆ ನುಡಿದಂ, ನೆಟ್ಟನೆ ಮೂಡಲ್.

೧೬. **ದಲ್:** ಸೂತ್ರ ೨೫೭ರಲ್ಲಿ "ದಲ್ ವಾಕ್ಯಾಲಂಕಾರ ಪಾದಪೂರ್ಣವಿ ನಿಶ್ಚಯೇಷು"ಎಂದಿರುವುದರಿಂದ "ಅದುವಾಕ್ಯಾಲಂಕಾರದಲ್ಲಿಯೂ ಪಾದ ಪೂರ್ಣದಲ್ಲಿಯೂ ವಿನಿಶ್ಚಯಗಳಲ್ಲಿಯೂ ಬರುವುದು" ಉದಾ : ಇದು ದಲ್ ಮನಷ್ಯವಿದ್ದಪ್ಪುದಲ್ತು; ತಾಂ ದಲ್ ಪೇೞ್ಗುಂ, ಅದು ದಲ್ ನಿಶ್ಚಯಂ, ಕರದಲ್ ಚೋದ್ಯಂ."

-ಹೀಗೆ ನಾಗವರ್ಮನು ೧೬ ಸೂತ್ರಗಳಲ್ಲಿ ೧೬ ಅವ್ಯಯಗಳ ಶಬ್ದಗಳನ್ನು ಕುರಿತು ಹೇಳಿರುವನು. ನಾಗವರ್ಮನಂತೆ ಕೇಶಿರಾಜನು ಅವ್ಯಯಕ್ಕೆ ಪ್ರತ್ಯೇಕವಾದ

ಒಂದು ಪ್ರಕರಣವನ್ನೇ ಮೀಸಲಾಗಿಟ್ಟಿದ್ದಾನೆ. ಸೂತ್ರ ೩೧೫ರಿಂದ ೩೩೭ನ್ನು ನೋಡಬಹುದು. ಬೇರೆ ಬೇರೆ ಅರ್ಥಗಳಲ್ಲಿ ಪ್ರಯೋಗವಾಗುವ ಈ ಅವ್ಯಯಗಳು ಭಾಷೆ ಸಮೃದ್ಧಿಯನ್ನು ಹೆಚ್ಚಿಸುತ್ತವೆ ಎಂದು ಹೇಳಬಹುದು. ನಾಗವರ್ಮನ ಒಂದು ಅವ್ಯಯದ ಹೆಸರಿಗೆ ಕೇಶಿರಾಜನು ಹಲವು ಹೆಸರುಗಳನ್ನೂ ಸೂಚಿಸಿರುವನು. ಉದಾ : ನಾಗವರ್ಮನ ಅಧಿಕಾರ್ಥದಲ್ಲಿ ಪ್ರಯೋಗವಾಗುವ 'ಆದಂ' ಎನ್ನುವುದು ಕೇಶಿರಾಜನಲ್ಲಿ ಪರ್ಯಾಯವಾಗಿ ನಾಡೆ ; ಎಡೆ : ಆವಗಂ : ನೆಜು, : ನೀಡು - ಮುಂತಾಗಿ ಬಂದಿದೆ. ನಾಗವರ್ಮನ 'ಕಿನ್ನಂ' ಅವ್ಯಯವನ್ನು ಇಲ್ಲಿಯೇ ವಿವರಿಸಲಾಗಿದೆ. ಹೀಗೆ ಇನ್ನೂ ಹೆಚ್ಚಿನ ಅವ್ಯಯಗಳ ಹೆಸರನ್ನು ಕೇಶಿರಾಜನಲ್ಲಿ ಕಾಣಬಹುದು.

ಕೇಶಿರಾಜನ ಅವ್ಯಯ ಪ್ರಕರಣ ನಾಗವರ್ಮನಿಗಿಂತ ವಿಸ್ತೃತವಾದುದು ; ವೈವಿಧ್ಯಮಯವಾದುದು- ಸಾರಾಂಶವಾಗಿ ಕೇಶಿರಾಜನು ನಿರೂಪಿಸಿರುವ ಅವ್ಯಯಗಳನ್ನೂ ಹೀಗೆ ವರ್ಗೀಕರಿಸಬಹುದು: ೧. ಕ್ರಿಯಾ ವಿಶೇಷಣ; ೨. ಸಮುಚ್ಚಯ ಬೋಧಕ; ೩. ಸಂಬಂಧ ಸೂಚಕ; ೪. ಭಾವವಾಚಕ; -ಮತ್ತೆ ಕ್ರಿಯಾ ವಿಶೇಷಣ ಅವ್ಯಯಗಳನ್ನು ಕಾಲವಾಚಕ, ಸ್ಥಾನವಾಚಕ, ದಿಗ್ವಾಚಕ, ರೀತಿವಾಚಕ, ಸಂಖ್ಯಾವಾಚಕ ಎಂದು ಉಪವರ್ಗಗಳನ್ನಾಗಿ ವಿಂಗಡಿಸಬಹುದು. ಅಂತೆ ನಾಲ್ಕನೆಯದಾದ ಭಾವವಾಚಕ ಅವ್ಯಯಗಳನ್ನು ಸಂಬೋಧನೆ, ಅವಧಾರಣೆ, ವಿಶಂಕೆ, ನಿಪಾತ, ಖೇದ, ವಿಸ್ಮಯ, ಅನುಕರಣೆ- ಎಂದಾಗಿ ಉಪವರ್ಗದ ಅವ್ಯಯಗಳಾಗಿ ವಿಂಗಡಿಸಿ ಕಾಣಬಹುದು.

ಒಟ್ಟಾರೆ ಅವ್ಯಯ ಪದಗಳು ಸ್ವತಂತ್ರವಾಗಿ ಒಂದು ಭಾಷೆಯಲ್ಲಿ ಉಪಯೋಗಗೊಳ್ಳುವ ರೂಪಗಳಾಗಿವೆ. ಕೇಶಿರಾಜನ ಪ್ರಕಾರ ಅವು ಪ್ರಸಿದ್ಧವಾದುವು. "ಅವ್ಯಯಲಿಂಗಕ್ಕಂ ಸರಿ. ಸರಿ ಸರ್ವ ವಿಭಕ್ತಿಗಂ, ತ್ರಿಲಿಂಗಕ್ಕಂ ತಾ ಸರಿ, ವಚನ ತ್ರಿತಯಕ್ಕ ಸರಿ. ಇಂಥವು ವಿಕಾರ ಹೊಂದದೆ ಅರ್ಥವನ್ನೀಯುವುವು" (ಶ.ಮ.ದ ಪದ್ಯ ೧೦೨).

ಕನ್ನಡದಲ್ಲಿ 'ವಿರಹಿತಾವ್ಯಯ' ಎಂಬುದು ಅಸಾಧಾರಣ ಲಕ್ಷಣಗಳಲ್ಲಿ ಒಂದು.

ನಿಪಾತಗಳು : ನಿಪಾತಗಳು ಅವ್ಯಯಗಳಲ್ಲಿ ಒಂದು ಬಗೆ. ನಾಗವರ್ಮನು ಅವುಗಳನ್ನು ಪ್ರತ್ಯೇಕ ಒಂದು ಪ್ರಕರಣದಲ್ಲಿಯೇ ವಿವರಿಸಿರುತ್ತಾನೆ. 'ನಿಪಾತ ವಿಧಾನಂ' -ಎಂಬುದು ಕ .ಭಾ. ಭೂ. ದ ಕೊನೆಯ ಪ್ರಕರಣ. ಕೇಶಿರಾಜನು ನಿಪಾತವನ್ನು ಪ್ರತ್ಯೇಕವಾಗಿ ಹೇಳಲಿಲ್ಲ. ಅವುಗಳನ್ನು ಅವ್ಯಯಗಳೊಂದಿಗೆ ಸೇರಿಸಿದ್ದಾನೆ.

ಅವ್ಯಯಗಳು ಸ್ವತಂತ್ರ ಶಬ್ದಗಳಾದರೆ, ನಿಪಾತಗಳು, ಉದ್ಗಾರಗಳು, ಕಾಕುಗಳು ಮುಂತಾಗಿರುತ್ತವೆ" (ವೈ.ಎ.ನಾ.ಡಾ. ಬಿರಾದಾರ ಪುಟ ೨೪೦). ನಿಪಾತಗಳಿಗೂ

ಅವ್ಯಯಗಳಿಗೂ ವ್ಯತ್ಯಾಸವಿದೆ ಎಂಬ ಅಭಿಪ್ರಾಯವನ್ನು ವ್ಯಕ್ತಪಡಿಸಿರುತ್ತಾರೆ, ಡಾ. ಬಿರಾದಾರರು. ಈ ದೃಷ್ಟಿಯಿಂದಲೇ ನಾಗವರ್ಮನು ಅವ್ಯಯ ಮತ್ತು ನಿಪಾತಗಳನ್ನು ಪ್ರತ್ಯೇಕ ವಿಭಾಗಕ್ರಮದಲ್ಲಿ ವರ್ಣಿಸಬೇಕಾಯಿತು ಎಂದಿದ್ದಾರೆ.

ನಾಗವರ್ಮನು ನಿಪಾತಗಳನ್ನು ಎರಡು ವಿಭಿನ್ನ ಪ್ರಕರಣಗಳಲ್ಲಿ ನಿರೂಪಿಸಲಾಗಿ ಕೇಶಿರಾಜನು ಅವುಗಳನ್ನು ಅವ್ಯಯದಲ್ಲಿಯೇ ಸೇರಿಸಿ, ನಾಗವರ್ಮನಿಗಿಂತಲೂ ವಿಪುಲವಾದ ಉದಾಹರಣೆಗಳನ್ನು ಕೊಟ್ಟಿರುತ್ತಾನೆ. ಭಟ್ಟಾಕಳಂಕನು ನಾಗವರ್ಮನನ್ನು ಅನುಸರಿಸಿರುತ್ತಾನೆ. ತೆಲುಗಿನ ಕೇತನನಲ್ಲಿ ಅವ್ಯಯಗಳಾಗಲಿ ನಿಪಾತಗಳಾಗಲಿ ಕಾಣುತ್ತಿಲ್ಲ. ಅವರು ಕೃದಂತ ತದ್ಧಿತಾಂತ ಪ್ರಕರಣಗಳಲ್ಲಿಯೇ ಅವ್ಯಯಗಳನ್ನು ನಿರೂಪಿಸಿರುತ್ತಾರೆ.

ನಾಗವರ್ಮನು ಕೃತಿಯ ಕೊನೆಯ ಪ್ರಕರಣವಾದ 'ನಿಪಾತ ವಿಧಾನಂ' ಎಂಬಲ್ಲಿಯ ಸೂತ್ರ ೨೫೮ರಲ್ಲಿ ತಾನು ಇನ್ನು ಮುಂದೆ ನಿಪಾತ ಶಬ್ದಗಳನ್ನು ಹೇಳುತ್ತಿರುವುದಾಗಿ ತಿಳಿಸುತ್ತಾನೆ. ಏ: ಎ -ದೀರ್ಘ ಹ್ರಸ್ವಾಕ್ಷರಗಳು ಅಂಗೀಕಾರ ಮತ್ತು ಅವಧಾರಣೆಯಲ್ಲಿ ಬರುವುದಾಗಿ ಸೂತ್ರ ೨೫೯ ಮತ್ತು ೨೬೦- ಎರಡರಲ್ಲಿಯೂ ಹೇಳಿದ್ದಾನೆ. 'ಏ' ಎಂಬುದು ಅಂಗೀಕಾರಾರ್ಥದಲ್ಲಿ ಮತ್ತು 'ಎ' ಎಂಬುದು ಅವಧಾರಣೆಯಲ್ಲಿ ಬರುತ್ತವೆ. ಉದಾ: ಏ ಅದಕ್ಕುಂ: ಏ ಅದೆಂತುಟೆ: ಅವಧಾರಣೆಯ ಎ ಕಾರಕ್ಕೆ ಉದಾ: ಆತನೆ, ಆಕೆಯೆ, ಅದುವೆ, ಇತ್ಯಾದಿ

'ಎಲೇ' ಎಂಬ ನಿಪಾತವು ವಿತರ್ಕ ಭಾವನೆಯಲ್ಲೂ ಆಮಂತ್ರದಲ್ಲಿಯೂ ಬರುವುದಾಗಿ ಸೂತ್ರ ೨೬೧ರಲ್ಲಿ ತಿಳಿಸಲಾಗಿದೆ. "ಎಲೇವಿತರ್ಕಭಾವನಾಮಂತ್ರೇಷು". ಉದಾ: ಎಲೇ ಇದಾವುದು, ಎಲೇ ಅದಕ್ಕುಂ; ಎಲೇ ಅಣ್ಣಾ; "ಎಲೇ ಅಣ್ಣಾ ಇತ್ತ ಬಾ" (ಶ.ಮ.ದ. ಪ್ರಯೋಗ)

ಅ ;ಆ : ಎಂಬಿವು ಸಂತೋಷ, ಅಶುಭ, ಖೇದ, ವಿಸ್ಮಯ, ದುಃಖಗಳಲ್ಲಿ ವ್ಯಕ್ತವಾಗುವುವು. ಇದನ್ನು ಸೂತ್ರ ೨೬೩, ೨೬೪ಗಳಲ್ಲಿ ಹೇಳಿರುತ್ತಾನೆ.

ಉದಾ: ಅ: ಒಳ್ಳಿತಾಯ್ತು (ಸಂತೋಷ)

ಅ: ಪೊಲ್ಲದಾಯ್ತು (ಅಶುಭ)

ಅ: ಪಾತಕ ವಿಧಿಯೆ (ಖೇದ)

ಅ: ಚೋದ್ಯಂ (ವಿಸ್ಮಯ)

ಅ ಅ: ವಿಧಾತ್ರಾ (ದುಃಖ)

ಉ : ಎಂಬ ಅವ್ಯಯವು ಅವಜ್ಞಾರ್ಥದಲ್ಲಿ ವರ್ತಿಸುವುದು. ಅದನ್ನೇ ಸೂತ್ರ ೨೬೫ರಲ್ಲಿ "ಉ: ಅವಜ್ಞಾಯಾಂ" ಎಂದಿದೆ. ಉದಾ: ಉ: ಅದೇತರ್ಕೆ

ಅಯ್ಯೋ ಎಂಬುದು, ಓ ಹೋ ಎಂಬುದು ವಿಷಾದ, ಅನುಕಂಪ, ಅಪಹಾಸ್ಯ ನಿವಾರಣಾರ್ಥದಲ್ಲಿ ಬರುವುದಾಗಿ ಮುಂದಿನ ಸೂತ್ರ ೨೬೬ ಮತ್ತು ೨೬೭ರಲ್ಲಿ ತಿಳಿಸಲಾಗಿದೆ. 'ಅಯ್ಯೋ' ಎಂಬುದು ಮೇಲೆ ತಿಳಿಸಿರುವಂತೆ ವಿಷಾದ, ಅನುಕಂಪ, ಅಪಹಾಸ್ಯ- ಎಂಬ ಮೂರು ಅರ್ಥಗಳಲ್ಲಿ ಗೋಚರಿಸಿದರೆ, ಓ ಹೋ ಎಂಬುದು ಮಾತ್ರ ನಿವಾರಣಾರ್ಥದಲ್ಲಿ ಬಳಕೆಯಾಗಿದೆ. ಅದಕ್ಕೆ ಉದಾಹರಣೆ ಅಯ್ಯೋ:

೧. ಅಯ್ಯೋ ಅನ್ಯಾಯಂ (ವಿಷಾದ)

೨. ಅಯ್ಯೋ ಪ್ರಾಣಬಿಟ್ಟಂ (ಅನುಕಂಪ)

೩. ಅಯ್ಯೋ ಏಂ ಸಯ್ಪೊ (ಅಪಹಾಸ್ಯ)

೪. ಓಹೋ ಸಾಲ್ಗುಂ, ಓ ಹೋ ಇರಲಿಂ, ಓಹೋ ಮಾಣ್

ಸೂತ್ರ ೨೬೮ರಲ್ಲಿ 'ಅರೆ ಅರಮೆ ಕ್ವಚಿತ್ಕದಾಚಿದರ್ಥಯೋಃ' ಎಂದಿರುವುದರಿಂದ ಅರೆ ಅರಮೆ ಎಂಬ ಅವ್ಯಯಗಳು ಕ್ವಚಿದರ್ಥದಲ್ಲಿ (ವಿರಳವಾಗಿ ಕೆಲವು ಕಡೆ, ಕೆಲವು ವೇಳೆ) ವರ್ತಿಸುವುವು".

ಉದಾ : ಅರೆ - ಅರೆ ಎಡೆಯಾಳ್, ಅರೆ ಉಟಿ

ಆರಮೆ- ಅರಮೆ ಎತ್ತಾನುಪೊರ್ಮೆ

ಅರಮೆ ಅರಲ್ದ ಬಯಲ್ದಾವರೆ

'ಅರಮೆ' ಎಂಬುದು ಹೊ.ಗ.ದಲ್ಲಿ ವಿಚಾರಿಸಲಾಗಿ ಎಂಬ ಅರ್ಥ ಕೊಡುತ್ತದೆ.

'ಅಲ್ತೇ' ಎಂಬ ನಿಪಾತ ಶಬ್ದವು ಪ್ರಶ್ನೆ ಮತ್ತು ಅನುಮಾನಾರ್ಥಗಳಲ್ಲಿ ಬರುತ್ತದೆ. ಅದನ್ನೇ ನಾಗವರ್ಮನು ಪ್ರಕರಣದ ಕೊನೆಯ ಸೂತ್ರವಾದ ೨೬೯ರಲ್ಲಿ 'ಅಲ್ತೆ ಸಂಪ್ರಶ್ನಾನು ಮಾನಯೋಃ' ಎಂದಿದ್ದಾನೆ. ಉದಾ: ನೀನಿದಂ ಪೇಟ್ದಿಯಲ್ತೆ (ಅನುಮಾನ) ಇದಲ್ತೇ? (ಪ್ರಶ್ನೆ)

ಈ ನಿಪಾತ ವಿಧಾನಂ- ಎಂಬ ಪ್ರಕರಣದೊಂದಿಗೆ ನಾಗವರ್ಮನ ಕ.ಭಾ.ಭೂ. ಗ್ರಂಥವು ಸಂಪೂರ್ಣವಾಗುತ್ತದೆ.

# ಉಪಸಂಹಾರ

ತೌಲನಿಕ ಅಧ್ಯಯನ ಕ್ಷೇತ್ರದಿಂದ ಉಂಟಾಗುವ ಪ್ರಯೋಜನ ಅಷ್ಟಿಷ್ಟಲ್ಲ. ಇತ್ತೀಚೆಗೆ ಅದರ ಬಗ್ಗೆ ಸಂಶೋಧಕರು ಹೆಚ್ಚು ಗಮನ ಕೊಟ್ಟು ಕೆಲಸ ಮಾಡುತ್ತಿರುವುದು ಸ್ವಾಗತಾರ್ಹವಾದರೂ, ಮೆಚ್ಚುವಂತಹ ಕೆಲಸವಾಗಿಲ್ಲ ಎನ್ನಬೇಕು. ಒಂದೇ ಕಾಲದ ಕವಿಗಳ, ವೈಯಾಕರಣರ, ದಾರ್ಶನಿಕರ ಸಮಾನ ದೃಷ್ಟಿಯನ್ನು ಪರಿಶೀಲಿಸುವಂತೆಯೇ ಭಿನ್ನ ಭಾಷೆ, ಕಾಲ, ದೇಶಗಳಿಗೆ ಸೇರಿದ ಭಿನ್ನ ವ್ಯಕ್ತಿಗಳ ಸಮಾನಾಂಶಗಳ ಪರಿಶೀಲನೆ ಕೂಡ ಉಪಯುಕ್ತವಾದುದೆಂಬುದರಲ್ಲಿ ಎರಡನೆಯ ಮಾತಿಲ್ಲ. ತಮ್ಮ ತಮ್ಮ ಕ್ಷೇತ್ರಗಳಿಗೆ ಗಣನೀಯ ಸೇವೆ ಸಲ್ಲಿಸಿರುವ ಇಬ್ಬರು ವೈಯಾಕರಣರ ಸಾಧನೆಯನ್ನು ಈ ಮಹಾ ಪ್ರಬಂಧದಲ್ಲಿ ಪರಿಶೀಲಿಸಲಾಗಿದೆ.

"ಕರ್ಣಾಟಕ ಭಾಷಾ ಭೂಷಣಂ" ಮತ್ತು 'ಕಾವ್ಯವಲೋಕನ'ಗಳ ಕರ್ತೃವಾದ ನಾಗವರ್ಮ ಕನ್ನಡದ ಪ್ರಸಿದ್ಧ ವೈಯಾಕರಣಿಯಾಗಿದ್ದು ತೆಲುಗಿನ ಪ್ರಾಚೀನ ವೈಯಾಕರಣಿಯಾದ ಕೇತನನ ಮೇಲೆ ಪ್ರಭಾವ ಬೀರಿರಬಹುದೆಂಬ ಸಂಶಯವನ್ನು ಕನ್ನಡ ಮತ್ತು ತೆಲುಗು ವಿದ್ವಾಂಸರಲ್ಲಿ ಕೆಲವರು ವ್ಯಕ್ತಪಡಿಸಿದ್ದಾರೆ. ಕೇತನನ ಕಾಲ ೧೩ನೆಯ ಶತಮಾನ. ಕನ್ನಡದ ಕೇಶಿರಾಜನ ಸಮಕಾಲೀನ. ಅವನು ಶ.ಮ.ದ.ವನ್ನು ನೋಡಿರುವ ಸಾಧ್ಯತೆಯನ್ನೂ ಪರಿಶೀಲಿಸಬಹುದು.

ನಾಗವರ್ಮನ ಪ್ರಭಾವ ಕೇತನನ ಮೇಲೆ ಬಿದ್ದಿರಬಹುದೆಂಬ ಅನುಮಾನ ಈ ಸಂಶೋಧನೆಯಿಂದ ದೂರ ಸರಿಯುತ್ತದೆ

೧. ಸಂಸ್ಕೃತದ ಪಾಣಿನೀಯ ಮತ್ತು ಕಾತಂತ್ರ ಸಂಪ್ರದಾಯಗಳು ಪ್ರಾಚೀನ ಪ್ರಾದೇಶಿಕ ಭಾಷೆಗಳ ಮೇಲೆ ಪ್ರಭಾವ ಬೀರಿರುವುದನ್ನು ಕಾಣಬಹುದಾಗಿದೆ. ಅಂತೆ ಕನ್ನಡದ 'ಕರ್ಣಾಟಕ ಭಾಷಾ ಭೂಷಣಂ' ಮತ್ತು ತೆಲುಗಿನ 'ಆಂಧ್ರ ಭಾಷಾ ಭೂಷಣಂ' ಕೃತಿಗಳ ಮೇಲೆ ಸಂಸ್ಕೃತ ವ್ಯಾಕರಣಗಳ ಪ್ರಭಾವ ಬಿದ್ದಿರುವುದು ಖಚಿತ.

೨. ಕೇತನ 'ಕರ್ಣಾಟಕ ಭಾಷಾ ಭೂಷಣಂ' ಕೃತಿಯ ಪ್ರಭಾವಕ್ಕೆ ಒಳಗಾದುದಕ್ಕೆ ಆಧಾರಗಳು ತೀರಾ ಗೌಣವಾಗಿದ್ದು, ಕೆಲವೊಂದು ವ್ಯಾಕರಣಾಂಶಗಳಿಂದ ಮಾತ್ರ

ಎರಡೂ ಕೃತಿಗಳು ಸಾಮಿಪ್ಯವನ್ನು ಪಡೆದಿವೆ. ಕೇತನನ ಕೃತಿ ವ್ಯಾಕರಣಾಂಶಗಳ ಸಂಕ್ಷೇಪ ವಿವರಣೆಯಾಗಿದ್ದು, ನಾಗವರ್ಮನ ಕೃತಿಯಷ್ಟು ವಿಪುಲವಾಗಿಲ್ಲ. ಆದೊಂದು ದಿಕ್ ಸೂಚಿಯೆಂದು ಕೇತನನೇ ಹೇಳಿಕೊಂಡಿದ್ದಾನೆ. ಒಂದು ಪಕ್ಷ ಕೇತನನು ನಾಗವರ್ಮನ ಕೃತಿಯನ್ನು ಅವಲೋಕಿಸಿದ್ದರೆ, ಅವನ ಕೃತಿ ಇನ್ನೂ ವಿವರವಾಗಿ ಕೇಶಿರಾಜನ ಶ.ಮ.ದ.ದಂತೆ ಮೂಡಿಬರುತ್ತಿತ್ತು.

ವ್ಯಾಕರಣ ಕೃತಿಗಳೇ ಇಲ್ಲದಿರುವಾಗ ಇರುವ ಒಂದು ಸಣ್ಣ ಕೃತಿಯೇ ದೊಡ್ಡ ಕೃತಿಯಾಗಲಾರದೇ? ಈ ಕಾರಣದಿಂದ ತೆಲುಗು ಭಾಷೆಯ ಅಘ್ಯ ಕೃತಿಯೊಂದನ್ನು ಬರೆದು ಕೇತನ ಮುಂದಿನ ಪೀಳಿಗೆಯ ವ್ಯಾಕರಣ ಕ್ಷೇತ್ರಕ್ಕೆ ಅಪಾರವಾದ ಸೇವೆಯನ್ನು ಮಾಡಿರುವುದು ಶ್ಲಾಘನೀಯ.

**ವರ್ಣಮಾಲೆ** : ಸಂಸ್ಕೃತ ವರ್ಣಮಾಲೆಗೆ ಹೋಲಿಸದೆ ಕನ್ನಡ- ತೆಲುಗು ವರ್ಣಮಾಲೆಯನ್ನು ವಿವರಿಸುವುದು ಅಸಂಪೂರ್ಣವೆನಿಸುವುದು. ಕನ್ನಡದ ವೈಯಾಕರಣರು ಸಂಸ್ಕೃತದ ಜಾಡಿನಲ್ಲೇ ನಡೆದರು. ಆದರೂ ಕನ್ನಡ ಶುದ್ಧಿಯನ್ನು ಗುರುತಿಸಿದ್ದಾರೆ. ಕಾವ್ಯಾವಲೋಕನದಲ್ಲಿ ಸ್ಪಷ್ಟವಾಗಿ ನಿರೂಪಿತವಾಗದ ವರ್ಣಮಾಲೆ ಕರ್ಣಾಟಕ ಭಾಷಾಭೂಷಣಂ ನಲ್ಲಿ ಸ್ಪಷ್ಟವಾಗಿದೆ. ಕ. ಭಾ.ಭೂ.ದಲ್ಲಿ ೪೬ ವರ್ಣಗಳನ್ನು ಹೇಳಲಾಗಿದೆ. ಕೇಶಿರಾಜನ ಶ.ಮ.ದ.ದಲ್ಲಿ ೪೭ ಅಕ್ಷರಗಳನ್ನು ತಿಳಿಸಲಾಗಿದೆ. ಕೇತನ ಸಂಸ್ಕೃತದ ಪಾಣಿನೀಯ ಮತ್ತು ಕಾತಂತ್ರ ವ್ಯಾಕರಣ ಸಂಜ್ಞೆಗಳನ್ನು ಅವಳವಡಿಸಿ ಕೊಂಡಿದ್ದಾನೆ. ತೆಲುಗು ವ್ಯಾಕರಣಗಳು ಬಹುಮಟ್ಟಿಗೆ ಪಾಣಿನೀಯ ಸಂಜ್ಞೆಗಳನ್ನು ಸ್ವೀಕರಿಸಿದ್ದರೂ, ಕಾತಂತ್ರದ ವರ್ಣಗಳನ್ನು ತೆಗೆದು ಕೊಂಡಿವೆ. ಪಾಣಿನೀಯ ಪ್ರಕಾರ ಸ್ವರಗಳು ೯. ಕಾತಂತ್ರ ಸಂಪ್ರದಾಯದಲ್ಲಿ ೧೪. ಕನ್ನಡ ಮತ್ತು ತೆಲುಗು ವ್ಯಾಕರಣಗಳು ಕಾತಂತ್ರ ಸಂಖ್ಯೆಯನ್ನೇ ಸ್ವೀಕರಿಸಿವೆ.

ಕರ್ಣಾಟಕಾಂಧ್ರ ಭಾಷಾಗಳಲ್ಲಿ ವ್ಯಾಕರಣದ ಕೆಲವು ಪಾರಿಭಾಷಿಕ ಪದಗಳಲ್ಲಿ ಭಿನ್ನತೆಯನ್ನು ಕಾಣಬಹುದಾಗಿದೆ. ಉದಾಹರಣೆಗೆ ಕನ್ನಡದ ಹ್ರಸ್ವ 'ಎ' ಮತ್ತು 'ಒ'ದೇಶೀಯಾಕ್ಷರಗಳೆನಿಸಿಕೊಂಡಿವೆ. ತೆಲುಗಿನಲ್ಲಿ ಅವುಗಳಿಗೆ 'ಅದನಮುಲು' (ಹೆಚ್ಚಿನವು) ಎಂದು ಹೆಸರಿಸಲಾಗಿದೆ. ತೆಲುಗಿನಲ್ಲಿ ಅನುಸ್ವಾರ ಮತ್ತು ಅರ್ಧಾನುಸ್ವಾರಗಳೆಂಬ ಎರಡು ಬಗೆ. ಕನ್ನಡದಲ್ಲಿ ಅನುಸ್ವಾರವೊಂದೇ ಬಳಕೆಯಲ್ಲಿದೆ. ಕನ್ನಡ ಮತ್ತು ತೆಲುಗು ಭಾಷೆಗಳಲ್ಲಿ ಸ್ವರಗಳನ್ನು ತಾಲವ್ಯ ಮತ್ತು ತಾಲವ್ಯೇತರ ಸ್ವರಗಳೆಂದು ವಿಭಾಗ ಮಾಡಿರುವುದು ಕಂಡುಬರುತ್ತದೆ. ಈ ವಿಭಜನೆಗೆ ಪ್ರಾಯಶಃ ಸಂಸ್ಕೃತವೇ ಕಾರಣವಾಗಿರಬೇಕು. ಕನ್ನಡದ ವಿಶೇಷ ಪದ 'ನಾಮಿ' (ಅಕ್ಷರ ಬಾಗುವಿಕೆ)ಯ ಬಳಕೆ ತೆಲುಗಿನಲ್ಲಿಲ್ಲ. ಸಂಸ್ಕೃತ ಸ್ವರಗಳಾದ ಋ, ೠ, ಗಳಿಗೆ ಕ್ಲೀಬವೆಂದು ಕರೆಯಲಾಗಿದೆ. ಕನ್ನಡ ಮತ್ತು ತೆಲುಗು ಭಾಷೆಗಳಲ್ಲಿ ಈ ವರ್ಣಗಳು ಬಳಕೆಯಲ್ಲಿಲ್ಲ. ಅವು ಇಂದಿನ ರು, ರೂ ಲು ಅಕ್ಷರಗಳ ಉಚ್ಚಾರವನ್ನು ಪಡೆಯುತ್ತವೆ.

ಐ, ಔ ಗಳು ಸಂಧ್ಯಕ್ಷರಗಳು. ಆದರೆ ಏ ಮತ್ತು ಓ ಗಳ ಬಗ್ಗೆ ಸಂಶಯ. ತೆಲುಗಿನಲ್ಲಿ ಏ ಓ ಗಳಿಗೆ 'ವಕ್ರಮು' ಎಂದೂ ಐ ಔಗಳಿಗೆ ವಕ್ರತಮಮು ಎಂದೂ ಕರೆಯಲಾಗಿದೆ. ಆದರೆ ಕೇತನನಲ್ಲಿ ಇವುಗಳ ಬಳಕೆ ಇಲ್ಲ. ಯರಲವ-ಗಳು ಕನ್ನಡದಲ್ಲಿ ಅನುನಾಸಿಕ ಹಾಗೂ ನಿರನುನಾಸಿಕವೆಂದು ವಿಭಾಗಗೊಂಡರೆ ತೆಲುಗಿನಲ್ಲಿ ಅವುಗಳಿಗೆ 'ಲಘು' ಮತ್ತು 'ಅಲಘು' ಗಳೆಂದು ಕರೆಯಲಾಗಿದೆ. ಹೀಗೆ ವರ್ಣಮಾಲೆಯ ಉಳಿದ ವರ್ಗೀಯ ಮತ್ತು ಅವರ್ಗೀಯ ವ್ಯಂಜನಾಕ್ಷರಗಳ ವಿಷಯದಲ್ಲೂ ಭಿನ್ನತೆಯನ್ನು ಕಾಣಬಹುದು.

**ಸಂಧಿ:** ಕನ್ನಡ ವೈಯಾಕರಣರು ಕನ್ನಡ ಸಂಧಿಗಳಾದ ಲೋಪ, ಆಗಮ, ಆದೇಶಗಳನ್ನು ತಳಹದಿಯಾಗಿಟ್ಟುಕೊಂಡು 'ಸಂಧಿ'ಯ ವಿವಕ್ಷೆಯನ್ನು ಮಾಡುವಲ್ಲಿ ಹೋಲಿಕೆ ಕಂಡುಬರುತ್ತದೆ. ಸಂಧಿ ಮತ್ತು ಸಂಧಿಯ ಪಾರಿಭಾಷಿಕ ಪದಗಳಿಗೆ ಕನ್ನಡ ವ್ಯಾಕರಣಕಾರರು ಸಂಸ್ಕೃತಕ್ಕೆ ಋಣಿಗಳಾಗಿದ್ದಾರೆ. ನಾಗವರ್ಮನಾದರೂ ಲೋಪ, ಆಗಮ, ಆದೇಶಗಳ ಜೊತೆಗೆ ದ್ವಿತ್ವ ಸಂಧಿಯನ್ನು ಮಾತ್ರ ಹೆಸರಿಸಿದ್ದರೂ, ಸಂಧಿ ದೋಷ, ಸಂಧಿ ವಿಕಲ್ಪ, ವಿಸಂಧಿ, ಅಸಹ್ಯೋಕ್ತಿ ಸಂಧಿ, ಶ್ರುತಿಕಷ್ಟಸಂಧಿ-ಇತ್ಯಾದಿಗಳನ್ನೂ ಕೇಶಿರಾಜನಂತೆ ಸೂಚಿಸುವ ಗೋಜಿಗೆ ಹೋಗಿಲ್ಲ. ಕೇತನನಾದರೂ ತನ್ನ ಕೃತಿಯಲ್ಲಿ ಆರು ಸಂಧಿಗಳನ್ನು ಮಾತ್ರ ಹೆಸರಿಸಿದ್ದಾನೆ. ಅವುಗಳ ಲಕ್ಷಣಗಳನ್ನು ವಿವರವಾಗಿ ನಿರೂಪಿಸದೆ ಉದಾಹರಣೆಗಳನ್ನು ಮಾತ್ರ ಕೊಟ್ಟಿದ್ದಾನೆ.

ಸಂಸ್ಕೃತದ 'ಸಂಹಿತಾ' ಮತ್ತು 'ಸಂಧಿ'ಗಳೆಂಬ ಪದಗಳನ್ನು ಸಮಾನಾರ್ಥಕ ಪದಗಳನ್ನಾಗಿ ಕನ್ನಡ ವೈಯಾಕರಣರು ಸ್ವೀಕರಿಸಿದರೆ, ಕೇತನಾದಿ ಪ್ರಾಚೀನ ಲಾಕ್ಷಣಿಕರು ಕೇವಲ 'ಸಂಧಿ' ಪದವನ್ನು ಮಾತ್ರ ಸ್ವೀಕರಿಸಿದ್ದಾರೆ. 'ಸಂಹಿತಾ' ಎಂಬುದು ಬಳಕೆಯಲ್ಲಿಲ್ಲ. ಲೋಪ ಸಂಧಿಯ ಬಗ್ಗೆ ಕನ್ನಡ ಮತ್ತು ತೆಲುಗು ವ್ಯಾಕರಣಗಳು ಸಂಸ್ಕೃತಕ್ಕಿಂತ ಭಿನ್ನವಾಗಿವೆ. ಕ.ಭಾ.ಭೂ.ವು ಇದನ್ನೇ ಗುರುತಿಸಿದೆ. 'ವರ್ಣ ಸಂಯೋಗವೇ ಸಂಧಿ' ಮತ್ತು 'ಸ್ವರೇಸ್ವರಸ್ಯ ಲೋಪ:' ಎಂಬೀ ಸಂಧಿಯ ಲಕ್ಷಣಗಳು ಎರಡೂ ಭಾಷೆಗಳಲ್ಲೂ ಜಿಜ್ಞಾಸೆಗೆ ಎಡೆಕೊಟ್ಟಿವೆ.

ಕನ್ನಡದಂತೆ 'ಯಕಾರಾಗಮ' ಮತ್ತು 'ವಕಾರಾಗಮ'ಗಳನ್ನು ತೆಲುಗಿನಲ್ಲಿ 'ಸಂಧಿ' ಎನ್ನುವುದಿಲ್ಲ. ತೆಲುಗಿನಲ್ಲಿ ವಕಾರಾಗಮ ನಿಷೇಧ. ಕನ್ನಡದ ಪಟುವೀತಂ, ಮಡುವಿದು-ಎಂಬಲ್ಲಿ ತೆಲುಗು ಭಾಷೆಯಲ್ಲಿ ಉತ್ವ ಸಂಧಿಯಾಗಿ ಹೇಳುವುದು ರೂಢಿ (ಪಟುವು + ಈತಂ; ಮಡುವು + ಇದು). ಕಾರಣ ತೆಲುಗಿನಲ್ಲಿ ವಕಾರಾಗಮ ಪ್ರತ್ಯೇಕವಾಗಿ ಇಲ್ಲವೆನ್ನಬಹುದು.

ಕನ್ನಡದಲ್ಲಿಲ್ಲದ ನಕಾರಾಗಮ, ಪುನಾಗಮ, 'ಪುಟ' ಆಗಮ ಮುಂತಾದವು ತೆಲುಗು ವ್ಯಾಕರಣ ಕಾರ್ಯ ವ್ಯಾಪ್ತಿಯನ್ನು ಹೆಚ್ಚಿಸಿವೆ.

ಅರ್ಥಪ್ರತೀತಿಯ ಬಗ್ಗೆ ನಾಗವರ್ಮನಲ್ಲಿ ಬರುವ ಪ್ರಸ್ತಾಪ ತೆಲುಗಿನ ಕೇತನನಲ್ಲಿ ಇಲ್ಲದಿರುವುದು ಗಮನಾರ್ಹ. ತೆಲುಗಿನಲ್ಲಿ ಸಂಧಿಯಾಗದ ಸಂದರ್ಭಗಳೇ ಇಲ್ಲವೆನ್ನಬಹುದು. ಅರ್ಥ ಪ್ರತೀತಿ ಕೆಡುವುದಾದರೆ ಬೇರೆ ರೀತಿ ಸಂಧಿಮಾಡಬೇಕೇ ಹೊರತು ಸಂಧಿ ಮಾಡದೆ ಇರಲು ಸಾಧ್ಯವಿಲ್ಲ. ಹೀಗೆ ಕನ್ನಡ- ತೆಲುಗು ಭಾಷೆಗಳಲ್ಲಿ ಸಂಧಿಯ ಸಂಕೀರ್ಣತೆಯನ್ನು ಮನಗಾಣಬಹುದು.

ವಿಭಕ್ತಿ : 'ವಿಭಕ್ತಿ' ಮತ್ತು 'ಪ್ರತ್ಯಯ' ಎಂಬ ಈ ಸಂಸ್ಕೃತ ಪಾರಿಭಾಷಿಕ ಪದಗಳನ್ನು ಕನ್ನಡ, ತೆಲುಗು ವೈಯಾಕರಣರು ಯಥಾಪ್ರಕಾರ ಸ್ವೀಕರಿಸಿರುವುದು ಸ್ಪಷ್ಟ. ಅಷ್ಟಾಧ್ಯಾಯಿ, ಕಾತಂತ್ರ, ಜೈನೇಂದ್ರ- ಸಂಪ್ರದಾಯಗಳ ವ್ಯಾಕರಣಗಳು ಉಭಯ ಭಾಷೆಗಳಿಗೂ ಸಹಾಯಕವಾಗಿವೆ. ಕನ್ನಡ, ತೆಲುಗು ವಿಭಕ್ತಿ ಪ್ರತ್ಯಯಗಳ ವಿಷಯದಲ್ಲಿ ಸ್ವಲ್ಪ ಮಟ್ಟಿಗೆ ಹೋಲಿಕೆ ಕಂಡು ಬಂದರೂ ಬಹುಮಟ್ಟಿಗೆ ವ್ಯತ್ಯಾಸ ಕಂಡು ಬಂದಿದೆ.

ನಾಗವರ್ಮನಲ್ಲಿ ಸಂಸ್ಕೃತದ ಅಷ್ಟಾಧಾಯಿ ಮತ್ತು ಕಾತಂತ್ರಗಳ ಪ್ರಭಾವ ಹೆಚ್ಚಾಗಿ ಕಂಡುಬಂದರೆ, ಕೇತನನಲ್ಲಿ ಅಷ್ಟಾಧ್ಯಾಯಿಯ ಪ್ರಭಾವವೇ ಹೆಚ್ಚು.

ಕ.ಭಾ.ಭೂ.ದಲ್ಲಿ 'ವಿಭಕ್ತಿ ವಿಧಾನಂ' ಎಂಬ ಪ್ರತ್ಯೇಕ ಅಧ್ಯಾಯದಿಂದ ವಿಭಕ್ತಿ ಪ್ರತ್ಯಯಗಳ ಪರಿಚಯವಾದರೆ, ಕೇತನನಲ್ಲಿ ಅಂಥ ಪ್ರತ್ಯೇಕ ಪ್ರಕರಣವಿಲ್ಲ.

ಕನ್ನಡ ಲಾಕ್ಷಣಿಕರು ಸಪ್ತವಿಧ ವಿಭಕ್ತಿ ಪ್ರತ್ಯಯಗಳನ್ನು 'ಮಮಿಂಕೆಯದದೊಳ್' ಎಂಬ ಸೂತ್ರವೊಂದರಿಂದ ವಿವರಿಸಿದರೆ, ತೆಲುಗು ಲಾಕ್ಷಣಿಕರಲ್ಲಿ ಅಂತಹದು ಕಂಡುಬರುವುದಿಲ್ಲ.

ಉಭಯ ಕೃತಿಗಳಲ್ಲೂ ಪ್ರಥಮಾ ವಿಭಕ್ತಿ ಪ್ರತ್ಯಯವಿಲ್ಲ. ಪ್ರಕೃತಿಯೇ ಪ್ರಥಮೆಯಾಗಿರುತ್ತದೆ ಎಂಬುದು ಗಮನಾರ್ಹ.

ನಾಮ ಪ್ರಕೃತಿಗೆ 'ಲಿಂಗ'ದ ಕಲ್ಪನೆಯಿದ್ದು, ಅದು ತೆಲುಗಿನಲ್ಲಿ ಕಾಣದು.

'ವಿಭಕ್ತಿ ವಿಧಾನಂ' ಎಂಬಲ್ಲಿ ವಚನ, ಸರ್ವನಾಮಗಳ ಪರಿಚಯ ನಾಗವರ್ಮನ ಕ.ಭಾ.ಭೂ.ದಲ್ಲಿದೆ.

ಕನ್ನಡದಲ್ಲಿ ವಸ್ತುತಃ ಪಂಚಮಿ ಇಲ್ಲ. ತೃತೀಯೆ ಪಂಚಮಿಯ ಕೆಲಸವನ್ನು ನಿರ್ವಹಿಸುತ್ತದೆ. ಆದರೆ ತೆಲುಗು ಭಾಷೆಯಲ್ಲಿ ಇಂಥ ಪ್ರಸಂಗ ಕಾಣದು. ತೃತೀಯೆ ಹಾಗೂ ಪಂಚಮಿಗಳಿಗೆ ಅಲ್ಲಿ ಪ್ರತ್ಯೇಕ ಪ್ರತ್ಯಯಗಳುಂಟು.

ಪ್ರತ್ಯಯಗಳ ಹಿನ್ನೆಲೆಯಲ್ಲಿ ವಿವಿಧ ಆಗಮಗಳಾದ ಇನಾಗಮ, ಇರಾಗಮ, ಅಣಾಗಮ, ಅಲ್ ಪ್ರತ್ಯಯ- ಇವುಗಳ ಬಗ್ಗೆ ನಾಗವರ್ಮನ ಕ.ಭಾ.ಭೂ. ದ 'ವಿಭಕ್ತಿ

ವಿಧಾನಂ' ಎಂಬ ಪ್ರಕರಣದಲ್ಲಿ ಕಾಣುತ್ತೇವೆ. ಆದರೆ ಕೇತನನ ಆಂ.ಭಾ.ಭೂ. ಕೃತಿಯಲ್ಲಿ ಸಂಧಿ ಪ್ರಕರಣದಲ್ಲಿಯೇ ಇದನ್ನು ಕಾಣುತ್ತೇವೆ.

ನಾಗವರ್ಮ ಷಷ್ಠೀ ವಿಭಕ್ತಿ ಪ್ರತ್ಯಯಕ್ಕೆ ದೀರ್ಘಾದೇಶವನ್ನು ಕಲ್ಪಿಸಿದರೆ, ಕೇತನನಲ್ಲಿ ಮತ್ತು ಇತರ ತೆಲುಗು ವ್ಯಾಕರಣಗಳಲ್ಲಿ ಇಂತಹುದು ಕಾಣುವುದಿಲ್ಲ.

**ಶಬ್ದರೀತಿ :** ಕ.ಭಾ.ಭೂ.ದ ಐದನೆಯ ಅಧ್ಯಾಯಕ್ಕೆ 'ಯುಷ್ಮದಾದಿ ವಿಧಾನಂ' ಎಂಬ ಹೆಸರಿದ್ದು, ಪಾಠಾಂತರಗಳಲ್ಲಿ 'ಯುಷ್ಮದಸ್ಮ- ತ್ಪ್ರಕರಣಂ' ಹಾಗೂ 'ಶಬ್ದ ರೀತಿ ವಿಧಾನಂ' ಎಂಬ ಹೆಸರುಗಳಿವೆ. ಇಲ್ಲಿ ಸರ್ವನಾಮಗಳ ಜೊತೆಗೆ ತತ್ಸಮ - ತದ್ಭವಗಳ ವಿಷಯವೂ ಬರುವುದರಿಂದ 'ಶಬ್ದರೀತಿ' ಎಂದು ಈ ಅಧ್ಯಾಯಕ್ಕೆ ಹೆಸರಿಡಲಾಗಿದೆ.

ಪುರುಷ ಸರ್ವನಾಮಗಳನ್ನು ಸಾಧಿಸುವಲ್ಲಿ ನಾಗವರ್ಮನ ವಿವರಣೆ ಬಹು ವ್ಯಾಪಕವಾಗಿದ್ದು, ಅದು ಕೇತನನಲ್ಲಿ ಗೌಣವಾಗಿದೆ ಎನ್ನಬಹುದು.

ವ್ಯಕ್ತಿ ನಿರ್ದೇಶನ ಸರ್ವನಾಮಗಳ ವಿವರಣೆ ಕನ್ನಡದಲ್ಲಿದ್ದರೆ, ತೆಲುಗು ಭಾಷೆಯಲ್ಲಿ ಇಂಥ ನಿದರ್ಶನಗಳಿಲ್ಲ. ಸ್ಥಾನವನ್ನು ನಿರ್ದೇಶಿಸುವಲ್ಲಿ ಮಾತ್ರ ಎರಡೂ ಭಾಷೆಗಳಲ್ಲಿ ಸಾಮಿಪ್ಯವನ್ನು ಕಾಣುತ್ತೇವೆ.

ಪುರುಷತ್ರಯ ಸರ್ವನಾಮಗಳನ್ನು ಎರಡು ಭಾಷೆಗಳಲ್ಲಿ- ನಾ, ನೀ, ನೇ, ಮೀ -ಗಳ ಮೂಲಕ ಸಾಧಿಸಿಕೊಳ್ಳಬಹುದೆಂದು ತಿಳಿದು ಬರುತ್ತದೆ. ಈ ವಿಷಯಗಳಲ್ಲಿ ಎರಡೂ ಭಾಷೆಗಳಲ್ಲಿ ಹೋಲಿಕೆ ಇದೆ. ತೆಲುಗಿನ ಸ್ತ್ರೀಲಿಂಗ ಸೂಚಿ ಸರ್ವನಾಮಗಳು ನಪುಂಸಕವನ್ನು ಹೋಲುತ್ತವೆ. ಉದಾಹರಣೆಗೆ ಅದಿ, ಇದಿ, ಇತ್ಯಾದಿ. ನಾಗವರ್ಮನಲ್ಲಿ ಪುರುಷತ್ರಯ ಪ್ರತ್ಯಯಗಳು, ನಪುಂಸಕ ಲಿಂಗ ಹಾಗೂ ಪ್ರಶ್ನಾರ್ಥಕ ಸರ್ವನಾಮಗಳ ವಿವರಣೆ ಕಂಡು ಬಂದರೆ, ಕೇತನನಲ್ಲಿ ಅದು ಕಾಣದು. ಇದನ್ನು ಕೆಲವೊಂದು ಉದಾಹರಣೆಗಳಿಂದ ಮಾತ್ರ ತಿಳಿಯಬಹುದು.

ತತ್ಸಮ- ತದ್ಭವಗಳ ವಿಷಯದಲ್ಲಿ ಎರಡು ಭಾಷೆಗಳ ಮೇಲೆ ಸಂಸ್ಕೃತ ಭಾಷೆಯ ಪ್ರಭಾವವಿರುವುದು ಖಚಿತ. ಪ್ರಾಕೃತದ ಪ್ರಭಾವವೂ ಇದೆ ಎನ್ನಬಹುದು. ಕೇತನ ತತ್ಸಮ-ತದ್ಭವಗಳ ಪರಿಚಯವನ್ನು 'ಭಾಷಾ ವಿಭಜನೆ'ಯ ಹಿನ್ನೆಲೆಯಲ್ಲಿ ವಿವರಿಸಿದ್ದಾನೆ.

ತೆಲುಗಿನ ಆಂ.ಭಾ.ಭೂ.ದಲ್ಲಿ ತೆಲುಗು ಭಾಷೆಗೆ ಪ್ರತ್ಯೇಕ ವಿಭಜನೆ ಕಲ್ಪಿಸಲಾಗಿದೆ. ಆ ಭಾಷೆಯನ್ನು ಸ್ಥೂಲವಾಗಿ ೧. ತತ್ಸಮ; ೨. ತದ್ಭವ ೩. ಅಚ್ಚತೆನುಗು; ೪. ದೇಶ್ಯ; ೫.ಗ್ರಾಮ್ಯವೆಂದು ವಿಭಾಗಿಸಲಾಗಿದೆ. ಕನ್ನಡದಲ್ಲಿ ಅದು ಕೇವಲ ೧. ತತ್ಸಮ, ೨. ತದ್ಭವ ೩. ದೇಶ್ಯ -ಎಂಬ ವಿಭಜನೆ ಪಡೆದಿದೆ.

ಉಭಯ ಭಾಷೆಗಳಲ್ಲೂ ಸಂಸ್ಕೃತದ ಪದಗಳನ್ನು ಸ್ವೀಕರಿಸುವಲ್ಲಿ ಹೋಲಿಕೆಯನ್ನು ಕಾಣುತ್ತೇವೆ. ಆದರೆ ಭಾಷೆಯ ಜಾಯಮಾನಕ್ಕೆ ತಕ್ಕಂತೆ ತತ್ಸಮ ತದ್ಭವಗಳನ್ನೂ ರೂಪಿಸಿಕೊಂಡಿರುವುದನ್ನು ಗಮನಿಸಬಹುದು.

ಕೇತನನ ಭಾಷಾ ವಿಭಜನೆಯ ಕ್ರಮದಲ್ಲಿ ವಿವರಣೆ ಇಲ್ಲ; ಉದಾಹರಣೆಗಳು ಮಾತ್ರ ಇವೆ. ಆದರೆ ತೆಲುಗಿನಲ್ಲಿ ಪ್ರಾಕೃತದ ಮೂಲವನ್ನು ಹುಡುಕಿದಂತೆ ಕನ್ನಡದಲ್ಲಿ ಗುರುತಿಸಲು ಸಾಧ್ಯವಿಲ್ಲ. ಈ ವಿಷಯದಲ್ಲಿ ಕನ್ನಡದಲ್ಲಿ ಸಾಕಷ್ಟು ಕೆಲಸವಾಗಬೇಕಿದೆ.

'ಯುಷ್ಮದಾದಿ ವಿಧಾನಂ' ಎಂಬಲ್ಲಿ ನಾಗವರ್ಮ ಮತ್ತು ಕೇತನ- ಈರ್ವರ ಅಭಿಪ್ರಾಯ ಬಹಳ ಮಟ್ಟಿಗೆ ಒಂದೇ ಆಗಿದೆ. ಸಂಸ್ಕೃತದಿಂದ ತಮ್ಮ ತಮ್ಮ ಭಾಷೆ ಬೇರೆ ಎಂಬ ಹೇಳಿಕೆಯ ಪ್ರಯತ್ನ ಅಂದು ನಡೆದಿರುವುದು ಮೆಚ್ಚಬೇಕಾದ ಸಂಗತಿ.

**ಸಮಾಸ :** ಸಂಸ್ಕೃತ ಭಾಷೆಯಲ್ಲಿರುವ ಸಮಾನ ಲಕ್ಷಣವನ್ನೇ ಆಂ.ಭಾ.ಭೂ.ದ ಕರ್ತೃ ಯಥಾವತ್ತಾಗಿ ಸ್ವೀಕರಿಸಿರುವುದು ಸ್ಪಷ್ಟವಾಗಿ ಗೋಚರಿಸುತ್ತದೆ. ಆದಕ್ಕೆ ಕನ್ನಡದಂತೆ ಅಲ್ಲಿಯೂ ಸಂಸ್ಕೃತದ ಎಲ್ಲ ೨೮ ಸಮಾಸಗಳನ್ನು ಹೆಸರಿಸುವ ಗೋಜಿಗೆ ಹೋಗಲಿಲ್ಲ. ಉಭಯ ಭಾಷೆಗಳಿಗೂ ಸಮಾಸದ ಅರ್ಥ ವ್ಯಾಖ್ಯಾನಕ್ಕೆ "ಸಮರ್ಥ ಪದವಿಧಿಃ" ಎಂಬ ಸಂಸ್ಕೃತದ ಸೂತ್ರವೇ ಮೂಲ ಆಧಾರ.

ಕೇತನನ ಸಮಾಸ ವಿಭಜನೆ ಸಂಸ್ಕೃತವನ್ನೇ ಹೋಲುತ್ತದೆ. ಸಂಸ್ಕೃತದ ವೈಯಾಕರಣರು ನಿರೂಪಿಸಿದ ನಾಲ್ಕು ಸಮಾಸದ ಲಕ್ಷಣಗಳು ಉಭಯ ಭಾಷೆಗಳಿಗೂ ಮೂಲವಾಗಿದೆ. ಅವುಗಳೆಂದರೆ ೧. ಪೂರ್ವಪದಾರ್ಥ ಪ್ರಧಾನ ಅವ್ಯಯೀ ಭಾವ; ೨. ಉತ್ತರ ಪದಾರ್ಥ ಪ್ರಧಾನ ತತ್ಪುರುಷ; ೩. ಅನ್ಯ ಪದಾರ್ಥ ಪ್ರಧಾನ ಬಹುವ್ರೀಹಿ; ೪. ಉಭಯ ಪದಾರ್ಥ ಪ್ರಧಾನ ದ್ವಂದ್ವ. ಇದರ ಆಧಾರದ ಮೇರೆಗೆ ಇನ್ನುಳಿದ ಸಮಾಸಗಳ ಲಕ್ಷಣಗಳು ಹೇಳಲ್ಪಟ್ಟಿವೆ. ಕೇತನನು ಸಮಾಸದ ಲಕ್ಷಣಕ್ಕೆ ಕೊಟ್ಟಿರುವ ಉದಾಹರಣೆಗಳನ್ನು ನೋಡಿದರೆ ಅವನು ಪಾಣಿನೀಯ ಸಂಪ್ರದಾಯಕ್ಕೆ ಋಣಿ ಎಂದು ತಿಳಿದು ಬರುತ್ತದೆ. ನಾಗವರ್ಮನೂ ಅಷ್ಟಾಧ್ಯಾಯಿಯನ್ನು ಬಹಳಮಟ್ಟಿಗೆ ಅನುಸರಿಸಿದ್ದಾನೆ.

ತೆಲುಗಿನಲ್ಲಿ 'ಮಿಶ್ರ ಸಮಾಸ'ವನ್ನು ಬಹುತೇಕ ತೆಲುಗು ವಿದ್ವಾಂಸರು ಒಪ್ಪಿದ್ದರೂ, ಅದು ಆ ಭಾಷೆಗೆ ಗ್ರಾಹ್ಯವಲ್ಲವೆಂದು ತಿಳಿದುಬರುತ್ತದೆ. ಕನ್ನಡದ 'ಅರಿ ಸಮಾಸ' 'ತೆಲುಗಿನಲ್ಲಿ ವೈರಿ' ಸಮಾಸ ವೆನಿಸಿಕೊಂಡಿದೆ. 'ಅರಿ ಸಮಾಸ' ಅಥವಾ 'ವೈರಿ ಸಮಾಸ' ಎರಡೂ ಭಾಷೆಗಳಲ್ಲೂ ನಿಷಿದ್ಧ. ಆದರೆ ಕೇತನನ ನಿರೂಪಣೆ ಸ್ವಲ್ಪ ಭಿನ್ನವೆನ್ನಬಹುದು. ಅವನ ಪ್ರಕಾರ ಪೂರ್ವಪದ ತೆಲುಗು ಆಗಿದ್ದು, ಉತ್ತರ ಪದ ಸಂಸ್ಕೃತವಾಗಿದ್ದರೆ

ಅದು ಕೆಲವು ಕಡೆ ಸಾಧುವೆಂದು 'ಅರಿಸಮಾಸ'ದ ಕಾನೂನನ್ನು ಸ್ವಲ್ಪ ಸಡಿಲಗೊಳಿಸಿದ್ದಾನೆ. ಕನ್ನಡದಲ್ಲಿ ೨೧ ಪದಗಳಿಗೆ ಮಾತ್ರ ಅರಿ ಸಮಾಸ ದೋಷವಿಲ್ಲ. ಇದನ್ನು ಎಲ್ಲ ಕನ್ನಡ ಲಾಕ್ಷಣಿಕರು ತಿಳಿಸಿದ್ದಾರೆ. ಇದು ಎರಡು ಭಾಷೆಗಳಿಗಿರುವ ವ್ಯತ್ಯಾಸ.

ಸಮಾಸಗಳ ವಿವರಣೆಯಲ್ಲಿ ಕೇತನನಲ್ಲಿ ನಾಗವರ್ಮನಷ್ಟು ವ್ಯಾಪಕವಿಲ್ಲ. ಕರ್ನಾಟಕದ ವೈಯಾಕರಣರು ದ್ವಂದ್ವ ಸಮಾಸಕ್ಕೆ 'ಸರ್ವ ಪದಾರ್ಥ ಪ್ರಧಾನ' ಎಂದು ಲಕ್ಷಣವನ್ನು ಹೇಳಿದರೆ, ಕೇತನ 'ಉಭಯ ಪದಾರ್ಥ ಪ್ರಧಾನ' ಎಂದು ವಿವರಿಸಿದ್ದಾನೆ.

**ತದ್ಧಿತ** : ನಾಗವರ್ಮನ ಕ.ಭಾ.ಭೂ.ದಲ್ಲಿ ತದ್ಧಿತ ಪ್ರತ್ಯಯಗಳಿಗೆ ಒಂದು ಪ್ರತ್ಯೇಕ ಪ್ರಕರಣವಿದ್ದರೆ, ಕೇತನನ ಆಂ.ಭಾ.ಭೂ.ದಲ್ಲಿ ಅಂಥ ಪ್ರಕರಣ ಕಾಣಬರುವುದಿಲ್ಲ. ತದ್ಧಿತ ಪ್ರತ್ಯಯಗಳನ್ನು ಕೇತನ ಪ್ರಕೀರ್ಣ ವಿಷಯಗಳ ವಿವರಣೆಯಲ್ಲಿ ಸೇರಿಸಿದ್ದಾನೆ.

ನಾಗವರ್ಮನು ೨೦ ತದ್ಧಿತ ಪ್ರತ್ಯಯಗಳನ್ನು ಕೇವಲ ೧೫ ಸೂತ್ರಗಳಲ್ಲಿ ಕ್ರೋಢೀಕರಸಿದ್ದಾನೆ. ಕೇತನನಾದರೂ ೭ ಪದ್ಯಗಳಲ್ಲಿ ಅವುಗಳನ್ನು ಸಂಕ್ಷೇಪಗೊಳಿಸಿರುತ್ತಾನೆ.

ಕನ್ನಡ ತದ್ಧಿತ ಪ್ರತ್ಯಯಗಳು ಜಾತಿ, ವಸ್ತು, ಉದ್ಯೋಗ, ಗುಣ, ಶೈಲಿ, ಸ್ವಭಾವಗಳನ್ನು ನಿರ್ದೇಶಿಸುತ್ತವೆ. ಅಂತೆಯೇ ತನ, ಇಕೆ, ಕೆ, ಮ, ಪು, ತ- ಇವುಗಳು ತದ್ಧಿತ ಭಾವನಾಮಗಳೆನಿಸಿಕೊಂಡಿವೆ. ವಂತ, ಅನೆಯ - ಪ್ರತ್ಯಯಗಳು ಪ್ರಮಾಣ, ಸಂಖ್ಯೆಯ ಮೇಲೆ ಕಾಣಿಸಿಕೊಳ್ಳುತ್ತವೆ. ವೋಲ್, ಬೋಲ್-ಗಳು ಅಲಂಕಾರಾದಿ ಪ್ರತ್ಯಯಗಳಾಗಿವೆ. ಇವುಗಳನ್ನು ತದ್ಧಿತ ಅನ್ವಯಗಳೆಂದು ಕರೆಯಲಾಗಿದೆ.

ಕೇತನನ ತದ್ಧಿತ ಪ್ರತ್ಯಯಗಳ ವಿವರಣೆ ಕನ್ನಡದ ನಾಗವರ್ಮನಷ್ಟು ವಿಸ್ತಾರ ವೈವಿಧ್ಯತೆಗಳಿಂದ ಕೂಡಿಲ್ಲ. ತೆಲುಗು ತದ್ಧಿತ ಪ್ರತ್ಯಯಗಳು. ಪುಂ. ಸ್ತ್ರೀ ಲಿಂಗಗಳಲ್ಲಿ ಬಳಕೆಯಾಗುತ್ತವೆ. ತೆಲುಗಿನಲ್ಲಿ ಕನ್ನಡದಂತೆ ಭಾವನಾಮಗಳು ಕಡಿಮೆ ಎಂದು ಹೇಳಬಹುದು.

ಕನ್ನಡದಂತೆ ತೆಲುಗು ಪ್ರತ್ಯಯಗಳು ಕೂಡ ಜಾತಿ, ವಸ್ತು, ಉದ್ಯೋಗ, ಗುಣ, ಶೀಲ, ಸ್ವಭಾವವನ್ನು ನಿರ್ದೇಶಿಸುತ್ತವೆ. ಉಭಯ ಕೃತಿಗಳಲ್ಲೂ ವಿವರಣೆ ಸಾಲದು.

ಕನ್ನಡದಲ್ಲಿ ಆಖ್ಯಾತ ಪರಿಚ್ಛೇದವೆಂಬ ಹೆಸರಿನಲ್ಲಿ ಕ್ರಿಯಾಪಗಳ ವಿವರಣೆ ಇದ್ದರೆ ತೆಲುಗಿನಲ್ಲಿ ಅದನ್ನು ಕ್ರಿಯಾ ಪರಿಚ್ಛೇದವೆಂದೇ ಕರೆಯುವುದು ಅಭ್ಯಾಸವಾಗಿದೆ. ಧಾತು, ಕಾಲಸೂಚಕ ಪ್ರತ್ಯಯಗಳು ಇತ್ಯಾದಿ ವಿಭಜನೆಯನ್ನು ನಾಗವರ್ಮ

ಮಾಡಿದಂತೆ ಕೇತನ ಮಾಡಿಲ್ಲ. ಕೇತನನ ಕ್ರಿಯಾಪದ ನಿರೂಪಣೆ ಸಂಕ್ಷಿಪ್ತವಾಗಿ ಮೂಡಿಬಂದಿದೆ. ಅವ್ಯಯ ಮತ್ತು ನಿಪಾತಗಳಿಗೆ ಸಂಬಂಧಿಸಿದಂತೆ ನಾಗವರ್ಮ ಪ್ರತ್ಯೇಕವಾಗಿ ಬರೆದಿರುವಂತೆ ಕೇತನ ಬರೆದಿಲ್ಲ.

ಒಟ್ಟಿನಲ್ಲಿ ಕರ್ಣಾಟಕ ಭಾಷಾಭೂಷಣಂ ಕನ್ನಡ ವ್ಯಾಕರಣಾಂಶಗಳ ಸವಿವರ ನಿರೂಪಣೆಯಾದರೆ, ಆಂಧ್ರ ಭಾಷಾ ಭೂಷಣಂ ತೆಲುಗು ವ್ಯಾಕರಣಾಂಶಗಳ ಸ್ಥೂಲ ನಿರೂಪಣೆ ಎನ್ನಬಹುದು. ಕರ್ಣಾಟಕ ಭಾಷಾ ಭೂಷಣವನ್ನು ಕೇತನ ನೋಡಿರುವ ಸಾಧ್ಯತೆ ಇದ್ದರೂ, ಅವನು ತೆಲುಗು ಭಾಷೆಯ ಜಾಯಮಾನಕ್ಕೆ ತಕ್ಕಂತೆ ವ್ಯಾಕರಣವನ್ನು ಬರೆದಿರುವುದು ಸ್ಪಷ್ಟವಾಗಿದೆ. ಕರ್ಣಾಟಕ ಭಾಷಾ ಭೂಷಣ ಸೂತ್ರ ರೂಪದ್ದಾಗಿದ್ದು, ಆಂಧ್ರ ಭಾಷಾ ಭೂಷಣ ಪದ್ಯರೂಪದಲ್ಲಿ ವಿವರಣಾತ್ಮಕವಾಗಿ ಮೂಡಿ ಬಂದಿರುವುದು ಪ್ರಧಾನ ವ್ಯತ್ಯಾಸವೆನ್ನಬಹುದು.

# ಗ್ರಂಥಸೂಚಿ

## ಕನ್ನಡ


ಅನಂತರಂಗಾಚಾರ್, ಎನ್ (ಸಂ) : ಕರ್ನಾಟಕ ಪಂಚತಂತ್ರ-ದುರ್ಗಸಿಂಹ ಶಾರದಾ ಮಂದಿರ, ಮೈಸೂರು - ೧೯೭೩.

ಕಿಟ್ಟೆಲ್, ರೆ.ಫಾ (ಸಂ) : ಕೇಶಿರಾಜಕವಿಯ ಶಬ್ದಮಣಿದರ್ಪಣಂ (ನಾಲ್ಕನೆಯ ಪರಿಷ್ಕೃತ ಆವೃತ್ತಿ) ಪ್ರ: ಶಂಭುಲಿಂಗಪ್ಪ, ಶಿವರುದ್ರಪ್ಪ, ಕುಲಕರ್ಣಿ, ಧಾರವಾಡ - ೧೯೬೫.

ಕುಂಡಲಗಿರಿ ಆಚಾರ್ಯ (ಸಂ) : ಕರ್ನಾಟಕ ಶಬ್ದಾನುಶಾಸನ ಪ್ರಕಾಶಿಕೆ ಕರ್ನಾಟಕ ವಿದ್ಯಾವರ್ಧಕ ಸಂಘ, ಧಾರವಾಡ - ೧೯೪೧.

ಕುಲಕರ್ಣಿ, ಪ್ರ.ಗೋ : ಕನ್ನಡಡ ಭಾಷೆಯ ಚರಿತ್ರೆ, ಹಿಂದವಾಡಿ, ಬೆಳಗಾಂ - ೧೯೬೭.

ಕುಳ್ಳಿ, ಜಿ.ಎಸ್. : ವರ್ಣನಾತ್ಮಕ ಭಾಷಾವಿಜ್ಞಾನ ಸಿರಿಗನ್ನಡ ಪ್ರಕಾಶನ, ಧಾರವಾಡ - ೧೯೭೧.

ಕುಶಾಲಪ್ಪಗೌಡ, ಕೆ (ಡಾ.) : ಕನ್ನಡ ಭಾಷೆ ಮತ್ತು ವ್ಯಾಕರಣಗಳ ಒಂದು ಅಧ್ಯಯನ, ಪ್ರಸಾರಾಂಗ, ಮೈಸೂರು - ೧೯೮೬.

ಕೃಷ್ಣಕುಮಾರ್, ಸಿ.ಪಿ. (ಡಾ.) : ನಾಗವರ್ಮನ ಕರ್ಣಾಟಕ ಕಾದಂಬರಿ, ಪ್ರಸಾರಾಂಗ, ಮೈಸೂರು - ೧೯೭೬.

ಕೃಷ್ಣರಾವ್, ಕೆ.ಎಂ. (ಡಾ.) : ಕನ್ನಡ ಭಾಷಾ ಸ್ವರೂಪ, ಉಷಾ ಸಾಹಿತ್ಯಮಾಲೆ, ಮೈಸೂರು - ೧೯೬೮.

ಕೆಂಪೇಗೌಡ, ಕೆ (ಡಾ.) ಮತ್ತು ಸುಂದರಂ, ಆರ್ವೀಯಸ್ (ಡಾ.) : ಧ್ವನಿ ವಿಜ್ಞಾನ, ಭಾಷಾವಿಜ್ಞಾನ ಭಾರತಿ, ಮೈಸೂರು - ೧೯೭೯.

ಗೋಪಾಲಕೃಷ್ಣಭಟ್ಟ, ತೆಕ್ಕುಂಜಿ : ಕನ್ನಡ ಸಮಾಸಗಳು, ಡಿ.ವಿ.ಕೆ.ಮೂರ್ತಿ, ಮೈಸೂರು - ೧೯೭೦.

ಚಿದಾನಂದಮೂರ್ತಿ, ಎಂ (ಡಾ.) : ಭಾಷಾ ವಿಜ್ಞಾನದ ಮೂಲ ತತ್ತ್ವಗಳು ಡಿ.ವಿ.ಕೆ. ಮೂರ್ತಿ, ಮೈಸೂರು-೧೯೮೬.

ಚಾವುಂಡರಸ : ಅಭಿನವದಶಕುಮಾರಚರಿತೆ, ಕನ್ನಡಸಾಹಿತ್ಯ ಪರಿಷತ್ತು, ಬೆಂಗಳೂರು - ೧೯೭೭.

ದೇವೀರಪ್ಪ, ಎಚ್. ಮತ್ತು ಪದ್ಮನಾಭಶರ್ಮ (ಸಂ). : ಅನಂತನಾಥ ಪುರಾಣ, ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು - ೧೯೭೨.

ಧಾರವಾಡಕರ, ರಾ.ಯ : ಕನ್ನಡ ಭಾಷಾಶಾಸ್ತ್ರ (ಐದನೆಯ ಆವೃತ್ತಿ), ಗೀತಾಬುಕ್ ಹೌಸ್, ಮೈಸೂರು-೧೯೭೩.

ನರಸಿಂಹಾಚಾರ್, ಡಿ.ಎಲ್ (ಸಂ) : ಶಬ್ದಮಣಿದರ್ಪಣಂ, ಶಾರದಾ ಮಂದಿರ, ಮೈಸೂರು - ೧೯೭೪.

ನರಸಿಂಹಾಚಾರ್, ಆರ್ (ಸಂ.) : ಕರ್ಣಾಟಕ ಕವಿಚರಿತೆ, ಭಾಗ ೧,೨,೩ , ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು - ೧೯೬೧-೭೨.

ನರಸಿಂಹಾಚಾರ್, ಆರ್ (ಸಂ.) : ಕಾವ್ಯಾವಲೋಕನ- ನಾಗವರ್ಮ (ಮೂರನೆಯ ಮುದ್ರಣ), ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು-೧೯೬೭.

ನರಸಿಂಹಾಚಾರ್, ಆರ್ (ಸಂ.) : ಕರ್ಣಾಟಕ ಶಬ್ದಾನುಶಾಸನಂ, ಭಟ್ಟಾಕಳಂಕ, ಬೆಂಗಳೂರು-೧೯೬೮.

ನರಸಿಂಹಾಚಾರ್, ಆರ್ (ಸಂ.) : ಕರ್ಣಾಟಕ ಭಾಷಾಭೂಷಣಂ, ಶಾರದಾಮಂದಿರ, ಮೈಸೂರು - ೧೯೭೪.

ನಾಗರಾಜಯ್ಯ, ಹಂ.ಪ. : ದ್ರಾವಿಡ ಭಾಷಾ ವಿಜ್ಞಾನ, ಡಿ.ವಿ.ಕೆ.ಮೂರ್ತಿ, ಮೈಸೂರು, ದ್ವಿತೀಯ ಮುದ್ರಣ ೧೯೭೨.

ನಾರಾಯಣಶಾಸ್ತ್ರೀ, ಹ.ವೆ. (ಸಂ.) : ಕರ್ಣಾಟಕ ಕಾದಂಬರಿ - ನಾಗವರ್ಮ ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು - ೧೯೭೭.

ನೇಗಿನಹಾಳ, ಎಂ.ಬಿ. : ಪ್ರಾಚೀನ ಕನ್ನಡ ಶಾಸನಗಳ ಭಾಷಿಕ ಅಧ್ಯಯನ ಪ್ರಸಾರಾಂಗ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ-೧೯೮೨.

ಪಂಚಮುಖಿ, ಆರ್. ಎಸ್ : ಕವಿಜಿಹ್ವಾಬಂಧನ ಈಶ್ವರ ಕವಿ ಕನ್ನಡ ಸಂಶೋಧನಾ ಸಂಸ್ಥೆ, ಧಾರವಾಡ - ೧೯೫೫.

ಪದ್ಮನಾಭಶರ್ಮ, ಡಿ.ಭುವನಹಳ್ಳಿ (ಸಂ.) : ಕರ್ಣಾಟಕಶಬ್ದಾನುಶಾಸನಂ, ರಾಜಕಮಲ್ ಪ್ರಕಾಶನ ಬಳೇಪೇಟೆ, ಬೆಂಗಳೂರು - ೧೯೬೮.

ಪುಟ್ಟಪ್ಪ, ಕೆ.ವಿ (ಸಂ.) : ಕನ್ನಡ ಕೈಪಿಡಿ, ಮೈಸೂರು. ವಿಶ್ವವಿದ್ಯಾನಿಲಯ, ಮೈಸೂರು-೧೯೫೫.

ಬಸವನಾಳ ಶಿ.ಶಿ; ಮತ್ತು ಕೇಪು ಶಂಕರನಾರಾಯಣ (ಸಂ.) : ಕಾವ್ಯಾವಲೋಕನಂ, ಕರ್ನಾಟಕ ವಿದ್ಯಾವರ್ಧಕ ಸಂಘ, ಧಾರವಾಡ - ೧೯೩೯.

ಬಸವರಾಜು, ಎಲ್ (ಡಾ.) (ಸಂ) : ಶಬ್ದಮಣಿದರ್ಪಣಂ, ಬೃಹನ್ಮಠ ಪ್ರಕಾಶನ, ಚಿತ್ರದುರ್ಗ - ೧೯೮೭.

ಬಿರಾದಾರ, ಸಂಗಮೇಶ (ಡಾ.) : ವೈಯಾಕರಣಿ ಎರಡನೆಯ ನಾಗವರ್ಮ, ಪ್ರಸಾರಾಂಗ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ.

ಬಿಳಿಗಿರಿ, ಹೆಚ್, ಎಸ್ : ಆಲೋಕ ಭಾಗ - ೧, ಅಕ್ಷರ ಪ್ರಕಾಶನ, ಸಾಗರ - ೧೯೬೯.

ವರ್ಣನಾತ್ಮಕ ವ್ಯಾಕರಣ, ಬೆಂಗಳೂರು ವಿಶ್ವವಿದ್ಯಾಲಯ, ಬೆಂಗಳೂರು-೧೯೭೦

ಬೇಂದ್ರೆ, ದ.ರಾ. : ಸಾಹಿತ್ಯ ಸಂಶೋಧನೆ ಮನೋಹರ ಗ್ರಂಥಮಾಲೆ, ಧಾರವಾಡ - ೧೯೪೦.

ಭೀಮರಾವ್ ಚಿಟಗುಪ್ಪಿ : ಇಮ್ಮಡಿ ನಾಗವರ್ಮ (ಒಂದು ವಿವೇಚನೆ), ಭಾರದ್ವಾಜ ಪ್ರಕಾಶನ, ಕದಿರೆ, ಮಂಗಳೂರು - ೧೯೮೩.

ಮೇಲಣಕರ, ಹ.ದ (ಸಂ.) : ಹೇಮಚಂದ್ರ ವಿರಚಿತ ಛಂದೋನುಶಾಸನ, ಸಿಂಪಿ ಜೈನ ಗ್ರಂಥಮಾಲೆ, ೧೯೬೧.

ಶಂಭುಲಿಂಗಪ್ಪ, ಟಿ. : ಶಬ್ದಮಣಿದರ್ಪಣ ಸೂತ್ರ ಸಾರ, ಚಿತ್ರದುರ್ಗ ಪ್ರಕಾಶನ, ಚಿತ್ರದುರ್ಗ - ೧೯೭೬.

ಶಾಮರಾಯ, ತ.ಸು. ಮತ್ತು ನಂಜುಂಡೇಗೌಡ, ಎಚ್. (ಸಂ) : ಶಬ್ದಮಣಿದರ್ಪಣಂ ತ.ವೆಂ. ಸ್ಮಾರಕ ಗ್ರಂಥಮಾಲೆ, ಮೈಸೂರು - ೧೯೭೬.

ಶಿವಾನಂದ, ವಿ. (ಡಾ.) : ಕೇಶಿರಾಜನ ಶಬ್ದಮಣಿದರ್ಪಣ ವಿಳಾಸ, ವಿಜಯ ಬುಕ್ ಡಿಪೋ, ಸ್ಟೇಷನ್ ರೋಡ, ಗದಗ - ೧೯೭೨.

ಶ್ರೀ ಕಂಠಯ್ಯ, ತೀ.ನಂ. : ಭಾರತೀಯ ಕಾವ್ಯ ಮೀಮಾಂಸೆ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು - ೧೯೭೦.

ಶ್ರೀ ಕೃಷ್ಣ ಭಟ್, ಪಿ.(ಡಾ.) : ಕನ್ನಡ ವ್ಯಾಕರಣ ಪರಂಪರೆಯ ಮೇಲೆ ಸಂಸ್ಕೃತದ ಪ್ರಭಾವ, ವಿದ್ಯಾಪ್ರಕಾಶನ, ಕಾಸರಗೋಡು - ೧೯೮೯.

ಸಣ್ಣಯ್ಯ, ಬಿ.ಎಸ್ (ಸಂ) : ವರ್ಧಮಾನ ಪುರಾಣಂ, ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು - ೧೯೭೪.

ಸವದತ್ತಿಮಠ ಸಂಗಮೇಶ (ಡಾ.) : ಕನ್ನಡ ಭಾಷಾ ವ್ಯಾಸಂಗ, ರೂಪಲಕ್ಷ್ಮೀ ಪ್ರಕಾಶನ, ನೆಹರೂ ಗಂಜ, ಗುಲಬರ್ಗ - ೧೯೭೯.

: ದ್ರಾವಿಡ ಭಾಷಾವಿಜ್ಞಾನ ಪರಿಚಯ, ವಾಗ್ದೇವಿ ಪ್ರಕಾಶನ, ಮೈಸೂರು-೧೯೮೫,

ಸೀತಾರಾಮಯ್ಯ, ಎಂ.ವಿ. : ಪ್ರಾಚೀನ ಕನ್ನಡ ವ್ಯಾಕರಣಗಳು, ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು - ೧೯೭೯.

ಸೀತಾರಾಮಯ್ಯ, ಎಂ. ವಿ. (ಸಂ.) : ಎರಡನೇ ನಾಗವರ್ಮ, ಐ ಬಿ ಎಚ್ ಪ್ರಕಾಶನ, ಬೆಂಗಳೂರು - ೧೯೭೩.

ಭೀಮಸೇನರಾವ್, ಡಿ.ಕೆ. (ಸಂ) : ಶಬ್ದಮಣಿದರ್ಪಣದ ಪಾಠಾಂತರಗಳು ದ್ವಿತೀಯ ಮುದ್ರಣ, ಕರ್ನಾಟಕ ವಿಶ್ವವಿದ್ಯಾನಿಲಯ, ಧಾರವಾಡ-೧೯೭೩.

ಅದೇ : ಶಬ್ದಮಣಿದರ್ಪಣಂ, ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು - ೧೯೭೭.

ಮರಿಯಪ್ಪ ಭಟ್ಟ, ಎಂ. : ಕನ್ನಡ ಸಂಸ್ಕೃತಿ ಕರ್ನಾಟಕ ಸಹಕಾರಿ ಪ್ರಕಾಶನ, ಬೆಂಗಳೂರು - ೧೯೬೭.

ಮುಗಳಿ, ರಂ.ಶ್ರೀ : ಕನ್ನಡ ಸಾಹಿತ್ಯ ಚರಿತ್ರೆ, ಉಷಾಸಾಹಿತ್ಯ ಮಾಲೆ, ಮೂರನೆಯ ಮುದ್ರಣ ಮೈಸೂರು - ೧೯೬೪.

ರಾಘವಾಚಾರ್, ಕೆ.ವಿ. (ಸಂ) : ಯಶೋಧರ ಚರಿತೆ - ಜನ್ನ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು-೧೯೪೨

ವೆಂಕಟರಾವ್, ಎ. ಮತ್ತು ಶೇಷ ಅಯ್ಯಂಗರ್, ಎಚ್. (ಸಂ) : ಶಬ್ದಮಣಿದರ್ಪಣಂ, ಮದರಾಸು ವಿಶ್ವವಿದ್ಯಾನಿಲಯ, ಮದರಾಸು-೧೯೩೯

: ಅಭಿಧಾನ ರತ್ನಮಾಲಾ ಕರ್ಣಾಟಕ ಟೀಕೆ, ಮದರಾಸು ವಿಶ್ವವಿದ್ಯಾನಿಲಯ, ಮದರಾಸು - ೧೯೭೯.

ವೆಂಕಟಸುಬ್ಬಯ್ಯ, ಎ. : ಕೆಲವು ಕನ್ನಡ ಕವಿಗಳ ಜೀವನ ಕಾಲ ವಿಚಾರ, ಕರ್ಣಾಟಕ ಸಂಘ, ಸೆಂಟ್ರಲ್ ಕಾಲೇಜು, ಬೆಂಗಳೂರು - ೧೯೩೭.

ವೆಂಕಟಾಚಲಶಾಸ್ತ್ರೀ, ಟಿ.ವಿ. (ಡಾ.) : ಶಬ್ದಾರ್ಥ ವಿಹಾರ, ಅಪರ್ಣಾ ಪ್ರಕಾಶನ, ಮೈಸೂರು - ೧೯೭೯.

: ಹೊಸಗನ್ನಡ ವ್ಯಾಕರಣ ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನ, ಬೆಂಗಳೂರು - ೧೯೯೦.

ವೆಂಕಣ್ಣಯ್ಯ, ಟಿ.ಎಸ್. (ಸಂ) : ಕರ್ಣಾಟಕ ಕಾದಂಬರೀ ಸಂಗ್ರಹ, ಪ್ರಸಾರಾಂಗ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು-೧೯೫೨.

ಸುಂದರಂ, ಆರ್ವಿಯಸ್ (ಡಾ.) : ತೆಲುಗು ಭಾಷೆ ಮತ್ತು ಸಾಹಿತ್ಯ ಪ್ರಸಾರಾಂಗ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು-೧೯೮೫

ಸುಬ್ರಾಯಭಟ್. ಪಿ. ಮತ್ತು ತಿಮ್ಮಪ್ಪ, ಬಿ.ಕೆ. (ಅನು.) : ಲೀಲಾತಿಲಕಂ, ಕನ್ನಡ ಅಧ್ಯಯನಸಂಸ್ಥೆ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು - ೧೯೭೪.

**ತೆಲುಗು**

ಅಥರ್ವಣ : ಅಥರ್ವಣ ಕಾರಿಕಾವಳಿ ಅಥವಾ ವಿಕೃತಿ ವಿವೇಕಮು, ವಾವಿಳ್ಳ ಪ್ರೆಸ್, ಮದರಾಸು ೧೯೫೫

ಅನಂತಾಮಾತ್ಯ : ಛಂದೋದರ್ಪಣಮು, ವಾವಿಳ್ಳ ಪ್ರೆಸ್, ಮದರಾಸು - ೧೯೫೮.

ಅಹೋಬಲಪತಿ : ಕವಿಶಿರೋಭೂಷಣಮು ಅಥವಾ ಅಹೋಬಲ ಪಂಡಿತೀಯಮು, ಮಂಜುವಾಣಿ ಪ್ರೆಸ್,ಏಲೂರು-೧೯೦೩

ಕೇತನ : ಆಂಧ್ರ ಭಾಷಾಭೂಷಣಮು, ವಾವಿಳ್ಳ ಪ್ರೆಸ್, ಮದರಾಸು - ೧೯೪೯.

ಚಿನ್ನಯ ಸೂರಿ : ಆಂಧ್ರ ಶಬ್ದಾನುಶಾಸನಮು, ಆಂಧ್ರ ಸಾಹಿತ್ಯ ಪರಿಷತ್ತು, ಕಾಕಿನಾಡ - ೧೯೩೧.

ಚಿನ್ನಯ ಸೂರಿ : ಬಾಲವ್ಯಾಕರಣಮು, ಆಂಧ್ರ ಸಾಹಿತ್ಯ ಪರಿಷತ್ತು, ಕಾಕಿನಾಡ - ೧೯೩೧.

ನಾರಾಯಣರಾವ್ ಚಿಲುಕೂರಿ : ಆಂಧ್ರಭಾಷಾ ಚರಿತ್ರ, ಭಾಗ ೧, ೨, ಆಂಧ್ರ ಯೂನಿವರ್ಸಿಟಿ, ವಾಲ್ತೇರು - ೧೯೩೭.

ಪುರುಷೋತ್ತಂ, ಬೊಡ್ಡುಪಲ್ಲಿ (ಡಾ.): ತೆಲುಗು ವ್ಯಾಕರಣ ವಿಕಾಸಮು, ಸಂ ೧,೨. ಶ್ರೀ ಗಿರಿಜಾ ಪ್ರಚುರಣಲು, ಶೇಷಾದ್ರಿ ನಿಲಯಂ, ಬೊಡ್ಡಪಲ್ಲಿವಾರಿ ವೀಧಿ, ಬಾಪಟ್ಲ - ೧೯೬೯.

ಪುರುಷೋತ್ತಂ, ಬೊಡ್ಡುಪಲ್ಲಿ (ಡಾ) (ಸಂ) : ಚಿನ್ನಯಸೂರಿ- ಬಾಲ ವ್ಯಾಕರಣಮು ಸ್ಟೂಡೆಂಟ್ಸ್ ಫ್ರೆಂಡ್ಸ್, ನರಸಾರಾವುಪೇಟ - ೧೯೮೩.

ರಾಜೇಶ್ವರಶರ್ಮ, ಎ. (ಡಾ.) : ಆಂಧ್ರ ವ್ಯಾಕರಣ ವಿಕಾಸಮು, ಭಾಗ ೧,೨ ಪ್ರಾಚ್ಯ ವಿದ್ಯಾಪರಿಷತ್ತು, ಕಾಮಾರೆಡ್ಡಿ - ೧೯೭೩.

ರಾಮಕೃಷ್ಣಯ್ಯ, ಕೋರಾಡ : ಭಾಷಾ ಚಾರಿತ್ರಕ ವ್ಯಾಸಮುಲು-೧೯೫೪.

ರಾಮ ಬ್ರಹ್ಮ ಚೇತವೋಲು (ಡಾ.): ತೆಲುಗು ವ್ಯಾಕರಣಾಲ ಪೈ ಸಂಸ್ಕೃತ ಪ್ರಾಕೃತ ವ್ಯಾಕರಣಾಲ ಪ್ರಭಾವಂ ೧೯೮೩.

ವೀರೇಶಲಿಂಗಂ, ಕಂದುಕೂರಿ : ಸಂಗ್ರಹ ವ್ಯಾಕರಣಮು - ೧೯೧೬.

ವೆಂಕಟಪತಿ, ಗಣಪವರಪು : ಆಂಧ್ರ ಕೌಮುದಿ ಆಂಧ್ರ ಸಾಹಿತ್ಯ ಪರಿಷತ್ತು, ಕಾಕಿನಾಡ - ೧೯೩೫.

ವೆಂಕಟಾವಧಾನಿ, ದಿವಾಕರ್ಲ (ಡಾ.): ಚೈತನ್ಯಲಹರಿ, ಯುವಭಾರತಿ, ಸಿಕಿಂದರಾಬಾದು - ೧೯೭೨.

ಶಿವಕುಮಾರ್, ಹರಿ (ಡಾ.) : ಕೇತನ, ಶ್ರೀ ಕೃಷ್ಣ ಪ್ರಚುರಣಲು ವರಂಗಲ್ - ೧೯೭೩

ಸೂರಯ್ಯ, ದೇವಿನೇನಿ : ಆಂಧ್ರ ಭಾಷಾ ಭೂಷಣಂ (ದಿವ್ಯ ಪ್ರಭಾವಿವರಣ) ೧೯೫೩.

ಸೋಮಯಾಜಿ, ಗಂಟಿಜೋಗಿ : ಆಂಧ್ರ ಭಾಷಾ ವಿಕಾಸಮು, ೧೯೪೭.

**ENGLISH**

Apte, V.S. : A Sanskrit -English Dictionary- 1922.

Burrow, T. : Collected Papers in Dravidian Linguistics - 1968

Burrow, T. and Emineau, M.B. : Dravidian Etymological Dictionary, Oxford - 1913.

Caldwell : A comparative Grammar of the Dravidian Languages, Third Edition - 1913.

Kittel : Kannada-English Dictionary - 1894.

Naik, H.M (Dr.) : Kannada-Literary and Colloquial 1967.

Narasimhacharya, R. : History of Kannada Language - 1934.

Narasimhaiah, A.N. : Grammar of the Oldest Kannada Inscriptions - 1941.

Ramakrishnaiah, K. : Studies in Dravidian Philology - 1935.

**ಬಿಡಿ ಲೇಖನಗಳು**

ಸಂಕೇತ ಸೂಚಿ :

| | | |
|---|---|---|
| ಕ.ನು | : | ಕನ್ನಡ ನುಡಿ. |
| ಕ.ಭಾ | : | ಕರ್ನಾಟಕ ಭಾರತಿ. |
| ಕ.ಸಾ.ಪ.ಪ | : | ಕನ್ನಡ ಸಾಹಿತ್ಯ ಪರಿಷತ್ಪತ್ರಿಕೆ. |
| ಪ್ರ.ಕ | : | ಪ್ರಬುದ್ಧ ಕರ್ನಾಟಕ. |
| ಮಾ.ಕ | : | ಮಾನವಿಕ ಕರ್ನಾಟಕ. |
| ಸಾ | : | ಸಾಧನೆ. |

ಕಲಬುರ್ಗಿ, ಎಂ. ಎಂ. (ಡಾ.) : 'ನಾಗವರ್ಮನು ಜನ್ನನ ಗುರುವಲ್ಲ' ಕ.ಭಾ. ಸಂಪು ೭, ಸಂ. ೩, ೧೯೭೪.

ಕುಶಾಲಪ್ಪಗೌಡ, ಕೆ. (ಡಾ.) : ಚತುರ್ಥೀ ವಿಭಕ್ತಿ (ಸಂಶೋಧನೆ), ಪ್ರ.ಕ. ಸಂಪು - ೫೫, ಸಂ. ೪, ೧೯೭೪.

ಕೃಷ್ಣಸ್ವಾಮಿ ಅಯ್ಯರ್, ವಿ. : 'ಗಮಕ ಸಮಾಸ' ಕ.ನು ಸಂಪು. ೨೮, ಸಂ. ೪.

ಕೆಂಪೇಗೌಡ, ಕೆ. (ಡಾ.) : ದ್ರಾವಿಡ ಸರ್ವನಾಮಗಳು -ತೌಲನಿಕ ಭಾಷಾ ವಿಜ್ಞಾನ, ಮಾ.ಕ. ಸಂಪು-೧೫, ಸಂ. ೨, ೧೯೮೫.

” : ‘ಸಂಖ್ಯಾವಾಚಕಗಳು’ - ತೌಲನಿಕ ಭಾಷಾ ವಿಜ್ಞಾನ, ಪ್ರ.ಕ. ಸಂಪು-೧೬, ಸಂ. ೭, ೧೯೮೫.

” ಕನ್ನಡ ಭಾಷೆಯ ಧ್ವನಿಮಗಳ ವಿಶ್ಲೇಷಣೆ, ಪ್ರ.ಕ. ಸಂಪು. ೬೫, ಸಂ. ೧-೨-೩, ೧೯೮೫.

ಗೋವಿಂದಪ್ಪೈ, ಎಂ. : ‘ನಾಗವರ್ಮರು ಎಷ್ಟು ಮಂದಿ?,’ ಕ.ಸಾ.ಪ.ಪ ಸಂಪು ೧, ಸಂ. ೩.

ಚಿದಾನಂದಮೂರ್ತಿ, ಎಂ. (ಡಾ.) : ‘ಇಲಚ’ ಪ್ರ.ಕ.ಸಂಪು - ೬೮, ಸಂ ೨, ೧೯೮೬.

ಚೆನ್ನಕೇಶವ ಅಯ್ಯಂಗಾರ್, ಎಚ್. : ‘ಇಬ್ಬರು ನಾಗವರ್ಮರು’, ಕ.ಸಾ.ಪ.ಪ ಸಂಪು - ೧೪, ಸಂ. ೩.

ಭೀಮರಾವ್ ಚಿಟಗುಪ್ಪಿ : ‘ಇಮ್ಮಡಿ ನಾಗವರ್ಮನ ಛಂದೋವಿಚಿತಿ’ ಪ್ರ.ಕ. ಸಂಪು-೫೦, ಸಂ. ೪.

ಮರಿಯಪ್ಪಭಟ್, ಎಂ : ‘ಸಪ್ತಮೀ ವಿಭಕ್ತಿ’ ಪ್ರ.ಕ. ಸಂಪು ೨೯, ಸಂ. ೧. ೧೯೪೭.

ಲಕ್ಷ್ಮೀನಾರಾಯಣ, ಅರೋರಾ : ‘ವಾಕ್ಯ ರಚನೆ ಮತ್ತು ವಿಶ್ಲೇಷಣೆ’ ಮಾ.ಕ. ಸಂಪು - ೧೫, ಸಂ. ೩, ೧೯೮೫.

ವಿಲಿಯಂ ಮಾಡ್ತ. (ಡಾ.) : ‘ಕನ್ನಡದಲ್ಲಿ ಸಮಾಸ’ ಕ.ನು. ಸಂಪು-೪, ಸಂ. ೭.

” : ‘ಕನ್ನಡ ಸಂಧಿ’, ಕ.ಭಾ ಸಂಪು-೧, ಸಂ. ೧೮.

ವೆಂಕಟಾಚಲಶಾಸ್ತ್ರಿ, ಟಿ.ವಿ. (ಡಾ.) : ‘ಕನ್ನಡ ಲಕ್ಷಣ ಗ್ರಂಥಗಳ ಸಂಪಾದನೆ’, ಕ.ಸಾ.ಪ ಪ, ಸಂಪು - ೬೮, ಸಂ. ೧, ೧೯೮೩.

” ‘ಪ್ರಾಚೀನ ಲಕ್ಷಣ ಗ್ರಂಥಗಳಲ್ಲಿ ಕನ್ನಡ ಪಾರಿಭಾಷಿಕ ಶಬ್ದಗಳು’, ಪ್ರ.ಕ. ಸಂಪು-೬೯, ಸಂ.೪, ೧೯೮೮.

ವೆಂಕಟೇಶಯ್ಯ, ಎಂ.ಜಿ. : ಇಬ್ಬರು ನಾಗವರ್ಮರ ವಿಚಾರ ಕ.ಸಾ.ಪ.ಪ. ಸಂಪು - ೬೭, ಸಂ.೨, ೧೯೮೨.

ಶಂಭುಲಿಂಗಪ್ಪ, ಟಿ. (ಡಾ) : 'ತೆಲುಗು ಭಾಷೆಯ ಬಹುವಚನ ಪ್ರತ್ಯಯಗಳು', ಪ್ರ.ಕ. ಸಂಪು - ೬೯, ಸಂ. ೧, ೧೯೮೭.

ಶಾಂತವೀರಯ್ಯ, ಹೀ.ಚಿ. : 'ಬಾಳಿ (ಬಾೞಿ)', ಪ್ರ.ಕ. ಸಂಪು-೬೫, ಸಂ. ೧-೨-೩ ೧೯೮೫.

ಶ್ರೀಕಂಠಯ್ಯ, ತೀ.ನಂ. : 'ಉಳ್-ಒಳಗು', ಕ..ಸಾ. ಪ.ಪ. ಸಂಪು - ೨೪, ಸಂ ೩.

ಸಂಗಮೇಶ ಬಿರಾದಾರ, (ಡಾ.) : 'ಎರಡನೆಯ ನಾಗವರ್ಮನ ಕಾಲ', ಸಾ. ಸಂಪು - ೪ ಸಂ. ೧, ೧೯೭೫.

ಸಣ್ಣಯ್ಯ, ಬಿ.ಎಸ್ : 'ನಾಗವರ್ಮ ಮತ್ತು ವರ್ಧಮಾನ ಪುರಾಣಂ', ಪ್ರ.ಕ. ಸಂಪು - ೫೫, ಸಂ. ೨, ೧೯೭೫.

ಸೀತಾರಾಮಯ್ಯ, ಎಂ.ವಿ : 'ಎರಡನೆಯ ನಾಗವರ್ಮನ ಕಾಲವಿಚಾರ', ಪ್ರ.ಕ. ಸಂಪು - ೬೦, ಸಂ. ೨, ೧೯೭೫.

ಸೀತಾರಾಮ ಜಾಗೀರ್‌ದಾರ್ : 'ಪಂಪ, ಅಭಿನವ ಪಂಪ: ಕೆಲವು ಸಮಸ್ಯೆಗಳು', ಕ.ಸಾ.ಪ.ಪ. ಸಂಪು - ೭೦, ಸಂ. ೨, ೧೯೮೫.

## ತೆಲುಗು ಭಾಷೆಯ ಕೆಲವು ಪಾರಿಭಾಷಿಕ ಪದಗಳು

ಅದುಲು, ಕಾದುಲು : ಸ್ವರ ಮತ್ತು ವ್ಯಂಜನಗಳಿಗೆ ಇನ್ನೊಂದು ಹೆಸರು ಇವು ಕಾತಂತ್ರದ ಸಂಜ್ಞೆಗಳು.

ಅಚ್ಚುಲು, ಹಲ್ಲುಲು : ಸ್ವರ ಮತ್ತು ವ್ಯಂಜನಗಳಿಗೆ ಪಾಣಿನೀಯ ಸಂಜ್ಞೆಯಿಂದಾದ ತೆಲುಗು ಹೆಸರುಗಳು.

ಅಂತಸ್ಥ : ಅವರ್ಗೀಯ ವ್ಯಂಜನಗಳಾದ ಯ, ರ, ಲ, ವ ಗಳಿಗೆ ಹೆಸರು.

| | | |
|---|---|---|
| ಅದನಮುಲು | : | ತೆಲುಗು ಭಾಷೆಯ ಅಧಿಕಾಕ್ಷರಗಳು; ಕನ್ನಡದ ದೇಶೀಯಾಕ್ಷರಗಳಿದ್ದಂತೆ. ಎ, ಒ, ಚ, ಜ (ಅರ್ಧಬಿಂದು) ಇವು ಅದನಮುಲು. |
| ಅಲಘು | : | ಯ, ರ, ಲ, ವ ಕೆಲವು ಸಂದರ್ಭಗಳಲ್ಲಿ ಲಘು, ಅಲಘು ಸಂಜ್ಞೆಯನ್ನು ಪಡೆಯುತ್ತವೆ. |
| ಪರುಷ, ಸರಳ | : | ವರ್ಗ ಪ್ರಥಮಾಕ್ಷರಗಳಾದ ಕಚಟತಪಗಳಿಗೆ ಪರುಷಗಳೆಂದು ಹೆಸರು. ಇದು ಆಂ. ಶ . ಚಿಂ. ಯಲ್ಲೇ ಬಳಕೆಯಾಗಿದೆ. ಗಜಡದಬ-ಸರಳಗಳು. |
| ಸ್ಥಿರ | : | ಪರುಷ, ಸರಳಗಳಲ್ಲದೆ ಉಳಿದ ವ್ಯಂಜನಗಳಿಗೆ ಸ್ಥಿರವೆಂಬ ಸಂಜ್ಞೆ. |
| ಸವರ್ಣಾಕ್ಷರ | : | ಅಆ, ಇಈ, ಉಊ, ಋೠ - ಇವು ಸವರ್ಣಾಕ್ಷರಗಳು. ತೆಲುಗಿನಲ್ಲಿ ಚ ಮತ್ತು ಚ, ಜ ಮತ್ತು ಜ ಸವರ್ಣಗಳೇ. |
| ವಕ್ರಮು, ವಕ್ರತಮಮು | : | ವಕ್ರವೆಂದರೆ ಬಾಗಿದ್ದು, ವಕ್ರತಮವೆಂದರೆ ಹೆಚ್ಚಾಗಿಬಾಗಿದ್ದು. ಏ, ಓ ಗಳಿಗೆ ವಕ್ರಗಳೆಂದು, ಐ ಔಗಳಿಗೆ ವಕ್ರತಮಗಳೆಂದು ಹೆಸರು. |

# ಸಂಕೇತಾಕ್ಷರ ಸೂಚಿ

## ಕನ್ನಡ

| | | |
|---|---|---|
| ಆ.ವಿ.ಪ್ರ. | : | ಆಖ್ಯಾತ ವಿಭಕ್ತಿ ಪ್ರತ್ಯಯ |
| ಆ.ಪ್ರ. | : | ಆಖ್ಯಾತ ಪ್ರತ್ಯಯ |
| ಕ.ಭಾ.ಭೂ. | : | ಕರ್ಣಾಟಕ ಭಾಷಾಭೂಷಣಂ |
| ಕ.ಸಾ.ಚ. | : | ಕನ್ನಡ ಸಾಹಿತ್ಯ ಚರಿತ್ರೆ |
| ಕಾ.ಸೂ.ಪ್ರ. | : | ಕಾಲಸೂಚಕ ಪ್ರತ್ಯಯ |
| ಕಾವ್ಯಾ | : | ಕಾವ್ಯಾವಲೋಕನಂ |
| ತೃ.ವಿ. | : | ತೃತೀಯಾ ವಿಭಕ್ತಿ |
| ದ್ವಿ.ವಿ. | : | ದ್ವಿತೀಯಾವಿಭಕ್ತಿ |
| ಪ್ರ.ವಿ. | : | ಪ್ರಥಮಾ ವಿಭಕ್ತಿ |
| ಪ್ರಾ.ಕ.ವ್ಯಾ. | : | ಪ್ರಾಚೀನ ಕನ್ನಡ ವ್ಯಾಕರಣ |
| ಭೂ.ಕಾ. | : | ಭೂತ ಕಾಲ |
| ಭ.ಕಾ. | : | ಭವಿಷ್ಯತ್ಕಾಲ |
| ವಿ.ಪ್ರ. | : | ವಿಭಕ್ತಿ ಪ್ರತ್ಯಯ |
| ವೈ.ಎ.ನಾ. | : | ವೈಯಾಕರಣಿ ಎರಡನೆಯ ನಾಗವಮ |
| ಶ.ಮ.ದ. | : | ಶಬ್ದಮಣಿ ದರ್ಪಣಂ |
| ಶ.ಶಾ. | : | ಶಬ್ದಾನುಶಾಸನಂ |
| ಶ.ಸ್ಮ. | : | ಶಬ್ದಸ್ಮೃತಿ |
| ಸಪ್ತ ವಿ. | : | ಸಪ್ತಮಿ ವಿಭಕ್ತಿ |
| ಹ.ಗ. | : | ಹಳಗನ್ನಡ |
| ಹೊ.ಗ. | : | ಹೊಸಗನ್ನಡ |

## ತೆಲುಗು

| | | |
|---|---|---|
| ಆಂ.ಭಾ.ವಿ. | : | ಆಂಧ್ರ ಭಾಷಾ ವಿಕಾಸಮು |
| ಆಂ.ವ್ಯಾ.ವಿ. | : | ಆಂಧ್ರ ವ್ಯಾಕರಣ ವಿಕಾಸಮು |
| ಆಂ.ಶ.ಚಿಂ. | : | ಆಂಧ್ರ ಶಬ್ದ ಚಿಂತಾಮಣಿ |
| ತೆ.ವ್ಯಾ.ವಿ. | : | ತೆಲುಗು ವ್ಯಾಕರಣ ವಿಕಾಸಮು |
| ಬಾ.ವ್ಯಾ. | : | ಬಾಲವ್ಯಾಕರಣಮು |